ಶ್ರೀರಾಘವೇಂದ್ರಯತಿವಿರಚಿತಃ

# ಆಥರ್ವಣೋಪನಿಷತ್ ಖಂಡಾರ್ಥಃ

(ಕನ್ನಡಾನುವಾದ ಸಹಿತ)



ಅನುವಾದ ಮತ್ತು ವಿವರಣೆ

ಪಂ. ವಾದಿರಾಜಾಚಾರ್ಯ ಕರಣಂ

ಶ್ರೀರಾಘವೇಂದ್ರಯತಿವಿರಚಿತ:

# ಆಥರ್ವಣೋಪನಿಷತ್ ಖಂಡಾರ್ಥಃ

(ಕನ್ನಡಾನುವಾದ ಸಹಿತ)

ಅನುವಾದ ಮತ್ತು ವಿವರಣೆ

**ಪಂ.ವಾದಿರಾಜಾಚಾರ್ಯ ಕರಣಂ**

ಸಂಶೋಧಕರು ವಿಶ್ವಮಧ್ವಮಹಾಪರಿಷತ್,

ಉತ್ತರಾದಿಮಠ, ಬೆಂಗಳೂರು

ಪ್ರಕಾಶಕರು

**ಶ್ರೀ ಗುರುರಾಜ ಅಸೋಸಿಯೇಶನ್ (ರಿ.)**

ಮಾಡೆಲ್‌ಹೌಸ್ ಬೀದಿ, ಬಸವನಗುಡಿ,

ಬೆಂಗಳೂರು-560 004.

ಶ್ರೀರಾಘವೇಂದ್ರಯತಿವಿರಚಿತ: ಆಥರ್ವಣೋಪನಿಷತ್ ಖಂಡಾರ್ಥ:

ಅನುವಾದ ಮತ್ತು ವಿವರಣೆ : ಪಂ.ವಾದಿರಾಜಾಚಾರ್ಯ ಕರಣಂ


ಪ್ರಕಾಶಕರು :
**ಶ್ರೀ ಗುರುರಾಜ ಅಸೋಸಿಯೇಶನ್ (ರಿ.)**
ಮಾಡೆಲ್ ಹೌಸ್ ಬೀದಿ, ಬಸವನಗುಡಿ, ಬೆಂಗಳೂರು-560 004.





ಪ್ರತಿ : 1000

ಪುಟಗಳು : 184

ಮುದ್ರಣ -
ವಾಗರ್ಥ, ನಂ.149, 8ನೇ ಕ್ರಾಸ್, ನರಸಿಂಹರಾಜ ಕಾಲೋನಿ,
ಬೆಂಗಳೂರು-560 019. ದೂರವಾಣಿ : 2242 7677

॥ ಶ್ರೀಮನ್ಮೂಲರಾಮೋ ವಿಜಯತೇ ॥

ಜಗದ್ಗುರುಶ್ರೀಮನ್ಮಧ್ವಾಚಾರ್ಯಮೂಲಮಹಾಸಂಸ್ಥಾನ

## ಶ್ರೀಮದುತ್ತರಾದಿಮಠಾಧೀಶರಾದ

## ಶ್ರೀ೧೦೦೮ ಶ್ರೀ ಸತ್ಯಾತ್ಮತೀರ್ಥ ಶ್ರೀಪಾದಂಗಳವರ

## ... ಅನುಗ್ರಹಸಂದೇಶ ...

"ಆರಣ್ಯಕೇಷು ಋತೇ ವಿಷ್ಣುಂ ನೈವಾऽನ್ಯತ್ ಕಿಂಚಿದುಚ್ಯತೇ" ಎಂಬ ಉಕ್ತಿಗೆ ಅನುಗುಣವಾಗಿ ಉಪನಿಷತ್ತುಗಳು ಭಗವಂತನ ಪಾರಮ್ಯವನ್ನು ಪ್ರತಿಪಾದನೆ ಮಾಡುವಷ್ಟು ಇನ್ನಾವ ವಿಷಯಗಳನ್ನೂ ಮುಖ್ಯವಾಗಿ ಪ್ರತಿಪಾದನೆ ಮಾಡುವುದಿಲ್ಲ "ಆರಣಕಮಾವರ್ತಯೇತ್ ಆರಣಕಮಾವರ್ತಯೇತ್" ಎಂಬಂತೆ ಎಲ್ಲರೂ ಆ ಭಗವಂತನ ಸಾಕ್ಷಾತ್ಕಾರಕ್ಕಾಗಿ ಉಪನಿಷತ್ತಿನ ಅಧ್ಯಯನವನ್ನು ಅವಶ್ಯವಾಗಿ ಮಾಡಬೇಕು. ಅಂತಹ ಉಪನಿಷತ್ತುಗಳಲ್ಲಿ ಒಂದಾದದ್ದು ಈ ಆಥರ್ವಣೋಪನಿಷತ್ತು.

'ಸೂತ್ರಾತ್ಮಾ ತೂಚ್ಯತೇ' ಎಂದೂ ಶ್ರೀಮದಾಚಾರ್ಯರು ತಿಳಿಸಿದಂತೆ 'ಯಥಾ ನದ್ಯಃ ಸ್ಯಂದಮಾನಾಃ' ಎಂಬ ಮಂತ್ರಕ್ಕೆ ಭಾಷ್ಯ ಬರೆಯುವಾಗ 'ವಾಯುಸ್ತು ತತ್ ಪೃಥಗ್‌ಜ್ಞಾತ್ವಾ' ಎಂಬ ವಚನಗಳಿಂದ ವಾಯುದೇವರ ಮಹಿಮೆಯನ್ನೂ ಬಹಳ ಸೊಗಸಾಗಿ ಇಲ್ಲಿ ನಿರೂಪಿಸಿದ್ದಾರೆ.

ಪರಾಪರವಿದ್ಯಾವಿಚಾರ, ಭಗವಂತ ಭೋಗಮಾಡುವ ಕ್ರಮ, ದೇವರ ಸೃಷ್ಟ್ಯಾದಿಸಾಮರ್ಥ್ಯ, 'ಬ್ರಹ್ಮ ವೇದ ಬ್ರಹ್ಮೈವ ಭವತಿ' ಎಂಬ ಶ್ರುತ್ಯರ್ಥ ರಮಣೀಯವಾಗಿ ಈ ಆಥರ್ವಣದಲ್ಲಿ, ಭಾಷ್ಯದಲ್ಲಿ, ಖಂಡಾರ್ಥದಲ್ಲಿ ನಿರೂಪಿತವಾಗಿದೆ.

ಜ್ಞಾನಿಗಳು ಟೀಕಾ-ಟಿಪ್ಪಣಿಗಳನ್ನು ಮಾಡುವ ಮುಖಾಂತರ ನಮ್ಮ ಅಧ್ಯಯನ ಮಾರ್ಗ ಸುಗಮವಾಗುವಂತೆ ಮಾಡಿದ್ದಾರೆ. ಹೀಗಾಗಿ ಜಿಜ್ಞಾಸುಗಳಿಗೆ ಆ ಜ್ಞಾನಿಗಳ ಮಾರ್ಗದರ್ಶನ ಅತಿ ಅನಿವಾರ್ಯ. ಇಲ್ಲದಿದ್ದರೆ ಪ್ರಪಾತ ಸೇರುವುದು ನಿಶ್ಚಿತ.

ಈ ನಿಟ್ಟಿನಲ್ಲಿ ಶ್ರೀಮದಾಚಾರ್ಯರ, ಶ್ರೀಮಟ್ಟೀಕಾಕೃತ್ಪಾದರ ಅನುಗ್ರಹ ಎಲ್ಲರಿಗೂ ಅನಿವಾರ್ಯ. ಇವರ ಉಪಕಾರವನ್ನು ಹೆಜ್ಜೆ ಹೆಜ್ಜೆಗೂ ಸ್ಮರಿಸುತ್ತಾ,

ಶ್ರೀಮದಾಚಾರ್ಯರ, ಶ್ರೀಟೀಕಾಕೃತ್ಪಾದರ ಪದಪದಗಳನ್ನೂ ದೇವರ ಪ್ರತಿಮೆಗಳಂತೆ ಪೂಜಿಸಿದ ಮಾಹಾತ್ಮರು ಶ್ರೀಮದ್ರಾಘವೇಂದ್ರ ಸ್ವಾಮಿಗಳು. ಶ್ರೀಮಟ್ಟೀಕಾಕೃತ್ಪಾದರು ರಚಿಸಿದ ಗ್ರಂಥಗಳನ್ನು ಪ್ರಚಾರಪಡಿಸುವ ಮುಖಾಂತರ ಶ್ರೀಹರಿಯನ್ನು ಸೇವಿಸುತ್ತಾ ತಮ್ಮ ಸಮಗ್ರ ಜೀವನವನ್ನೇ ಪಾವನಗೊಳಿಸಿಕೊಂಡ ಮಹಿತಾತ್ಮರು ಶ್ರೀಮದ್ರಾಘವೇಂದ್ರ ಸ್ವಾಮಿಗಳು.

ಉಪನಿಷತ್ಖಂಡಾರ್ಥವೇ ಮೊದಲಾದ ಗ್ರಂಥಗಳಲ್ಲಿ ಶ್ರೀಮದಾಚಾರ್ಯರ ಭಾಷ್ಯವನ್ನು ಸಂಗ್ರಹಿಸಿದ ಕೌಶಲ ಅದ್ಭುತವಾಗಿದೆ. ಮತ್ತು ಸುಬೋಧವೂ ಆಗಿದೆ.

ಪ್ರಕೃತ ಆಥರ್ವಣೋಪನಿಷತ್ ಮೂಲಮಂತ್ರಗಳನ್ನು, ಭಾಷ್ಯವನ್ನು ಮತ್ತು ಖಂಡಾರ್ಥವನ್ನು, ನಮ್ಮ ಪ್ರಿಯಶಿಷ್ಯನಾದ ಪಂ. ವಾದಿರಾಜಾಚಾರ್ಯ ಕರಣಂ ಇವನು ಸರಳವಾದ ರೀತಿಯಲ್ಲಿ ಕನ್ನಡೀಕರಿಸಿದ್ದಾನೆ. ಇವನಿಂದ ಇಂತಹ ಅನೇಕಕೃತಿಗಳು ಬೆಳಕಿಗೆ ಬರಲಿ. ಈ ಮುಖಾಂತರ ಜ್ಞಾನ-ಭಕ್ತಿ-ವೈರಾಗ್ಯಗಳನ್ನು ಅಸ್ಮದುಪಾಸ್ಯಮೂರ್ತಿ ಶ್ರೀಮನ್ಮೂಲರಾಮ-ದಿಗ್ವಿಜಯರಾಮ-ವೇದವ್ಯಾಸರು ಇವನಿಗೆ ಕರುಣಿಸಲಿ ಎಂದು ಪ್ರಾರ್ಥಿಸುತ್ತೇವೆ.

ಶ್ರೀಗುರುರಾಜ ಅಸೋಸಿಯೇಷನ್ ಸಂಸ್ಥೆಯು ಪ್ರತಿಬಾರಿಯೂ ಶ್ರೀರಾಘವೇಂದ್ರ ಸ್ವಾಮಿಗಳ ಆರಾಧನಾಪ್ರಯುಕ್ತವಾಗಿ ಅವರ ಗ್ರಂಥಗಳನ್ನು ಕನ್ನಡದಲ್ಲಿ ಸಮರ್ಪಿಸುತ್ತಿರುವುದು ಶ್ಲಾಘನೀಯವಾಗಿದೆ. ಈ ಸಂಸ್ಥೆಯ ಸೇವಕರಿಗೆ ಹಾಗು,

ಈ ಗ್ರಂಥದ ಪ್ರಕಾಶನಕ್ಕೆ ಆರ್ಥಿಕಸೇವೆಯನ್ನು ಸಲ್ಲಿಸಿದ ಶ್ರದ್ಧಾಳುಗಳೂ, ಉದಾರಿಗಳೂ ಆದ, ನಮ್ಮ ಶಿಷ್ಯರಾದ ಶ್ರೀಯುತ (ಚೈತ್ರ) ಎಂ.ಕೆ. ರಾಘವೇಂದ್ರರಾಯರಿಗೆ,

ಅಸ್ಮದುಪಾಸ್ಯಮೂರ್ತಿ ಧರ್ಮಕಾರ್ಯಗಳನ್ನು ಮಾಡಲು ಆರೋಗ್ಯ-ಐಶ್ವರ್ಯ-ಸಾಮರ್ಥ್ಯಗಳನ್ನು ಕರುಣಿಸಲಿ ಎಂದು ಪ್ರಾರ್ಥಿಸುತ್ತೇವೆ.

ಇತಿ ಶ್ರೀ ನಾರಾಯಣಸ್ಮರಣೆಗಳು

ಶ್ರೀಸತ್ಯಾತ್ಮತೀರ್ಥಶ್ರೀಪಾದಂಗಳವರು
ಶ್ರೀ ಉತ್ತರಾದಿಮಠ

ಶ್ರೀಕ್ಷೇತ್ರ ಸವಣೂರು
೧೮.೦೮.೨೦೦೦

# ಮುನ್ನುಡಿವ ಮುನ್ನ

ಆನಂದಮಜರಂ ನಿತ್ಯಮಜಮಕ್ಷಯಮಚ್ಯುತಮ್ ।
ಅನಂತಶಕ್ತಿಂ ಸರ್ವಜ್ಞಂ ನಮಸ್ಯೇ ಪುರುಷೋತ್ತಮ್ ॥

ಅನಂತಗುಣಪೂರ್ಣಾಯ ದೋಷದೂರಾಯ ವಿಷ್ಣವೇ ।
ನಮಃ ಶ್ರೀಪ್ರಾಣನಾಥಾಯ ಭಕ್ತಾಭೀಷ್ಟಪ್ರದಾಯಿನೇ ॥

ಸಂಸಾರ ಗರತುಂಬಿದ ಸಾಗರ. ವಿಷ ತುಂಬಿದ ಕಡಲು. ಕ್ಷುದ್ರಸಮುದ್ರವಿದು. ಇಲ್ಲಿ ಸಿಗುವ ವಿಷಯಗಳೆಲ್ಲವೂ ವಿಷಪ್ರಾಯ. ಭಗವಂತನ ಪ್ರಾಪ್ತಿ ಇಲ್ಲಿ ಆಗದು. ಆದರೆ ಹರಿಯನ್ನು ಪಡೆಯಲು ಇಲ್ಲಿಯೆ ಹವಣಿಸಬೇಕು. ಅದಕ್ಕಾಗಿ ತಾಳ್ಮೆ ಬೇಕು. ಆದರೆ ವಿಷಯಗಳ ಭವ್ಯತೆಯನ್ನು ಕಂಡು ನಾವೆಲ್ಲ ಬೆರಗಾಗಿದ್ದೇವೆ. ನಿಬ್ಬೆರಗಾಗಿದ್ದೇವೆ. ತಾಳ್ಮೆಗೆಟ್ಟಿದ್ದೇವೆ. ವಿಷಯಗಳಲ್ಲಿ ಮುಳುಗಿದ್ದೇವೆ. ತೇಲಿದ್ದೇವೆ. ಮೊದಲು ತೋರಿದ ಮಧುರವಿಷಯಸುಖಕ್ಕೆ ಮರುಳಾಗಿದ್ದೇವೆ. ಅರಳುಮರುಳಾಗಿದ್ದೇವೆ. ನಿರಂತರ ಮೇರೆ ಮೀರಿ ಬರುತ್ತಿರುವ ಅನರ್ಥಗಳ ಅಲೆಗಳಲ್ಲಿ ಸಿಲುಕಿಕೊಂಡಿದ್ದೇವೆ. ಅವುಗಳ ಸೆಳೆತದಿಂದ ತೊಳಲಾಡುತ್ತಿದ್ದೇವೆ. ಈ ತರಹತರಹದ ತೊಳಲಾಟಗಳನ್ನು ತೊಲಗಿಸಿಕೊಳ್ಳುವದು ಅತ್ಯಂತ ಅಸಾಧ್ಯ

ತರಣಿಗೆ ಎದುರಾಗಿ ತಮವು ಹೋಗಬಹುದೇನೋ, ಹರಿಯ ಕರುಣೆಗೆ ಎದುರಾಗಿ ಹೋಗುವ ಧೈರ್ಯ ಈ ಚರಾಚರ ಪ್ರಪಂಚದಲ್ಲಿ ಯಾವುದಕ್ಕೂ ಇಲ್ಲ. ನಿತ್ಯಸತ್ಯವಿದು.

ಪರಮಾತ್ಮನ ಕರುಣೆ ಕಂಡವರಿಗೆಲ್ಲ ಆಗುವದಿಲ್ಲ. ಹರಿಯನ್ನು ಕಂಡವರಿಗೆ ಮಾತ್ರ ಅವನ ಪ್ರಸಾದದ ಪ್ರಾಪ್ತಿಯಾಗುತ್ತದೆ. ಹರಿಯನ್ನು ಕಾಣುವುದೆಂದರೆ ಹೊರಗಣ್ಣಿನಿಂದ ರಾಮ-ಕೃಷ್ಣಾದಿರೂಪಗಳನ್ನು, ಜಡವಾದ ಪ್ರತಿಮೆಗಳನ್ನು ನೋಡುವುದು ಮಾತ್ರವಲ್ಲ. ಅಂತರಂಗದಲ್ಲಿ ರಂಗನ ಮಂಗಳ ರೂಪದ ಸಂದರ್ಶನವಾಗಬೇಕು. ಇದುವೆ ಅಪರೋಕ್ಷಜ್ಞಾನ. ಈ ಅಪರೋಕ್ಷಕ್ಕೆ ಅನಿವಾರ್ಯವಾದದ್ದು ಪರೋಕ್ಷಜ್ಞಾನ. ಈ ಪರೋಕ್ಷಜ್ಞಾನವನ್ನು

ಪಡೆಯಲು ವೇದ-ವೇದಾಂತಗಳಿಗೆ ಮೊರೆ ಹೋಗಬೇಕು. ಎಲ್ಲ ತತ್ತ್ವಗಳ ತಿರುಳು ವೇದವೇದಾಂತಗಳಲ್ಲಿ ಅಂತರ್ಲೀನವಾಗಿದೆ. ಈ ಉಪನಿಷತ್ತುಗಳನ್ನು ನಿಷ್ಠೆಯಿಂದ, ಶುದ್ಧಾಂತಃಕರಣರಾಗಿ ಅಧ್ಯಯನ ಮಾಡಿದವರಿಗೆ ಮಾತ್ರ ತತ್ತ್ವಜ್ಞಾನದ ಪ್ರಾಪ್ತಿಯಾಗುತ್ತದೆ.

ಈ ಉಪನಿಷತ್ತುಗಳು ಒಂದೊಂದು ವೇದಕ್ಕೆ ಸಂಬಂಧಪಟ್ಟಂತೆ ಅನೇಕ ವಿಭಾಗಗಳನ್ನೊಳಗೊಂಡಿವೆ. ಅವುಗಳಲ್ಲಿ ಪ್ರಧಾನವಾದವುಗಳು ಹತ್ತು ಮಾತ್ರ. ಈ ಹತ್ತು ಉಪನಿಷತ್ತುಗಳೂ ನಾಲ್ಕು ವೇದಗಳಿಗೆ ಸಂಬಂಧಪಟ್ಟಿವೆ. ಋಗ್ವೇದಕ್ಕೆ ಸಂಬಂಧಿಸಿದ ಉಪನಿಷತ್ತು ಐತರೇಯ. ಯಜುರ್ವೇದದಲ್ಲಿ ಕೃಷ್ಣ, ಶುಕ್ಲ ಎಂದು ಎರಡು ಶಾಖೆಗಳು. ಕೃಷ್ಣಯಜುರ್ವೇದಕ್ಕೆ ಸಂಬಂಧಿಸಿ ಉಪನಿಷತ್ತು ಎರಡು. ೧.ಕಾಠಕ ೨.ತೈತ್ತರೀಯ. ಶುಕ್ಲ-ಯಜುರ್ವೇದದ ಉಪನಿಷತ್ತುಗಳು ಎರಡು. ೧.ಈಶಾವಾಸ್ಯ ೨.ಬೃಹದಾರಣ್ಯ. ಸಾಮವೇದದ ಉಪನಿಷತ್ತುಗಳು ಎರಡು. ೧.ತಲವಕಾರೋಪನಿಷತ್ತು ೨.ಛಾಂದೋಗ್ಯೋಪನಿಷತ್ತು. ಅಥರ್ವಣ, ಮಾಂಡೂಕ, ಪಟ್ಪ್ರಶ್ನೆಗಳೆಂಬ ಮೂರು ಉಪನಿಷತ್ತುಗಳು ಆಥರ್ವಣವೇದಕ್ಕೆ ಸಂಬಂಧಿಸಿವೆ. ಹೀಗೆ ಒಟ್ಟಾರೆ ನಾಲ್ಕು ವೇದಗಳಿಗೆ ಸಂಬಂಧಿಸಿದಂತೆ ಪ್ರಸಿದ್ಧವಾದ ಉಪನಿಷತ್ತುಗಳು ಹತ್ತು.

ಉಪನಿಷತ್ತುಗಳನ್ನು ವೇದಾಂತ ಎಂತಲೂ ವ್ಯವಹರಿಸುತ್ತಾರೆ. ಅಂತ ಎಂದರೆ ಕೊನೆ. ಕೊನೆಯಲ್ಲಿದ್ದದ್ದು. ನಿರ್ಣಯ ಇದು ಯಾವಾಗಲೂ ಕೊನೆಯಲ್ಲಿರುತ್ತದೆ. ಆದ್ದರಿಂದ ಅಂತ ಎಂದರೆ ನಿರ್ಣಯ. ಸಮಸ್ತವೇದಾರ್ಥದ ಇತ್ಯರ್ಥವನ್ನು ಇದು ಮಾಡುತ್ತದೆ. ಹೀಗಾಗಿ ಇದು ವೇದಾಂತ.

ವೈದಿಕಕರ್ಮಕಾಂಡಕ್ಕೆ ವ್ಯತಿರೇಕವಾಗಿ ಒಂದು ವಿನೂತನವಾದ ಸಿದ್ಧಾಂತವನ್ನು ಸ್ಥಾಪಿಸಿದ ಘನತೆ ಉಪನಿಷತ್ತುಗಳಿಗಿದೆ ಎಂದು ಅನೇಕ ವಿಮರ್ಶಕರ ನಿಲುವು. ಅಬೋಧಪ್ರೇರಿತವಾದ ಇಂತಹ ನಿಲುವುಗಳಿಗೆ ಲೆಕ್ಕವಿಲ್ಲ.

ವೈದಿಕವಾದ ಕರ್ಮಕಾಂಡಕ್ಕೆ ಪೋಷಕವಾಗಿದೆ ಔಪನಿಷದವಾದ ಜ್ಞಾನಕಾಂಡ. ಇದು ಮುಮ್ಮಾತಿಗೂ ವಾಸ್ತವ. ಆಥರ್ವಣದಲ್ಲಿ ಈ ವಿಚಾರ ಬಹಳ ಸೊಗಸಾಗಿ ನಿರೂಪಿತವಾಗಿದೆ.

ಕೇವಲ ಕರ್ಮ ನೀರಸ. ಯಾವ ಪ್ರಯೋಜನವೂ ಅದರಿಂದಾಗದು. ಜೊತೆಗೆ ಹರಿಯ ಅರಿವು ಸೇರಿದಾಗ ಮಾತ್ರ ಅದು ರಸಪ್ರಾಪ್ತಿಗೆ ಸಾಧನವಾಗುತ್ತದೆ. 'ರಸೋ ವೈ ಸಃ' 'ರಸಂ ಹ್ಯೇವಾಯಂ ಲಬ್ಧ್ವಾನಂದೀ ಭವತಿ' ಸ್ವಯಂ ಪರಬ್ರಹ್ಮನೇ ರಸ. ಅಂತಹಾ ರಸದ ಪ್ರಾಪ್ತಿಯಿಂದ ಮನುಷ್ಯ ಆನಂದರಸಕಾರಂಜಿಯಾಗುತ್ತಾನೆ.

ಈ ಪರಬ್ರಹ್ಮನ ಅರಿವು ಉಪನಿಷತ್ತುಗಳಿಂದ ಝುಟಿತಿ ಆಗುತ್ತದೆ. ಹೀಗೆ ಉಪನಿಷತ್ತಿನ ಸಹಕಾರವಿದ್ದಾಗ ಕರ್ಮಕಾಂಡ ರಸಪ್ರಾಪ್ತಿಗೆ ಸಾಧನವಾಗುತ್ತದೆ. ಆದ್ದರಿಂದ ಕರ್ಮಕಾಂಡವಿದು ಉಪನಿಷತ್ಕಾಂಡದ ಅವಿಭಾಜ್ಯ ಅಂಗವಾಗಿದೆ. ಹೀಗೆ ವೈದಿಕಕರ್ಮಕಾಂಡಕ್ಕೆ ಪೋಷಕವಾಗಿದೆ ಉಪನಿಷತ್ಕಾಂಡ. ಇದು ಆಚಾರ್ಯರ ತೀರ್ಮಾನ.

ಒಂದರ್ಥದಲ್ಲಿ ಕರ್ಮಕಾಂಡದ ಪ್ರಧಾನ ಪ್ರತಿಪಾದ್ಯನೂ ಪರಮಾತ್ಮನೇ ಎಂಬುದು ನಿಶ್ಚಪ್ರಚ. 'ಸರ್ವೇ ವೇದಾ ಯತ್ಪದಮಾಮನಂತಿ' 'ವೇದೈಶ್ಚ ಸರ್ವೈರಹಮೇವ ವೇದ್ಯಃ' ಮೊದಲಾದ ಅನೇಕ ಶ್ರುತಿಸ್ಮೃತಿಗಳು ಇದೇ ನಿಲುವನ್ನು ಬಲಪಡಿಸುತ್ತವೆ.

ವೇದಾಂತ ಎಂದಾಕ್ಷಣ, 'ಬರೀ ವೇದಾಂತ ಹೇಳಬೇಡ' 'ನಿನ್ನ ವೇದಾಂತವನ್ನು ಕಟ್ಟಿ ಇಡು' 'ಸಾಕಿನ್ನು ವೇದಾಂತದ ಮಾತುಗಳು ವಾಸ್ತವವನ್ನು ಹೇಳು' ಮೊದಲಾದ ಮಾತುಗಳು ನೆನವಾಗುತ್ತವೆ. ಇವರ ದೃಷ್ಟಿಯಲ್ಲಿ ವೇದಾಂತ ಶುಷ್ಕ. ಬರಿದು. ಅಂತೆಯೇ ಶುಷ್ಕ ಶಬ್ದಜಾಲಗಳಿಂದ, ವ್ಯರ್ಥವಿತರ್ಕಗಳಿಂದ ಯುಕ್ತವಾಗಿದೆ. ಕಾಲಹರಣದ ಹೊರತು ವೇದಾಂತದಿಂದ ಯಾವ ಪ್ರಯೋಜನವೂ ಇಲ್ಲವೆಂದು ಇವರ ಭಾವ. ಅಲ್ಲದೇ ವೇದಾಂತವಿದು ಪಲಾಯನವಾದವನ್ನು ಪ್ರತಿಪಾದಿಸುತ್ತದೆಂದು ಇವರ ಹಾರ್ದ.

ಒಂದರ್ಥದಲ್ಲಿ ಇವರ ಹಾರ್ದ ಸಮುಚಿತ. ನಿರ್ಗುಣ, ನಿರಾಕಾರ, ನಿರ್ಧರ್ಮಕ, ನಿರಾನಂದ ಒಟ್ಟಾರೆ ನೀರಸವಾದ ಪರಬ್ರಹ್ಮಸ್ವರೂಪದ ಆವಿಷ್ಕಾರಕ್ಕಾಗಿ ಸಂಸಾರವನ್ನು ತೊರೆದು ಕಾಷಾಯಧಾರಿಗಳೋ, ನಿರಂಬರರೋ ಆಗಿ ಭಿಕ್ಷಾಟನ, ದೇಶಾಟನಗಳಿಂದ ಇಹವನ್ನು ದೇಹವನ್ನು ಅಲಕ್ಷ್ಯಮಾಡಿ ವ್ಯಾಪಾರರಹಿತರಾಗಿ ಕಾಲಕಳೆಯಬೇಕೆಂಬ ವ್ಯಾಖ್ಯಾನಗಳಿಂದ ರೋಸಿಹೋಗಿ ಈ ನಿಲುವಿಗೆ ಅವರು ತಲುಪಿದ್ದುದು ಆಶ್ಚರ್ಯವೇನಲ್ಲ.

ಈ ಜನ ನಿರ್ಗುಣ, ನೀರಸ ಬ್ರಹ್ಮವಾಗಲು ನಲಿವು ಒಲವುಗಳಿಗೆ ನಿಲಯವಾದ ಸಂಸಾರವನ್ನು ತೊರೆಯಲು ಸಿದ್ಧರಿಲ್ಲ. ಶುಷ್ಕಪ್ರಯೋಜನಕ್ಕಾಗಿ ಇಹವನ್ನು, ದೇಹವನ್ನು ಅಲಕ್ಷ್ಯಮಾಡಲು ತಯಾರಿಲ್ಲ. ಹೀಗಾಗಿ ವೇದಾಂತ ವಿಚಾರಗಳಿಂದ ಭಯಗೊಂಡು ಬಲು ದೂರವಾಗಿದ್ದಾರೆ.

ಏನೆಲ್ಲ ಸಾಧನೆಗಳನ್ನು ಮಾಡಿದರೂ ಕೊನೆಗೆ ಒಂದೇ ವಿಧವಾದ ಆನಂದ ಎಲ್ಲರಿಗೂ ಆಗುತ್ತದೆಂಬ ವ್ಯಾಖ್ಯಾನಗಳನ್ನು ನೋಡಿ ಈ ವೇದಾಂತಗಳ ಹಂಗು ನಮಗೇಕೆ ಎಂದು ಹಲವರು ವೇದಾಂತಗಳ ಸನಿಹ ಸುಳಿಯುತ್ತಿಲ್ಲ.

ವಿಷಯಗಳ ವಿಲಾಸದಲ್ಲಿ ಮುಳುಗಿ ಮಾಡಬಾರದ್ದನ್ನೆಲ್ಲ ಮಾಡುತ್ತಾ ಸಂಸಾರ ನೀರಸವೆಂದು ಬೋಧಿಸುವವರನ್ನು ಕಂಡು ಹಲವು ಜನ ವೇದಾಂತವನ್ನು ತಪ್ಪಾಗಿ ತಿಳಿದು ದೂರ ಸರಿದಿದ್ದಾರೆ.

ಕಾಲಕ್ರಮೇಣ ಈ ತರಹದ ಅಪಾರ್ಥಗಳು ಬೆಳದದ್ದು ಯಥಾರ್ಥವಾದರೂ ಶ್ರೀಮನ್ಮಧ್ವಾಚಾರ್ಯರು ಈ ಎಲ್ಲ ಅಪಾರ್ಥಗಳಿಗೆ ತೆರೆ ಎಳೆದಿದ್ದಾರೆ. ಈ ಎಲ್ಲ ದುರಭಿಪ್ರಾಯಗಳನ್ನು ದೂರಸರಿಸಲು ಧರೆಯಲ್ಲಿ ಅವತರಿಸಿದ ಸಮೀರರಿವರು.

'ಸಂಸಾರದಲ್ಲಿಯೇ ಇದ್ದು ತಮ್ಮ ತಮ್ಮ ಕರ್ತವ್ಯಕರ್ಮಗಳನ್ನು ಆಚರಿಸುತ್ತಲೇ ಧರ್ಮಕ್ಕೆ ವಿರುದ್ಧವಾಗದ, ಅಂತೆಯೇ ನರಸವಾದ, ಜೀವನಕ್ಕೆ ಹಾನಿಕಾರಕವಾಗದ ಸುಖಗಳನ್ನು ಅನುಭವಿಸುತ್ತಲೇ

ಅಪಾಯಕಾರಿಗಳಾದ, ವಿಷತುಲ್ಯವಾದ, ಹೆಚ್ಚಿನ ವಿಷಯಗಳನ್ನು ತ್ಯಜಿಸುತ್ತಾ ಶೋಕದ ಸೊಂಕಿಲ್ಲದ, ಸಂತಸರಸ ತುಂಬಿ ತುಳುಕುವ, ನಮ್ಮ ನಮ್ಮ ಸಾಧನೆ-ಯೋಗ್ಯತೆಗೆ ಅನುಗುಣವಾದ ಪರಮಪದವನ್ನು ಹೇಗೆ ತಲುಪಬಹುದೆಂದು ವೇದಾಂತಗಳು ಬೋಧಿಸುತ್ತವೆ' ಎಂಬ ವಾದವನ್ನು ತಮ್ಮ ಅಮೋಘ ತರ್ಕಬಲದಿಂದ, ಪರಿಪೂರ್ಣವಾದ ಪ್ರಮಾಣಗಳ ಮೂಲಕ ಆಚಾರ್ಯರು ಪ್ರತಿವಾದಿಸಿದ್ದಾರೆ.

ಆಚಾರ್ಯರ ಭಾಷ್ಯವನ್ನು ಪರಿತ್ಯಜಿಸಿ ಉಪನಿಷತ್ತುಗಳ ಅರ್ಥವನ್ನು ತಿಳಿಯುತ್ತ ಹೋದರೆ ಉಪನಿಷದಭಿಮಾನಿಗಳಾದ ದೇವತೆಗಳಿಗೆ ಎದೆಗುದಿ ಎನಿಸುತ್ತದೆ. ಓದುಗರಿಗೂ ಆ ಅರ್ಥ ಎದೆ ತಟ್ಟುವದಿಲ್ಲ. ಶ್ರೀಮಟ್ಟೀಕಾಕೃತ್ಪಾದರ ಟೀಕೆ ಇಲ್ಲದಿದ್ದರೆ ಎದೆ ತಟ್ಟುವ ಆ ಅರ್ಥ ಮನದಟ್ಟಾಗುವದಿಲ್ಲ. ಹೀಗಾಗಿ ಟೀಕಾಕೃತ್ಪಾದರ ಟೀಕೆಯ ಮೂಲಕ ಆಚಾರ್ಯರ ಭಾಷ್ಯದ ಭವ್ಯತೆಯನ್ನು ತಿಳಿಯುತ್ತಾ ಉಪನಿಷತ್ತುಗಳನ್ನು ಅಧ್ಯಯನ ಮಾಡಿದವರಿಗೆ ಉಪನಿಷತ್ತುಗಳು ಶುಷ್ಕವಲ್ಲ. ಅಲೌಕಿಕಾನಂದರಸಕಾರಂಜಿಗಳೆಂದು ಅವಗತವಾಗುತ್ತದೆ. ಆಮೇಲೆ ಅಲ್ಲಿ ನೆಟ್ಟ ದೃಷ್ಟಿಯನ್ನು ಹಿಂತೆಗೆದು ಕೊಳ್ಳಲಾರ. ಇಲ್ಲಿ ಪ್ರತಿಪಾದಿತವಾದ ದೇವರ, ದೇವರು ಸೃಜಿಸಿದ ಚರಾಚರ ಪ್ರಪಂಚದ ಅರಿವನ್ನು ಮಾಡಿಕೊಳ್ಳಲು ಮುಂದಾಗುತ್ತಾನೆ. ತತ್ತ್ವಜ್ಞಾನವನ್ನು ಪಡೆಯುವಲ್ಲಿ ಇರುವ ಹಿಗ್ಗನ್ನು ಕಂಡು ನಿಬ್ಬೆರಗಾಗುತ್ತಾನೆ.

ಹೀಗೆ ವೇದಾಂತದ ಸನಿಹ ಸೇರುತ್ತಾನೆ. ಉಪ ನಿಷಣ್ಣನಾಗುತ್ತಾನೆ. ಒಂದು ಬಾರಿ ಇಲ್ಲಿಯ ರಸದ ರುಚಿಯನ್ನು ನೋಡಿದವಗೆ ಮೊದಲು ಸರಸವಾಗಿ ಕಂಡ ಸಂಸಾರ ಸಪ್ಪೆ ಎನಿಸುತ್ತದೆ. ಕ್ರಮೇಣ ಸಂಸಾರದ ರುಚಿಯನ್ನು ಜರಿಯುತ್ತಾನೆ. ಕಾಲಕಳೆದಂತೆ, ಬ್ರಹ್ಮಜ್ಞಾನ ಮನದಟ್ಟಾದಂತೆ ಸಂಸಾರ ಮರೆಯಾಗುತ್ತ ಹೋಗುತ್ತದೆ. ಮರ್ತ್ಯನಾದ ತಾನು ಅಮರ್ತ್ಯನಾಗಿ ಮೆರೆಯುತ್ತಾನೆ. ಕಂಗೆಡಿಸುವ ಸಂಸಾರವೆಂಬ ಹೆಗ್ಗಡಲನ್ನು ದಾಟಿ ಜಗಜ್ಜನನಿಯಾದ ಹರಿಯ ಮಡಲಿಗೆ ಸೇರಿ ಶೋಕದ ಸೊಂಕಿಲ್ಲದ ಸುಖವನ್ನು ಸದಾ ಅನುಭವಿಸುತ್ತಿರುತ್ತಾನೆ.

ಯದ್ಯಪಿ ಈ ಉಪನಿಷತ್ತಿಗೆ ಟೀಕಾಕೃತ್ಪಾದರ ಟೀಕೆಯ ಕೊರತೆ ಇದೆ. ಅದು ನಮ್ಮ ದೌರ್ಭಾಗ್ಯವಾದರೂ ಅವರ ನುಡಿ-ನುಡಿಗಳನ್ನು ಹೊತ್ತಿರುವ ಟಿಪ್ಪಣಿಗಳಿಗೆ ಕೊರತೆ ಇಲ್ಲ. ಇದು ನಮ್ಮ ಸೌಭಾಗ್ಯವೇ. ಈಗಾಗಲೇ ಈ ಕೃತಿ ಹನ್ನೆರಡು ವ್ಯಾಖ್ಯಾನಗಳೊಂದಿಗೆ ಶ್ರೀ ಉತ್ತರಾದಿಮಠದ ವಿಶ್ವಮಧ್ವಮಹಾ ಪರಿಷತ್ತಿನಿಂದ ಮುದ್ರಿತವಾಗಿದೆ.

ಇದಿಷ್ಟು ವೇದ-ವೇದಾಂತಗಳು, ಟೀಕಾ-ಟಿಪ್ಪಣಿಗಳು ನಮಗೆ ಮಾಡುವ ಉಪಕಾರ. ಮರೆಯಲಾಗದ ಉಪಕಾರ. ಹೀಗಾಗಿ ಇವುಗಳ ಅಧ್ಯಯನ, ಶ್ರವಣ ಅನಿವಾರ್ಯ.

ಹಿರಿಯರ ವ್ಯಾಖ್ಯಾನಗಳು ಅಧ್ಯಯನವನ್ನು ಪೂರ್ಣಗೊಳಿಸುತ್ತವೆ. ಈ ನಿಟ್ಟಿನಲ್ಲಿ ಕಲಿಯುಗ ಕಲ್ಪತರು-ಕಾಮಧೇನುಗಳಾದ ಶ್ರೀಮದ್ರಾಘವೇಂದ್ರರು ವಿರಚಿಸಿದ ಗ್ರಂಥಗಳೆಲ್ಲವೂ ಸಾಧಕರಿಗೆ ಅತಿಶಯವಾದ ಉಪಕಾರಮವನ್ನು ಮಾಡುತ್ತವೆ. ಖಂಡಾರ್ಥಗಳಂತೂ ಉಪನಿಷತ್ತುಗಳ ಅರ್ಥವನ್ನು ಸುಲಲಿತವಾಗಿ ತಿಳಿಸುತ್ತವೆ.

ಇವರು ಸಾಹಿತ್ಯ-ವ್ಯಾಕರಣ-ತರ್ಕ-ಮೀಮಾಂಸಾ-ಯೋಗ-ಧರ್ಮಶಾಸ್ತ್ರ-ವೇದಾಂತ ಮೊದಲಾದ ಎಲ್ಲ ಶಾಸ್ತ್ರಗಳಲ್ಲಿಯೂ ತಲಸ್ಪರ್ಶಿಪಾಂಡಿತ್ಯವನ್ನು ಪಡೆದಿದ್ದರು ಎನ್ನುವದು ಇವರ ಪ್ರತಿಯೊಂದೂ ಕೃತಿಗಳಲ್ಲಿ ಎದ್ದು ತೋರುತ್ತದೆ. ತಮ್ಮ ಅದ್ಭುತ ಪವಾದಗಳಿಂದ ಮಧ್ವಸಿದ್ಧಾಂತವನ್ನು ವಿಶ್ವವಿದಿತವಾಗುವಂತೆ ಮಾಡಿದವರು ಶ್ರೀರಾಘವೇಂದ್ರಸ್ವಾಮಿಗಳು.

ಪ್ರಕೃತ ಆಥರ್ವಣೋಪನಿಷತ್ ಖಂಡಾರ್ಥದ ಕನ್ನಡ ಅನುವಾದ ನಿಮ್ಮ ಕೈ ಸೇರಿದ ಗ್ರಂಥ. ಇಲ್ಲಿ ಉಪನಿಷತ್ತಿಗೆ ಮತ್ತು ಭಾಷ್ಯಕ್ಕೂ ಕನ್ನಡದಲ್ಲಿ ಅನುವಾದವಿದೆ.

ಈ ಗ್ರಂಥವು ಗುರುರಾಜ ಅಸೋಸಿಯೇಷನ್ ವತಿಯಿಂದ ಪ್ರಕಾಶಿತವಾಗುತ್ತಿದೆ. ಇದರ ಸದುಪಯೋಗವನ್ನು ಎಲ್ಲರೂ ಪಡೆದುಕೊಳ್ಳಬೇಕಾಗಿ ಸವಿನಯ ಪ್ರಾರ್ಥನೆ.

## ಕೃತಜ್ಞತಾಸಮರ್ಪಣೆ

ಸದಾ ಪಾಠ-ಪ್ರವಚನಗಳಲ್ಲಿ, ಮಧ್ವಮತಸಿದ್ಧಾಂತದ ಪ್ರಚಾರದಲ್ಲಿ, ವಿಷ್ಣುಪೂಜಾರೂಪವಾದ ಕರ್ಮಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದರೂ ಈ ಪ್ರಯತ್ನಕ್ಕೆ ಆಶೀರ್ವಚನವನ್ನು ನೀಡಿರುವ, ವಾತ್ಸಲ್ಯಮೂರ್ತಿಗಳಾದ, ವಿದ್ಯಾಗುರುಗಳ (ಶ್ರೀ ೧೦೦೮ ಶ್ರೀ ಸತ್ಯಾತ್ಮತೀರ್ಥ ಶ್ರೀಪಾದಂಗಳವರು) ಸನ್ನಿಧಿಗೆ ಮತ್ತೆ ಮತ್ತೆ ಅನಂತಾನಂತ ಶಿರಸಾಷ್ಟಾಂಗ ಪ್ರಣಾಮಗಳು.

ಬಿಡುವಿಲ್ಲದೇ ಭಾಗವತಾದಿಸಚ್ಛಾಸ್ತ್ರಗಳ ಪಾಠ-ಪ್ರವಚನಗಳಲ್ಲಿ ನಿರತರಾದ, ತಮ್ಮ ಅಮೂಲ್ಯ ಸಲಹೆಗಳಿಂದ ನಮ್ಮ ಏಳಿಗೆಗೆ ಕಾರಣರಾದ ಶ್ರೀಜಯತೀರ್ಥವಿದ್ಯಾಪೀಠದ ಕುಲಪತಿಗಳಾದ ಪಂ.ಪೂ.ಆಚಾರ್ಯರವರಿಗೆ (ಶ್ರೀ ರಂಗಾಚಾರ್ಯ ಗುತ್ತಲ) ಸಾಷ್ಟಾಂಗ ಪ್ರಣಾಮಗಳು.

ಯಾವಾಗಲೂ ಪಾಠ-ಪ್ರವಚನದಲ್ಲಿ ತಲ್ಲೀನರಾದರೂ, ಬೇಸರವಿಲ್ಲದೇ ನಮ್ಮ ಅಭಿವೃದ್ಧಿಗೆ ಪದೇ ಪದೇ ಎಚ್ಚರ ನೀಡುತ್ತಿರುವ, ಗುರುಗಳಾದ ಸತ್ಯಧ್ಯಾನವಿದ್ಯಾಪೀಠದ ಕುಲಪತಿಗಳಾದ ಪಂ.ಪೂ ಆಚಾರ್ಯರಿಗೆ (ಶ್ರೀ ವಿದ್ಯಾಸಿಂಹಾಚಾರ್ಯ ಮಾಹುಲಿ) ಸಾಷ್ಟಾಂಗ ಪ್ರಣಾಮಗಳು.

ಈ ಸಾರ್ಥಕವಾದ ಸೇವೆಯನ್ನು ಮಾಡುವಂತೆ ನನಗೆ ಆಜ್ಞೆ ಮಾಡಿದ ಶ್ರೀಜಯತೀರ್ಥವಿದ್ಯಾಪೀಠದ ಪ್ರಾಂಶುಪಾಲರಾದ ಪಂ.ಪೂ ಶ್ರೀಸತ್ಯಧ್ಯಾನಾಚಾರ್ಯರಿಗೆ ಸಾಷ್ಟಾಂಗಪ್ರಣಾಮಗಳು.

ಈ ಗ್ರಂಥ ಅಚ್ಚುಕಟ್ಟಾಗುವಂತೆ ಜೋಡಣೆ ಮಾಡಿದ ಪಂ. ಮಹಿದಾಸಾಚಾರ್ಯ ಜೋಷಿ ಇವರಿಗೆ ಧನ್ಯವಾದಗಳು.

ಶ್ರೀಮದ್ರಾಘವೇಂದ್ರ ಸ್ವಾಮಿಗಳ ಗ್ರಂಥಗಳನ್ನು ಅವರ ಆರಾಧನಾ ಪ್ರಯುಕ್ತ ವಿದ್ವಾಂಸರುಗಳಿಂದ ಕನ್ನಡದಲ್ಲಿ ಅನುವಾದ ಮಾಡಿಸುತ್ತಾ ಪ್ರಕಾಶನಗೊಳಿಸಲು ಮುಂದಾಗಿ ಅವರ ಆರಾಧನೆಯನ್ನು ಸಾರ್ಥಕವಾದ ರೀತಿಯಲ್ಲಿ ಮಾಡುತ್ತಿರುವ ಶ್ರೀಗುರುರಾಜ ಅಸೋಸಿಯೇಷನ್ ಸಂಸ್ಥೆಯ ಪದಾಧಿಕಾರಿಗಳಿಗೆ, ಹಾಗು ಗ್ರಂಥಪ್ರಕಾಶನಕ್ಕೆ ಆರ್ಥಿಕ ಸಹಾಯ ಮಾಡಿದ,

ಶ್ರದ್ಧಾಳುಗಳಾದ, ಉದಾರಿಗಳೂ ಆದ (ಚೈತ್ರ) ಶ್ರೀ ಎಂ.ಕೆ ರಾಘವೇಂದ್ರರಾಯರಿಗೆ ಹರಿವಾಯುಗುರುಗಳು ವಿಶೇಷವಾಗಿ ಅನುಗ್ರಹಿಸಲಿ ಎಂದು ದೇವರಲ್ಲಿ ಪ್ರಾರ್ಥಿಸುತ್ತೇನೆ.

ಸಕಾಲದಲ್ಲಿ ಓರಣವಾಗಿ ಮುದ್ರಿಸಿದ ವಾಗರ್ಥ ಮುದ್ರಣಾಲಯದವರಿಗೆ ಕೃತಜ್ಞತೆಗಳು.

ತಪ್ಪುವುದು ಸಣ್ಣವರ ಸ್ವಭಾವ. ಕ್ಷಮಿಸುವುದು ಹಿರಿಯರ ಸ್ವಭಾವ. ಹಿರಿಯರ ಸ್ವಭಾವಕ್ಕೆ, ಅವರ ಔದಾರ್ಯಕ್ಕೆ ಶಿರಬಾಗಿ ನಮಿಸುತ್ತಾ, ಸವಿನಯವಾಗಿ ಪ್ರಾರ್ಥಿಸುತ್ತೇನೆ.

ಇತಿ ವಿದ್ವದ್ವಿಧೇಯ
ವಾದಿರಾಜ ಕರಣಮ್

## ಪ್ರಕಾಶಕರ ನುಡಿ

ಗುರುಸಾರ್ವಭೌಮರಾದ ಶ್ರೀಮದ್ರಾಘವೇಂದ್ರರು ಕಲಿಯುಗದ ಕಲ್ಪತರುಗಳಾಗಿದ್ದಾರೆ. ಇವರು ವ್ಯಾಸಸಾಹಿತ್ಯಕ್ಕೆ ಮಾಡಿದ ಸೇವೆ ಅಸಾಧಾರಣವಾಗಿದೆ. ಕನ್ನಡದಲ್ಲಿಯೂ ಕೃತಿಗಳನ್ನು ರಚಿಸುವ ಮುಖಾಂತರ ದಾಸಸಾಹಿತ್ಯಕ್ಕೂ ಮೆರುಗು ತಂದಿದ್ದಾರೆ. ಇವರ ವ್ಯಾಖ್ಯಾನಗಳು ವಿದ್ವನ್ಮಾನ್ಯವಾಗಿ, ಜಿಜ್ಞಾಸುಗಳಿಗೆ ಬೋಧಕವಾಗಿವೆ. ಇವರು ನಿರ್ಮಿಸಿದ ವ್ಯಾಖ್ಯಾನಸರೋವರದಲ್ಲಿ ದಾಹವನ್ನು ತೀರಿಸಿಕೊಳ್ಳದವನಿಲ್ಲ. ಇಂತಹ ಜ್ಞಾನಿವರೇಣ್ಯರ ಸಂಪ್ರೀತಿಗಾಗಿ ಶ್ರೀ ಗುರುರಾಜ ಅಸೋಸಿಯೇಶನ್ ಪ್ರತಿದಿನವೂ ಉತ್ತಮ ವಿದ್ವಾಂಸರಿಂದ ಶಾಸ್ತ್ರಗಳ ಪಾಠ-ಪ್ರವಚನವನ್ನು ಏರ್ಪಡಿಸಿ ಯಥಾಶಕ್ತಿ ಶ್ರೀ ಗುರುರಾಜರ ಕೈಂಕರ್ಯವನ್ನು ನೆರವೇರಿಸುತ್ತಿದೆ. ಇದರೊಡನೆ ಪ್ರತಿವರ್ಷವೂ ಶ್ರೀ ರಾಯರ ಆರಾಧನಾ ಮಹೋತ್ಸವದ ಶುಭಾವಸರದಲ್ಲಿ ಶ್ರೀರಾಯರ ಕೃತಿಯೊಂದನ್ನು ವಿದ್ವಾಂಸರ ಮೂಲಕ ಅನುವಾದ ಮಾಡಿಸಿ ಬರೆಸುವುದು ಈ ಸಂಸ್ಥೆಯ ಶುಭ ಸಂಪ್ರದಾಯವಾಗಿದೆ. ಈಗಾಗಲೇ ನಮ್ಮ ಸಂಸ್ಥೆಯಿಂದ ಪ್ರಕಾಶನಗೊಂಡ ಹತ್ತಾರು ಅಮೂಲ್ಯ ಗ್ರಂಥಗಳು ಸುಜನರ ಕೈಸೇರಿ ತತ್ತ್ವಜ್ಞಾನದ ಬೆಳಕು ನೀಡಿರುವ ಬಗ್ಗೆ ನಮಗೆ ಸಂತೋಷವಿದೆ.

ಪ್ರಕೃತ, ಈ ತನಕ ಕನ್ನಡಕ್ಕೆ ಅನುವಾದವಾಗದ ಶ್ರೀರಾಯರ ಆಥರ್ವಣೋಪನಿಷತ್ ಖಂಡಾರ್ಥವನ್ನು ಸರಳ ಕನ್ನಡದಲ್ಲಿ ಅನುವಾದ ಮಾಡಿಕೊಡಲು ಪಂ. ವಾದಿರಾಜಾಚಾರ್ಯ ಕರಣಂ ಅವರನ್ನು ಪ್ರಾರ್ಥಿಸಿದೆವು. ಅವರು ಶ್ರೀರಾಘವೇಂದ್ರ ಸ್ವಾಮಿಗಳ ಈ ಕೃತಿಯನ್ನು ಶ್ರದ್ಧಾ-ಭಕ್ತಿಗಳಿಂದ ಸರಳವಾಗಿ ಕನ್ನಡಭಾಷೆಗೆ ಅನುವಾದ ಮಾಡಿ ಉಪಕರಿಸಿದ್ದಾರೆ. ಅವರಿಗೆ ನಮ್ಮ ಆದರಪೂರ್ವಕ ವಂದನೆಗಳು.

ಈ ಗ್ರಂಥಕ್ಕೆ ನಮ್ಮ ಮೇಲಿನ ಅಭಿಮಾನದಿಂದ ಜಗದ್ಗುರು ಶ್ರೀಮನ್ಮಧ್ವಾಚಾರ್ಯ ಮೂಲ ಮಹಾಸಂಸ್ಥಾನ, ಶ್ರೀ ಉತ್ತರಾದಿ ಮಠಾಧೀಶರಾದ ಪರಮಪೂಜ್ಯ ಶ್ರೀ ೧೦೦೮ ಶ್ರೀ ಸತ್ಯಾತ್ಮತೀರ್ಥ ಶ್ರೀಪಾದಂಗಳವರು ಅನುಗ್ರಹ ಸಂದೇಶವನ್ನು ಕರುಣಿಸಿ, ನಮ್ಮನ್ನು

ಆಶೀರ್ವದಿಸಿದ್ದಾರೆ. ಇಂತಹ ಪರಮಪೂಜ್ಯ ಶ್ರೀಪಾದರಿಗೆ ಅನಂತ ಶಿರಸಾಷ್ಟಾಂಗ ಪ್ರಣಾಮಗಳು.

ಈ ಗ್ರಂಥದ ಮುದ್ರಣಕ್ಕೆ ಆರ್ಥಿಕ ಸಹಾಯವನ್ನಿತ್ತ ಶ್ರೀಯುತ (ಚೈತ್ರ) ಎಂ.ಕೆ. ರಾಘವೇಂದ್ರರಾಯರಿಗೆ ಹಾಗೂ ಅವರ ಕುಟುಂಬ ವರ್ಗಕ್ಕೆ ಹರಿ-ವಾಯುಗಳು ವಿಶೇಷವಾಗಿ ಅನುಗ್ರಹಿಸಲಿ ಎಂದು ಪ್ರಾರ್ಥಿಸುತ್ತೇವೆ.

ಮುದ್ರಣಕಾರ್ಯವನ್ನು ಅಚ್ಚುಕಟ್ಟಾಗಿ ಮಾಡಿಕೊಟ್ಟ ವಾಗರ್ಥ ಬಳಗಕ್ಕೂ ನಮ್ಮ ಅಭಿನಂದನೆಗಳು.

22-08-2010 ಬೆಂಗಳೂರು

ಆಡಳಿತ ಮಂಡಲಿ
ಶ್ರೀ ಗುರುರಾಜ ಅಸೋಸಿಯೇಶನ್ (ರಿ.)
ಮಾಡಲ್‌ಹೌಸ್ ಬೀದಿ
ಬೆಂಗಳೂರು.

ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತಂ

# ॥ ಆಥರ್ವಣೋಪನಿಷದ್ಭಾಷ್ಯಮ್ ॥

**ಆನಂದಮಜರಂ ನಿತ್ಯಮಜಮಕ್ಷಯಮಚ್ಯುತಮ್ ।**
**ಅನಂತಶಕ್ತಿಂ ಸರ್ವಜ್ಞಂ ನಮಸ್ಯೇ ಪುರುಷೋತ್ತಮಮ್ ॥**

ವಿಧವಿಧವಾದ ದುಃಖಗಳ ದರ್ಶನದಿಂದ ಸಾಧಕನಾದವನು ಸೋತುಹೋಗಿದ್ದಾನೆ. ಮುಕ್ತಿಯ ದಾರಿಯೇ ಅವನಿಗೆ ಕಾಣಿಸುತ್ತಿಲ್ಲ. ಮುಕ್ತಿಯನ್ನು ನೀಡಲು ಸಮರ್ಥವಾದದ್ದು ಭಗವಂತನ ಜ್ಞಾನ ಮಾತ್ರ. ಆ ಜ್ಞಾನ ವೇದೋಪನಿಷತ್ತುಗಳಿಂದ ಮಾತ್ರ ಸಾಧ್ಯವಾಗುತ್ತದೆ. ಆದರೇ ಅನೇಕ ಆಚಾರ್ಯರು ಈ ಉಪನಿಷತ್ತುಗಳನ್ನು ಮತ್ತು ವೇದಗಳನ್ನು ಅನ್ಯಥಾ ವ್ಯಾಖ್ಯಾನಿಸಿದ್ದಾರೆ. ಹೀಗಾಗಿ ಯಥಾರ್ಥವಾದ ಜ್ಞಾನವನ್ನು ನೀಡಲು ಉಪನಿಷದಾದಿಗಳು ಅಸಮರ್ಥವಾಗಿವೆ. ಈ ಉಪನಿಷತ್ತುಗಳ ಸರಿಯಾದ ಅರ್ಥವನ್ನು ಸಾಧಕರಿಗೆ ಬೋಧಿಸಿ ಅವರನ್ನು ಉದ್ಧರಿಸುವ ಉದ್ದೇಶದಿಂದ ಶ್ರೀಮದಾನಂದತೀರ್ಥಭಗವತ್ಪಾದರು ಪ್ರಕೃತ ಆಥರ್ವಣೋಪನಿಷತ್ತಿಗೆ ಭಾಷ್ಯವನ್ನು ರಚಿಸುತ್ತಿದ್ದಾರೆ.

ಮೊದಲು ಮಂಗಳಾಚರಣೆಯನ್ನು ಮಾಡುತ್ತಿದ್ದಾರೆ. ಯದ್ಯಪಿ ಅಸುರಾವೇಶ ಸರ್ವಥಾ ಇಲ್ಲದಿರುವ ಜೀವೋತ್ತಮರಾದ ಶ್ರೀಮದಾಚಾರ್ಯರಿಗೆ ವಿಘ್ನಗಳೇ ಇಲ್ಲ. ಆದರೂ ಶಿಷ್ಯಶಿಕ್ಷಣಕ್ಕಾಗಿ ಈ

ಮಂಗಳಾಚರಣೆಯನ್ನು ಮಾಡುತ್ತಿದ್ದಾರೆ. ಅಥವಾ ಓದುಗರಿಗೆ ಯಾವ ವಿಘ್ನಗಳೂ ಬರದಿರಲಿ ಎಂಬ ಉದ್ದೇಶದಿಂದ ಮಂಗಳಾಚರಣೆಯನ್ನು ಮಾಡುತ್ತಿದ್ದಾರೆ ಎಂದು ತಿಳಿಯಬೇಕು. ಶ್ರೀಹರಿಯನ್ನು ವಂದಿಸುವುದೇ ಮಂಗಳಾಚರಣೆ. ಇದಕ್ಕಿಂತಲೂ ಹಿರಿದಾದ ಮಂಗಳಾಚರಣೆ ಮತ್ತೊಂದಿಲ್ಲ. ಭಗವಂತ ಈ ಆಥರ್ವಣೋಪನಿಷತ್ತಿನಲ್ಲಿ ಉಕ್ತವಾದ ಗುಣಗಳಿಂದ ವಿಶಿಷ್ಟನಾಗಿದ್ದಾನೆ ಎಂದು ತಿಳಿದು ಅವನನ್ನು ನಮಸ್ಕರಿಸುತ್ತಿದ್ದಾರೆ.

ಭಗವಂತ ಆನಂದಸ್ವರೂಪನಾಗಿದ್ದಾನೆ. ಮುಪ್ಪು ಮೊದಲಾದ ದೋಷಗಳಿಂದ ದೂರನಾಗಿದ್ದಾನೆ. ನಿತ್ಯನಾಗಿದ್ದಾನೆ. ಭಗವಂತ ಸ್ವರೂಪತಃ ನಿತ್ಯ. ಇಷ್ಟುಮಾತ್ರವಲ್ಲ. ಅವನ ಗುಣಗಳು ಕೂಡಾ ನಿತ್ಯವಾಗಿವೆ. ನಿತ್ಯವಾಗಿದ್ದರೂ ಗುಣಗಳಿಗೆ ಹ್ರಾಸ ಮೊದಲಾದ ದೋಷಗಳಿಲ್ಲ. ಅವನ ಶಕ್ತಿಗೆ ಕೊನೆ ಇಲ್ಲ. ಆ ಶಕ್ತಿ ನಷ್ಟವಾಗುವುದೂ ಇಲ್ಲ. ಸರ್ವಜ್ಞಾನ ಸಂಪನ್ನನಾಗಿದ್ದಾನೆ. ಹೀಗಾಗಿ ಪುರುಷೋತ್ತಮನಾಗಿದ್ದಾನೆ. ಅವನಿಗೆ ಆದರಪೂರ್ವಕವಾದ ನಮಸ್ಕಾರಗಳು.

'ಆನಂದರೂಪಂ' ಎಂಬ ಉಪನಿಷದ್ವಾಕ್ಯದಿಂದ ಭಗವಂತ ಆನಂದಸ್ವರೂಪ ಎಂದು ಹೇಳಿದ್ದಾರೆ. 'ನಿತ್ಯಂ ವಿಭುಂ' ಎಂಬಲ್ಲಿ ನಿತ್ಯತ್ವವು ಉಕ್ತವಾಗಿದೆ. 'ಸ ಬಾಹ್ಯಾಭ್ಯಂತರೋ ಹ್ಯಜಃ' ಎಂಬಲ್ಲಿ ಅಜತ್ವವು ಉಕ್ತವಾಗಿದೆ. ಅಜನಾದದ್ದರಿಂದ, ನಿತ್ಯನಾದದ್ದರಿಂದ ಅಜರತ್ವವು ಕೂಡಾ ಉಕ್ತವಾದಂತೆ ಆಯಿತು. 'ಅವ್ಯಯಂ' ಎಂಬ ಮಾತಿನಿಂದ ಅಚ್ಯುತತ್ವವು ನಿರೂಪಿತವಾಗಿದೆ. 'ಯಥಾ ಸುದೀಪ್ತಾತ್' ಎಂಬ ಮಾತಿನಿಂದ ಭಗವಂತನ ಅನಂತಶಕ್ತಿಯು ಪ್ರತಿಪಾದಿತವಾಗಿದೆ. 'ಯಃ ಸರ್ವಜ್ಞಃ' ಎಂಬ ಮಾತಿನಿಂದ ಸರ್ವಜ್ಞತ್ವವು ಸಿದ್ಧವಾಗುತ್ತದೆ. ಹೀಗೆ ಉಪನಿಷದುಕ್ತವಾದ ಗುಣಗಳಿಂದ ಮಂಡಿತನಾದ ಶ್ರೀಹರಿಯನ್ನು ಸ್ತುತಿಸುತ್ತಾ ಆಥರ್ವಣಕ್ಕೆ ಭಾಷ್ಯ ಬರಯುತ್ತಿದ್ದೇನೆಂಬುದನ್ನು ತಿಳಿಸುತ್ತಾ ಮಂಗಳಾಚರಣೆಯನ್ನೂ ಮಾಡುತ್ತಲಿದ್ದಾರೆ.

# ॥ ಅಥ ಆಥರ್ವಣೋಪನಿಷತ್ ॥

## ॥ ಪ್ರಥಮಃ ಖಂಡಃ ॥

### ಉಪನಿಷತ್

**ಬ್ರಹ್ಮಾ ದೇವಾನಾಂ ಪ್ರಥಮಃ ಸಂಬಭೂವ**
**ವಿಶ್ವಸ್ಯ ಕರ್ತಾ ಭುವನಸ್ಯ ಗೋಪ್ತಾ ।**
**ಸ ಬ್ರಹ್ಮವಿದ್ಯಾಂ ಸರ್ವವಿದ್ಯಾಪ್ರತಿಷ್ಠಾ-**
**ಮಥರ್ವಾಯ ಜ್ಯೇಷ್ಠಪುತ್ರಾಯ ಪ್ರಾಹ ॥ ೧.೧ ॥**

**ಉಪನಿಷದರ್ಥ-** ಬ್ರಹ್ಮದೇವರು ಎಲ್ಲ ದೇವತೆಗಳಿಗೂ ಹಿರಿಯರಾಗಿ ವಾಸುದೇವರೂಪಿಯಾದ ಪರಮಾತ್ಮನಿಂದ ಜನಿಸಿದರು. ಭಗವಂತನಿಂದ ಆಜ್ಞಪ್ತರಾಗಿ ಜಗತ್ತನ್ನು ಸೃಷ್ಟಿಸಿದರು. ಹೀಗಾಗಿ ಜಗತ್ತಿಗೆ ತಂದೆಯಂತ ಕಾರಣರಾದರು. ತಾವು ಸೃಜಿಸಿದ ಜಗತ್ತನ್ನು ದೇವರ ಅನುಮತಿಯಿಂದಲೇ ಜ್ಞಾನದಾನಾದಿಗಳಿಂದ ಸಂರಕ್ಷಿಸಿದರು. ಈ ಬ್ರಹ್ಮದೇವರು ಎಲ್ಲ ವಿದ್ಯೆಗಳಿಗೆ ಆಸರೆಯಾದ ಬ್ರಹ್ಮವಿದ್ಯೆಯನ್ನು ವೈವಸ್ವತ ಮನ್ವಂತರದಲ್ಲಿ ತನಗೆ ಮೊದಲಿಗನಾಗಿ ಜನಿಸಿದ ಆಥರ್ವಣರಿಗೆ ಉಪದೇಶಿಸಿದರು.

### ಭಾಷ್ಯ

**ಮನೋರ್ವೈವಸ್ವತಸ್ಯಾದಾವಥರ್ವಾ ಬ್ರಹ್ಮಣೋಽಜನಿ ।**
**ಮಿತ್ರಶ್ಚ ವರುಣಶ್ಚಾಥೋ ಪ್ರಹೇತಿರ್ಹೇತಿರೇವ ಚ ॥**

**ಬ್ರಹ್ಮಣಃ ಪ್ರಥಮೇ ಕಲ್ಪೇ ಶಿವಃ ಪ್ರಥಮಜಃ ಸ್ಮೃತಃ ।**
**ಸನಕಾದ್ಯಾಸ್ತು ವಾರಾಹೇ ಬ್ರಹ್ಮಾ ವಿಷ್ಣೋಃ ಸುತೋಽಗ್ರಜಃ ॥**
**ಇತಿ ಬ್ರಹ್ಮಾಂಡೇ ॥**

ವೈವಸ್ವತಮನ್ವಂತರದ ಪ್ರಾರಂಭದಲ್ಲಿ ಬ್ರಹ್ಮದೇವರಿಂದ ಮೊದಲಿಗೆ ಅಥರ್ವಋಷಿಗಳು ಜನಿಸಿದರು. ಅನಂತರ ಮಿತ್ರ, ವರುಣ, ಪ್ರಹೇತಿ, ಹೇತಿ ಎಂಬುವವರು ಜನಿಸಿದರು.

ಬ್ರಹ್ಮದೇವರ ಮೊದಲ ಕಲ್ಪದಲ್ಲಿ ಅಂದರೇ ಪಾದ್ಮಕಲ್ಪದಲ್ಲಿ ರುದ್ರದೇವರು ಮೊದಲಿಗೆ ಜನಿಸಿದರು. ಸನಕಾದಿಗಳು ವಾರಾಹಕಲ್ಪದಲ್ಲಿ ಮೊದಲಿಗರಾಗಿ ಬ್ರಹ್ಮದೇವರಿಂದ ಜನಿಸಿದರು. ಬ್ರಹ್ಮದೇವರೇ ಭಗವಂತನ ಮೊದಲ ಮಕ್ಕಳು ಎಂದು ತಿಳಿಯಬೇಕು. ಇದು ಬ್ರಹ್ಮಾಂಡಪುರಾಣದ ವಚನ.

### ಶ್ರೀಮದ್ರಾಘವೇಂದ್ರಯತಿವಿರಚಿತಃ ಖಂಡಾರ್ಥಃ

ಅನಂತಗುಣಪೂರ್ಣಾಯ ದೋಷದೂರಾಯ ವಿಷ್ಣವೇ ।
ನಮಃ ಶ್ರೀಪ್ರಾಣನಾಥಾಯ ಭಕ್ತಾಭೀಷ್ಟಪ್ರದಾಯಿನೇ ॥

ಭಗವಂತ ಗುಣಗಳಿಂದ ಪರಿಪೂರ್ಣನಾಗಿದ್ದಾನೆ. ಆ ಗುಣಗಳಿಗೆ ಮಿತಿ ಇಲ್ಲ. ನಾಶವೂ ಇಲ್ಲ. ಯಾವ ದೋಷಗಳೂ ದೇವರಲ್ಲಿ ಇಲ್ಲ. ಎಲ್ಲ ಜಗತ್ತನ್ನು ಪ್ರವೇಶಿಸಿದ್ದಾನೆ ಆದ್ದರಿಂದ ವಿಷ್ಣುನಾಮಕನಾಗಿದ್ದಾನೆ. ಲಕ್ಷ್ಮೀದೇವಿಗೆ ಮತ್ತು ಪ್ರಾಣದೇವರಿಗೆ ಸ್ವಾಮಿಯಾಗಿದ್ದಾನೆ. ಎಲ್ಲ ಭಕ್ತರ ಅಭೀಷ್ಟಗಳನ್ನು ಪ್ರದಾನಮಾಡುವವನಾಗಿದ್ದಾನೆ. ಇಂತಹ ಸರ್ವೋಪಕಾರಕನಾದ ಪರಮಾತ್ಮನಿಗೆ ಆದರಪೂರ್ವಕವಾದ ನಮಸ್ಕಾರಗಳು.

### ಖಂಡಾರ್ಥ

ಅಧಿಕಾರಿಣಾಮಖಿಲಕ್ಲೇಶನಿವೃತ್ತಿವಿಶಿಷ್ಟಪರಮಾನಂದಾವಾಪ್ತಯೇ ಬ್ರಹ್ಮವಿದ್ಯಾಂ ವಕ್ತುಕಾಮೋ 'ಯೋ ಹ ವಾ ಅವಿದಿತಾರ್ಷ...' ಇತ್ಯಾದಿಶ್ರುತೇಃ ಋಷಿದೇವತಾಚ್ಛಂದೋಜ್ಞಾನಸ್ಯ ಆವಶ್ಯಕತ್ವಾತ್ 'ಯಯಾ ತದಕ್ಷರಮಧಿಗಮ್ಯತೇ' ಇತ್ಯಾದ್ಯುಕ್ತ್ಯಾ ದೇವತಾಜ್ಞಾನಸ್ಯ, ಅಕ್ಷರಪರಿಗಣನಯಾ ತ್ರಿಷ್ಟುಬಾದಿಚ್ಛಂದೋಜ್ಞಾನಸ್ಯ ಚ ಸುಕರತ್ವಾತ್ ಋಷಿಪರಂಪರಾಮೇವಾಹ- ಬ್ರಹ್ಮೇತ್ಯಾದಿನಾ ॥೧.೧॥

ಅಧಿಕಾರಿಗಳ ಕ್ಲೇಶಗಳೆಲ್ಲ ನಿವೃತ್ತವಾಗಬೇಕು. ಅವರಿಗೆ ಸ್ವರೂಪಾನಂದದ ಲಾಭವಾಗಬೇಕು. ಇದಕ್ಕೆ ಉಪಾಯಭೂತವಾದದ್ದು ಬ್ರಹ್ಮವಿದ್ಯಾ. ಇಂತಹ ಬ್ರಹ್ಮವಿದ್ಯೆಯನ್ನು ಹೇಳುವ ಬಯಕೆ ವೇದಪುರುಷನಿಗೆ ಇದೆ.

ಅದನ್ನು ಉಪದೇಶಿಸುವ ಮೊದಲು ಈ ಉಪನಿಷತ್ತಿನ ಋಷ್ಯಾದಿಗಳನ್ನು ತಿಳಿಯಬೇಕು. ಋಷಿ-ದೇವತಾ-ಛಂದಸ್ಸುಗಳನ್ನರಿಯದೇ ಯಾಗಮಾಡುವುದು-ಮಾಡಿಸುವುದು, ಅಧ್ಯಯನ ಮಾಡುವುದು- ಮಾಡಿಸುವುದು ಅನರ್ಥಕ್ಕೆ ಕಾರಣವಾಗುತ್ತದೆ. ಎಂದು ಸ್ವಯಂ ಬ್ರಾಹ್ಮಣಗಳೇ ತಿಳಿಸುತ್ತವೆಯಾದ್ದರಿಂದ ಋಷ್ಯಾದಿಗಳನ್ನರಿಯುವುದು ಆವಶ್ಯಕ. ಇವುಗಳಲ್ಲಿಯೂ ಅಕ್ಷರಗಳನ್ನು ಎಣಿಸುವುದರಿಂದ ಛಂದಸ್ಸನ್ನು ತಿಳಿಯಬಹುದು. 'ಯಯಾ ತದಕ್ಷರಮಧಿಗಮ್ಯತೇ' ಎಂಬ ಮಾತಿನಿಂದ ದೇವತೆಯ ಜ್ಞಾನವೂ ಸುಲಭವಾಗಿ ಆಗುತ್ತದೆ. ಹೀಗಾಗಿ ಇವೆರಡನ್ನು ಬಿಟ್ಟು ಋಷಿಗಳನ್ನು ಈ ಮಂತ್ರವು ತಿಳಿಸುತ್ತಿದೆ. ಪ್ರಧಾನವಾಗಿ ಎಲ್ಲ ವಿದ್ಯೆಗಳಿಗೂ ಋಷಿಗಳಾದವರು ಹಯಗ್ರೀವದೇವರು. ತದನಂತರ ರಮಾದೇವಿಯರು ಎಂದು ತಿಳಿಯಬೇಕು. ಪ್ರಕೃತ ಈ ಆಥರ್ವಣೋಪನಿಷತ್ತಿಗೆ ಬ್ರಹ್ಮದೇವರು ಕೂಡಾ ಋಷಿಗಳಾಗಿದ್ದಾರೆ ಎಂಬುದಾಗಿ ತಿಳಿಯಬೇಕು.

## ಖಂಡಾರ್ಥ

ಬ್ರಹ್ಮಾ ಚತುರ್ಮುಖಃ ದೇವಾನಾಂ ಶೇಷವೀಂದ್ರಾದೀನಾಂ ಪ್ರಥಮಃ ದೇವೇಭ್ಯಃ ಪ್ರಾಥಮಿಕಃ ಸನ್ ವಿಷ್ಣೋಸ್ಸಕಾಶಾತ್ ಸಂಬಭೂವ ಜಜ್ಞೇ । ತಸ್ಯ ಮಹಿಮಾನಮಾಹ- **ವಿಶ್ವಸ್ಯೇತಿ** ॥ ಗೋಪ್ತಾ ರಕ್ಷಕಃ । ಕರ್ತೃತ್ವಾದ್ಯುಕ್ತಿಃ ತಸ್ಯಾಽಪ್ರತ್ಯದ್ಯೋತನಾರ್ಥಾ । ಏತದುಕ್ತಿಪ್ರಾಪ್ತಸ್ವಾತಂತ್ರ್ಯಭ್ರಮನಿರಾಸಾಯ ವಿಷ್ಣುತಃ ಸಂಭವೋಕ್ತಿರ್ಭಾಷ್ಯೇ । ಸ ಬ್ರಹ್ಮಾ ಸರ್ವವಿದ್ಯಾಪ್ರತಿಷ್ಠಾಂ ಸರ್ವಾ ವಿದ್ಯಾಃ ಪ್ರತಿತಿಷ್ಠಂತಿ ಯಸ್ಯಾಂ ತಾಂ ಯಜ್ಜ್ಞಾನೇ ಸರ್ವವಿದ್ಯಾಃ ವಿದಿತಫಲಾಃ ಭವಂತಿ ತಾದೃಶೀಂ ಬ್ರಹ್ಮವಿದ್ಯಾಂ, ವೇತ್ತಿ ಅನಯೇತಿ ವಿದ್ಯಾಂ ಬ್ರಹ್ಮಪ್ರಮಿತಿಜನಕಶಬ್ದರಾಶಿಂ ಜ್ಯೇಷ್ಠಪುತ್ರಾಯ ವೈವಸ್ವತಮನ್ವಂತರೇ ಪ್ರಥಮತೋ ಜಾತಾಯಾಥರ್ವಾಯ ಅಥರ್ವನಾಮಕಾಯ, ಅಕಾರಾಂತತ್ವಂ ಛಾಂದಸಂ, ಪ್ರಾಹ ॥೧.೧॥

**ಅನುವಾದ-** ಚತುರ್ಮುಖ ಬ್ರಹ್ಮದೇವರು ಶೇಷ-ಗರುಡಮೊದಲಾದ ದೇವತೆಗಳಿಗೆ ಮೊದಲಿಗರಾಗಿ ಭಗವಂತನಿಂದ ಜನಿಸಿದರು. ಈ ಬ್ರಹ್ಮದೇವರ

ಮಹಿಮೆಯನ್ನು 'ವಿಶ್ವಸ್ಯ...' ಇತ್ಯಾದಿ ಮಾತುಗಳು ತಿಳಿಸುತ್ತಿವೆ. ಗೋಪ್ತಾ ಎಂದರೇ ರಕ್ಷಕ ಎಂದು ಅರ್ಥ. ಬ್ರಹ್ಮದೇವರಲ್ಲಿ ಆಪ್ತತ್ವವೆಂಬ ಉಪದೇಶಕರಲ್ಲಿ ಇರಬೇಕಾದ ಗುಣವಿದೆ ಎಂಬುದನ್ನು ತಿಳಿಸುವುದಕ್ಕಾಗಿ ಅವರಿಗೆ ಕರ್ತೃತ್ವ-ಗೋಪ್ತೃತ್ವಗಳನ್ನು ಹೇಳಿದ್ದಾರೆ. ಬ್ರಹ್ಮದೇವರು ಜಗತ್ತಿಗೆ ಕರ್ತೃವಾಗಿದ್ದಾರೆ. ಮತ್ತು ಗೋಪ್ತೃಗಳಾಗಿದ್ದಾರೆ ಎಂದು ಉಪನಿಷತ್ತಿನಲ್ಲಿ ತಿಳಿಸಿದ್ದಾರೆ. ಹೀಗೆ ತಿಳಿಸುವುದರಿಂದ ಬ್ರಹ್ಮದೇವರು ಸ್ವತಂತ್ರವಾಗಿ ಜಗತ್ತಿನ ಕರ್ತಾ ಗೋಪ್ತಾ ಎಂಬ ಶಂಕೆ ಬರುತ್ತದೆ. ಈ ಶಂಕೆಯನ್ನು ಪರಿಹರಿಸಲು ಬ್ರಹ್ಮದೇವರು ವಿಷ್ಣುವಿನಿಂದ ಜನಿಸಿದ್ದಾರೆ ಎಂದು ಭಾಷ್ಯದಲ್ಲಿ ಆಚಾರ್ಯರು ಹೇಳಿದ್ದಾರೆ.

ಯಾವ ವಿದ್ಯೆಯ ಅಧ್ಯಯನದಿಂದ ಎಲ್ಲ ವಿದ್ಯೆಗಳ ಫಲಗಳು ಪ್ರಾಪ್ತವಾಗುತ್ತವೋ, ಉಳಿದ ಎಲ್ಲ ವಿದ್ಯೆಗಳಿಗೆ ಯಾವ ವಿದ್ಯೆಯು ಆಶ್ರಯವಾಗಿದೆಯೋ ಅಂತಹ ಪರಮಾತ್ಮನ ಯಥಾರ್ಥವಾದ ಜ್ಞಾನಕ್ಕೆ ಜನಕವಾದ ಬ್ರಹ್ಮವಿದ್ಯೆಯನ್ನು ಬ್ರಹ್ಮದೇವರು, ವೈವಸ್ವತ ಮನ್ವಂತರದಲ್ಲಿ ಮೊದಲಿಗರಾಗಿ ಜನಿಸಿದ ಅಥರ್ವಣರಿಗೆ ಉಪದೇಶಿಸಿದರು.

'ವೇತ್ತಿ ಅನಯಾ ಇತಿ ವಿದ್ಯಾ' 'ಇದರಿಂದ ತಿಳಿಯಲ್ಪಡುತ್ತದೆ' ಎಂಬ ವ್ಯುತ್ಪತ್ತಿಯಿಂದ ವಿದ್ಯಾ ಎಂಬ ಶಬ್ದವು ನಿಷ್ಪನ್ನವಾಗಿದೆ. ಬ್ರಹ್ಮಪ್ರಮಿತಿಜನಕ-ವಾದ ಶಬ್ದರಾಶಿ ಎಂದು ಇದಕ್ಕೆ ಸರಿಯಾದ ಅರ್ಥ.

ಅಥರ್ವನ್ ಎಂದು ಈ ಶಬ್ದ ನಾಂತವಾಗಿ ಲೋಕದಲ್ಲಿ ಪಠಿತವಾಗಿದೆ. ಆದರೇ ಉಪನಿಷತ್ತಿನಲ್ಲಿ ಅಕಾರಾಂತವಾಗಿ ಪಠಿತವಾಗಿದೆ. ಈ ಪ್ರಯೋಗವು ಛಾಂದಸವೆಂಬುದಾಗಿ ತಿಳಿಯಬೇಕು. ॥೧.೧॥

ಉಪನಿಷತ್

ಅಥರ್ವಣೇ ಯಾಂ ಪ್ರವದೇತ ಬ್ರಹ್ಮಾ-
ಅಥರ್ವಾ ತಾಂ ಪುರೋವಾಚಾಂಗಿರೇ ಬ್ರಹ್ಮವಿದ್ಯಾಮ್ ।

**ಸ ಭಾರದ್ವಾಜಾಯ ಸತ್ಯವಹಾಯ ಪ್ರಾಹ**
**ಭರದ್ವಾಜೋऽಂಗಿರಸೇ ಪರಾವರಾಮ್ ॥೧.೨॥**

**ಉಪನಿಷದರ್ಥ-** ಯಾವ ವಿದ್ಯೆಯನ್ನು ಬ್ರಹ್ಮದೇವರು ಅಥರ್ವರಿಗೆ ಉಪದೇಶಿಸಿದರೋ ಆ ಬ್ರಹ್ಮವಿದ್ಯೆಯನ್ನೇ ಅಥರ್ವರು ಮೊದಲಿಗೆ ಅಂಗಿರರಿಗೆ ಉಪದೇಶಿಸಿದರು. ಆ ಅಂಗಿರರು ಭರದ್ವಾಜರ ಮಕ್ಕಳಾದ ಸತ್ಯವಹರಿಗೆ ಉಪದೇಶಿಸಿದರು. ಆ ಭರದ್ವಾಜರು ವಿವಕ್ಷಾಭೇದದಿಂದ ಪರವೂ ಅಪರವೂ ಆದ ಆ ಬ್ರಹ್ಮವಿದ್ಯೆಯನ್ನು ಅಂಗಿರಸರಿಗೆ ಉಪದೇಶಿಸಿದರು.

## ಖಂಡಾರ್ಥ

ಪ್ರವದೇತ ಪ್ರಾವದದಿತ್ಯರ್ಥಃ । ವ್ಯತ್ಯಯೇನ ಲಙರ್ಥೇ ಲಿಙ್ । ಭಾಸನೋಪಸಂಭಾಷೇತ್ಯಾದಿನಾತ್ಮನೇಪದಮ್ । ಸ್ಪಷ್ಟಮವದದಿತ್ಯರ್ಥಃ । ತಾಂ ಬ್ರಹ್ಮವಿದ್ಯಾಂ ಅಥರ್ವಾ ಅಂಗಿರೇ ಅಂಗಿರನಾಮಕಾಯ ಮುನಯೇ ಪುರಾ ಪೂರ್ವಮುವಾಚ । ಸ ಅಂಗಿರನಾಮಕೋ ಭಾರದ್ವಾಜಾಯ ಭರದ್ವಾಜಪುತ್ರಾಯ ನಾಮ್ನಾ ಸತ್ಯವಹಾಯ ಪ್ರಾಹ । ತಾಂ ಬ್ರಹ್ಮವಿದ್ಯಾಮಿತ್ಯನುಷಂಗಃ । ಭರದ್ವಾಜಃ ಅಂಗಿರಸೇ ಅಂಗಿರೋನಾಮಕಾಯ ತಾಂ ಬ್ರಹ್ಮವಿದ್ಯಾಂ ಪ್ರಾಹೇತ್ಯನುಷಂಗಃ । ಬ್ರಹ್ಮವಿದ್ಯಾಂ ವಿಶಿನಷ್ಟಿ- **ಪರಾವರಾಮಿತಿ** ॥ ಪರಾ ಚ ಸಾ ಅವರಾ ಚ ಪರಾವರಾ ತಾಂ ಪರಾವರಾಮ್ । ಏಕೈವ ವಿದ್ಯಾ ವಿವಕ್ಷಾಭೇದೇನ ಪರಾ ಅವರಾ ಚ ಭವತಿ । ಸಾ ಚ ಋಗಾದಿರೂಪೇತ್ಯಗ್ರೇ ವ್ಯಕ್ತಾ ॥ ೨ ॥

**ಅನುವಾದ-** ಪ್ರವದೇತ ಎಂಬುದು ಲಿಙಲಕಾರ. ಆದರೇ ಲಿಙರ್ಥವನ್ನು ಪ್ರಕೃತ ಹೇಳಬಾರದು. ಕಿಂತು ಲಙಲಕಾರದ ಅರ್ಥವನ್ನೇ ಹೇಳಬೇಕು. ಲಕಾರವ್ಯತ್ಯಾಸಮಾಡಿ ಇಲ್ಲಿ ಪ್ರಯೋಗಿಸಿದ್ದಾರೆ. ಮತ್ತು ಇದು ಪರಸ್ಮೈಪದ. ಪ್ರಕೃತ 'ಭಾಸನೋಪಸಂಭಾಷಾ- ಜ್ಞಾನಯತ್ನವಿಮತ್ಯುಪಮಂತ್ರಣೇಷು ವದಃ' ಎಂಬ ಸೂತ್ರಕ್ಕೆ ಅನುಗುಣವಾಗಿ ಆತ್ಮನೇಪದವಾಗಿದೆ ಎಂದು ತಿಳಿಯಬೇಕು. ಅವದತ್ ಎಂದರೇ ಹೇಳಿದರು ಎಂದು ಅರ್ಥ. ಪ್ರ ಎಂಬ ಉಪಸರ್ಗವಿದ್ದದ್ದರಿಂದ ಪ್ರಕೃತ ಸ್ಪಷ್ಟವಾಗಿ ಅರ್ಥವಾಗುವಂತೆ ಹೇಳಿದರು

ಎಂದು ಅರ್ಥವಾಗುತ್ತದೆ. ಆ ಬ್ರಹ್ಮವಿದ್ಯೆಯನ್ನು ಅಥರ್ವರು ಅಂಗಿರ ಎಂಬ ಹೆಸರಿನ ಮುನಿಗಳಿಗೆ ಪೂರ್ವದಲ್ಲಿಯೇ ಉಪದೇಶಿಸಿದರು. ಆ ಅಂಗಿರನಾಮಕರಾದ ಮುನಿಗಳು ಸತ್ಯವಹನಾಮಕರಾದ ಭರದ್ವಾಜರ ಮಕ್ಕಳಿಗೆ ಆ ಬ್ರಹ್ಮವಿದ್ಯೆಯನ್ನು ಉಪದೇಶಿಸಿದರು. ಆ ಭರದ್ವಾಜರು ಅಂಗಿರಸ್ ನಾಮಕರಾದವರಿಗೆ ಆ ಬ್ರಹ್ಮವಿದ್ಯೆಯನ್ನು ಉಪದೇಶಿಸಿದರು ಎಂದು ಅನ್ವಯ ಮಾಡಿಕೊಳ್ಳಬೇಕು.

"ಪರಾವರಾಮ್" ಎಂಬುದು ಬ್ರಹ್ಮವಿದ್ಯೆಗೆ ವಿಶೇಷಣವಾಗಿದೆ. ಈ ವಿದ್ಯೆಯು ಪರವೂ ಆಗಿದೆ ಅಪರವೂ ಆಗಿದೆ. ಆದ್ದರಿಂದ ಪರಾವರವೆನಿಸಿದೆ. ಒಂದೇ ವಿದ್ಯೆಯು ಭಿನ್ನವಾದ ವಿವಕ್ಷಾದಿಂದ ಪರವೂ ಅಪರವೂ ಆಗುತ್ತದೆ. ಆ ವಿದ್ಯೆಯು ಋಗಾದಿರೂಪವಾದದ್ದು ಎಂದು ಮುಂದೆ ಸ್ಪಷ್ಟವಾಗಿದೆ.

**ಉಪನಿಷತ್**

**ಶೌನಕೋ ಹ ವೈ ಮಹಾಶಾಲಃ ಅಂಗಿರಸಂ ವಿಧಿವದುಪಸನ್ನಃ ಪಪ್ರಚ್ಛ । ಕಸ್ಮಿನ್ನು ಭಗವೋ ವಿಜ್ಞಾತೇ ಸರ್ವಮಿದಂ ವಿಜ್ಞಾತಂ ಭವತೀತಿ ॥೧.೩ ॥**

**ಉಪನಿಷದರ್ಥ-** ಶುನಕರ ಮಕ್ಕಳಾದ ಶೌನಕರು ಮಹಾಶಾಲರಾಗಿದ್ದರು. ಇದು ಇತಿಹಾಸ ಪ್ರಸಿದ್ಧವಾಗಿದೆ. ಅವರು ವಿಧ್ಯುಕ್ತಪ್ರಕಾರವಾಗಿ, ಸಮಿತ್ಪಾಣಿಗಳಾಗಿ ಬ್ರಹ್ಮವಿದ್ಯೆಯನ್ನು ಪಡೆಯಬೇಕೆಂಬ ಹಂಬಲದಿಂದ ಅಂಗಿರಸರನ್ನು ಸಮೀಪಿಸಿದರು. ಪೂಜ್ಯಪಾದರೇ ! ಯಾವುದನ್ನು ತಿಳಿದಾಗ ಎಲ್ಲವೂ ತಿಳಿದಂತೆ ಆಗುವುದೋ ಆ ವಿದ್ಯೆಯನ್ನು ನನಗೆ ಉಪದೇಶ ಮಾಡಿರಿ ಎಂದು ಕೇಳಿದರು.॥೧.೩॥

**ಖಂಡಾರ್ಥ**

**ಶೌನಕಃ** ಶುನಕಪುತ್ರಃ ಮಹಾಶಾಲಃ, ಪ್ರತ್ಯಬ್ದಂ ಯಜ್ಞಕೃನ್ಮಹಾಶಾಲ ಇತ್ಯುಕ್ತಃ, 'ಪ್ರತ್ಯಬ್ದಂ ಯಜ್ಞಕೃತ್ಸಮ್ಯಕ್ ಮಹಾಶಾಲಃ ಪ್ರಕೀರ್ತಿತಃ' ಇತಿ ಛಾಂದೋಗ್ಯ-ಬಾಷ್ಯೋಕ್ತೇಃ, ವಿಧಿವದ್ ವಿಧ್ಯುಕ್ತಪ್ರಕಾರೇಣ ಉಪಸನ್ನಃ ಉಪಸತ್ತಿಂ ಪ್ರಾಪ್ತಃ

ಅಂಗಿರಸಂ ಪಪ್ರಚ್ಛ । ಹೇ ಭಗವಃ ಭಗವನ್, ಪೂಜ್ಯಾದೇತಿ ಯಾವತ್, 'ಮತುವಸೋ ರು ಸಂಬುದ್ದೌ ಛಂದಸಿ' ಇತಿ ರುಃ । ಸರ್ವಮಿದಂ ಕರ್ಮದೇವತಾದಿಕಂ ಮಯಾ ಜ್ಞಾತಂ ವರ್ತತೇ । ತದ್‌ಜ್ಞಾನಂ ಕಸ್ಮಿನ್ ಜ್ಞಾತೇ ಸಫಲಂ ಭವತಿ ? ಯದ್‌ಜ್ಞಾನಾರ್ದಂ ಸತ್ ಮೋಕ್ಷಾಖ್ಯ-ಫಲವದ್ಭವತಿ ತನ್ಮೇ ಬ್ರೂಹೀತಿ ಪಪ್ರಚ್ಛೇತಿ ಯೋಜ್ಯಮ್ । ಹ ವಾ ಇತಿ ನಿಪಾತಃ ಪ್ರಸಿದ್ಧ್ಯರ್ಥಕಃ ॥ ೧.೩ ॥

ಅನುವಾದ- ಇಲ್ಲಿ ಶೌನಕ ಎಂದರೇ ಶುನಕರ ಮಕ್ಕಳು ಎಂದು ಅರ್ಥ. ಮಹಾಶಾಲ ಎಂದರೇ ಪ್ರತಿವರ್ಷವೂ ಎಡಬಿಡದೇ ಯಜ್ಞವನ್ನು ಮಾಡುವವರು ಎಂದು ಅರ್ಥ. ಪ್ರತಿವರ್ಷವೂ ಸರಿಯಾಗಿ ಯಜ್ಞಮಾಡುವವರು ಮಹಾಶಾಲ ಎಂದು ಕರೆಯಲ್ಪಡುತ್ತಾರೆ ಎಂದು ಛಾಂದೋಗ್ಯಭಾಷ್ಯದ ವಚನವಿದೆ. ವಿಧಿವತ್ ಎಂದರೇ ವಿಧಿಯಲ್ಲಿ ಉಕ್ತವಾದ ಪ್ರಕಾರದಂತೆ ಎಂದು ಅರ್ಥ. ಉಪಸನ್ನಃ ಎಂದರೇ ಉಪಸತ್ತಿಯನ್ನು ಹೊಂದಿದವನು ಅಂದರೇ ಸಮಿತ್ಪಾಣಿಗಳಾಗಿ ಉಪದೇಶಕ್ಕಾಗಿ ಗುರುಗಳ ಸನಿಹ ಸೇರುವುದು ಎಂದು ಅರ್ಥ. ಹೀಗೆ ಗುರುಗಳ ಹತ್ತಿರ ಬಂದವರಾಗಿ ಅಂಗಿರಸರನ್ನು ಕುರಿತು ಕೇಳಿದರು. ಹೇ ಭಗವಃ ಎಂದರೇ ಭಗವನ್ ಎಂದು ಅರ್ಥ. ಪೂಜ್ಯಪಾದರೇ ಎಂದು ತಾತ್ಪರ್ಯ.

'ಮತುವಸೋ ರು ಸಂಬುದ್ದೌ ಛಂದಸಿ' ಎಂಬ ಸೂತ್ರಕ್ಕೆ ಅನುಗುಣವಾಗಿ ಭಗಾಃ ಅಸ್ಯ ಸಂತಿ ಇತಿ ಭಗವಃ ಎಂಬ ಶಬ್ದವು ನಿಷ್ಪನ್ನವಾಗುತ್ತದೆ.

ಈ ಎಲ್ಲ ಕರ್ಮದೇವತಾದಿಗಳನ್ನು ನಾನು ತಿಳಿದುಕೊಂಡಿದ್ದೇನೆ. ಯಾವುದನ್ನು ತಿಳಿದಾಗ ನನ್ನ ಈ ಜ್ಞಾನವೆಲ್ಲ ಸಫಲವಾಗುತ್ತದೆ? ಇದು ಯಾವ ಜ್ಞಾನಕ್ಕೆ ಸಹಕಾರಿಯಾಗಿ ಮೋಕ್ಷವೆಂಬ ಫಲ ಉಳ್ಳದ್ದಾಗುತ್ತದೆ? ಅದನ್ನು ನನಗೆ ಉಪದೇಶಿಸಿರಿ ಎಂದು ಕೇಳಿದರು. ಹ ವಾ ಎಂಬ ನಿಪಾತವು ಪ್ರಸಿದ್ಧಿ ಎಂಬ ಅರ್ಥವನ್ನು ತಿಳಿಸುತ್ತದೆ.

**ಉಪನಿಷತ್**

**ತಸ್ಮೈ ಸ ಹೋವಾಚ । ದ್ವೇ ವಿದ್ಯೇ ವೇದಿತವ್ಯೇ ಇತಿ ಹ ಸ್ಮ ಯದ್ ಬ್ರಹ್ಮವಿದೋ ವದಂತಿ ಪರಾ ಚೈವಾಽಪರಾ ಚ ॥ ೧.೪ ॥**

ಉಪನಿಷದರ್ಥ- ಉಪಸನ್ನರಾದ ಆ ಶೌನಕರಿಗೆ ಅಂಗಿರಸರು ಹೇಳಿದರು. ಎರಡು ವಿದ್ಯೆಗಳನ್ನು ತಿಳಿಯಬೇಕು ಎಂದು ಬ್ರಹ್ಮಜ್ಞಾನಿಗಳು ಹೇಳುತ್ತಾರೆ. ಅವುಗಳೇ ಪರವಿದ್ಯೆ ಅಪರವಿದ್ಯೆಗಳಾಗಿವೆ.

**ಖಂಡಾರ್ಥ**

ಕರ್ಮದೇವತಾದಿಜ್ಞಾನಂ ತದನುಷ್ಠಾನಾದಿನಾ ಬ್ರಹ್ಮಜ್ಞಾನಾರ್ಥಂ ಸನ್ಮೋಕ್ಷಾಖ್ಯಫಲವದ್ಭವತೀತಿ 'ತದೇತತ್ಸತ್ಯಂ ಮಂತ್ರೇಷು' ಇತ್ಯಾದಿನಾ ವಿವಕ್ಷುಃ ಉಪೋದ್ಘಾತಪೂರ್ವಂ ಬ್ರಹ್ಮಸ್ವರೂಪಂ ತಾವದ್ವದಾಮೀತಿ ಭಾವೇನ ಉತ್ತರಮುಕ್ತವಾನಿತ್ಯಾಹ ವೇದಪುರುಷಃ- **ತಸ್ಮೈ ಶೌನಕಾಯ ಸೋಽಂಗಿರಾ ಉವಾಚೇತಿ** ॥ ಹೇತಿ ಹರ್ಷೇ । ಉಪೋದ್ಘಾತಮಾಹ- **ದ್ವೇ ವಿದ್ಯೇ ಇತಿ** ॥ ಪೂರ್ವತ್ರೇವಾಽತ್ರಾಪಿ ವಿದ್ಯಾಶಬ್ದಃ ಕರಣಸಾಧನಃ । ವಿದ್ಯಾ ವಿತ್ತಿಜನಕಂ ಶಾಸ್ತ್ರಂ ದ್ವೇ ದ್ವಿವಿಧಮಿತ್ಯರ್ಥಃ । ಉಪಾಧಿದ್ವೈವಿಧ್ಯಾಽಭಿಪ್ರಾಯೇಣ ದ್ವಿವಚನೋಕ್ತಿಃ । ಇತಿ ಬ್ರಹ್ಮವಿದೋ ವದಂತಿ ಸ್ಮ । ಹೇತಿ ಪ್ರಸಿದ್ಧಮಿತ್ಯರ್ಥಃ । ತಥಾಚ ಸೂತ್ರಂ 'ಅನ್ಯಾರ್ಥಂ ತು ಜೈಮಿನಿಃ ಪ್ರಶ್ನವ್ಯಾಖ್ಯಾನಾಭ್ಯಾಮ್' ಇತಿ । ಕಥಮಿತ್ಯತ ಆಹ- **ಪರಾ ಚೈವಾಪರಾ ಚೇತಿ** ॥ ಪರಮಮುಖ್ಯಾರ್ಥಬೋಧಕತ್ವೋಪಾದಿನಾ ಪರೈವ ಸತೀ ವಿದ್ಯಾ ಅಪರಾ ಅಮುಖ್ಯಾರ್ಥಬೋಧಕತ್ವೋಪಾದಿನಾಽಪರಾ ಚೇತ್ಯುಚ್ಯತೇ । ನ ವಸ್ತುತೋ ವ್ಯಕ್ತಿಬೇದೋಽಸ್ತೀತ್ಯೇವಕಾರಪ್ರಯೋಗಃ ॥೧.೪॥

ಅನುವಾದ- ಕರ್ಮದೇವತಾದಿಗಳ ಜ್ಞಾನವು ಅವುಗಳ ಅನುಷ್ಠಾನಾದಿಗಳಿಂದ ಬ್ರಹ್ಮಜ್ಞಾನಕ್ಕೆ ಸಹಕಾರಿಯಾಗಿ ಮೋಕ್ಷವೆಂಬ ಫಲ ಉಳ್ಳದ್ದು ಆಗುತ್ತದೆ. ಈ ವಿಷಯವನ್ನು 'ತದೇತತ್ಸತ್ಯಂ ಮಂತ್ರೇಷು...'

ಇತ್ಯಾದಿ ಮಂತ್ರದಿಂದ ಹೇಳಲು ಇಚ್ಛಿಸಿ ಉಪೋದ್ಘಾತಪೂರ್ವಕವಾಗಿ ಬ್ರಹ್ಮನ ಸ್ವರೂಪವನ್ನು ಮೊದಲಿಗೆ ತಿಳಿಸುತ್ತೇನೆಂಬ ಅಭಿಪ್ರಾಯದಿಂದ ಅಂಗಿರಸರು ಉತ್ತರವನ್ನು ಹೇಳಿದರು ಎಂದು 'ತಸ್ಮೈ ಶೌನಕಾಯ ಸೋಽಂಗಿರಾ ಉವಾಚ' ಎಂಬ ಮಾತಿನಿಂದ ವೇದಪುರುಷನು ಹೇಳುತ್ತಿದ್ದಾನೆ. ಹ ಎಂದರೇ ಹರ್ಷ ಎಂದು ಅರ್ಥ. 'ದ್ವೇ ವಿದ್ಯೇ' ಎಂಬುದರಿಂದ ಉಪೋದ್ಘಾತವನ್ನು ಮಾಡುತ್ತಿದ್ದಾರೆ. ಹಿಂದೆ ತಿಳಿಸಿದಂತೆ ಇಲ್ಲಿಯೂ ವಿದ್ಯಾಶಬ್ದವು ಕರಣಸಾಧನವಾಗಿದೆ. ವಿದ್ಯಾ ಎಂದರೇ ಜ್ಞಾನಜನಕವಾದ ಶಾಸ್ತ್ರವು ಎರಡು ವಿಧವಾಗಿದೆ ಎಂದು ತಿಳಿಯಬೇಕು. ವಿದ್ಯೆ ಇದು ಒಂದೇ ಆದದ್ದರಿಂದ ಏಕವಚನದ ಪ್ರಯೋಗವನ್ನು ಮಾಡಬೇಕಿತ್ತು. ಆದರೇ ಉಪಾಧಿಗಳು ಭಿನ್ನವಾದದ್ದರಿಂದ ದ್ವಿವಚನಪ್ರಯೋಗವು ಸೂಕ್ತವೇ ಆಗಿದೆ. ಈ ರೀತಿಯಾಗಿ ಬ್ರಹ್ಮಜ್ಞಾನಿಗಳು ಹೇಳುತ್ತಾರೆ. ಹ ಇದು ಪ್ರಸಿದ್ಧವಾಗಿದೆ ಎಂದು ಅರ್ಥ. ವೇದವು ದೇವತಾಪರ ಮತ್ತು ಕರ್ಮಪರ ಎಂದು ಈ ಸೂತ್ರವು ತಿಳಿಸುತ್ತದೆ. 'ಅನ್ಯಾರ್ಥಂ ತು ಜೈಮಿನಿಃ ಪ್ರಶ್ನ- ವ್ಯಾಖ್ಯಾನಾಭ್ಯಾಮ್' (ಬ್ರ.ಸೂ.೧.೪.೧೮) 'ಬ್ರಹ್ಮಜ್ಞಾನವನ್ನು ಮಾಡಿಸಿ ಕೊಡುವುದಕ್ಕಾಗಿಯೇ ವೇದಗಳು ಅನ್ಯದೇವತೆಗಳನ್ನೂ ತಿಳಿಸುತ್ತವೆ. ಮತ್ತು ಯಜ್ಞಾದಿಕರ್ಮಗಳನ್ನೂ ಬೋಧಿಸುತ್ತವೆ. ಶೌನಕ-ಅಂಗಿರರ ಮತ್ತು ಶ್ವೇತಕೇತು-ಉದ್ದಾಲಕರ ಪ್ರಶ್ನೋತ್ತರಗಳಿಂದ ಈ ವಿಷಯವು ಸಿದ್ಧವಾಗುತ್ತದೆ. ಹೀಗೆಂದು ಜೈಮಿನಿಗಳು ಹೇಳುತ್ತಾರೆ.' 'ಪರಾ ಚೈವಾಽಪರಾ ಚ' ಎಂಬ ಮಾತಿನಿಂದ ಹೇಗೆ ವಿದ್ಯೆಯು ಎರಡು ವಿಧವಾಗಿದೆ ಎಂಬುದನ್ನು ತಿಳಿಸುತ್ತಾರೆ. ಪರಮ-ಮುಖ್ಯಾರ್ಥಬೋಧಕತ್ವ ಎಂಬ ಉಪಾಧಿಯಿಂದ (ಪರಮಮುಖ್ಯವಾದ ಅರ್ಥವನ್ನು ತಿಳಿಸುವುದರಿಂದ) ಪರವಾದ ವಿದ್ಯೆಯೇ ಅಪರವಾಗುತ್ತದೆ. ಅಂದರೇ ಅಮುಖ್ಯಾರ್ಥಬೋಧಕತ್ವ ಎಂಬ ಉಪಾಧಿಯಿಂದ (ಅಮುಖ್ಯವಾದ ಅರ್ಥವನ್ನು ತಿಳಿಸುವ ನಿಮಿತ್ತ) ಅಪರವಾಗುತ್ತದೆ ಎಂದು ತಿಳಿಯಬೇಕು. ವಾಸ್ತವಿಕವಾಗಿ ಈ ವಿದ್ಯೆಗಳಲ್ಲಿ ವ್ಯಕ್ತಿಭೇದವಿರುವುದಿಲ್ಲ ಎಂಬ ವಿಷಯವನ್ನು ಏವಕಾರವು ತಿಳಿಸುತ್ತದೆ.

**ಉಪನಿಷತ್**

**ತತ್ರಾऽಪರಾ । ಋಗ್ವೇದೋ ಯಜುರ್ವೇದಃ ಸಾಮವೇದೋऽಥರ್ವವೇದಃ ಶಿಕ್ಷಾ ಕಲ್ಪೋ ವ್ಯಾಕರಣಂ ನಿರುಕ್ತಂ ಛಂದೋ ಜ್ಯೋತಿಷಮಿತಿ । ಅಥ ಪರಾ । ಯಯಾ ತದಕ್ಷರಮಧಿಗಮ್ಯತೇ ॥೧.೫॥**

ಉಪನಿಷದರ್ಥ- ಈ ಪರಾಪರವಿದ್ಯೆಗಳಲ್ಲಿ ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವವೇದ, ಶಿಕ್ಷಾ, ವ್ಯಾಕರಣ, ನಿರುಕ್ತ, ಛಂದಸ್ಸು ಜ್ಯೋತಿಷ್ಯ ಇವುಗಳು ಅಪರವಿದ್ಯೆ ಎನಿಸುತ್ತವೆ. ನಂತರ ಪರವಿದ್ಯೆಯು ನಿರೂಪಿತವಾಗುತ್ತದೆ. ಯಾವುದರಿಂದ ಅಕ್ಷರನಾಮಕನಾದ ಪರಮಾತ್ಮನ ಜ್ಞಾನವಾಗುತ್ತದೋ ಅದುವೇ ಪರವಿದ್ಯೆ ಎನಿಸುತ್ತದೆ.

**ಭಾಷ್ಯ**

**ಋಗಾದ್ಯಾ ಅಪರಾ ವಿದ್ಯಾ ಯದಾ ವಿಷ್ಣೋರ್ನ ವಾಚಕಾಃ ।**
**ತಾ ಏವ ಪರಮಾ ವಿದ್ಯಾ ಯದಾ ವಿಷ್ಣೋಸ್ತು ವಾಚಕಾಃ ॥**
**ಇತಿ ಪರಮಸಂಹಿತಾಯಾಮ್ ॥**

ಭಾಷ್ಯಾರ್ಥ- ಸಮಗ್ರವೇದವೆಲ್ಲ ಭಗವತ್ಪರವೇ ಆಗಿದೆ. ಆದರೇ ದೇವರ ಜ್ಞಾನವಾಗದೇ ಆಪಾತತಃ ಕರ್ಮ-ದೇವತೆಗಳ ಜ್ಞಾನವೇ ವೇದಗಳಿಂದ ಆಗುತ್ತಿದ್ದರೇ ಅಂತಹ ಸಂದರ್ಭದಲ್ಲಿ ಕರ್ಮದೇವತಾದಿಪ್ರತಿಪಾದಕವಾದ ವೇದವು ಅಪರವಿದ್ಯೆ ಎನಿಸುತ್ತದೆ. ಯಾವಾಗ ವಿಷ್ಣುವಾಚಕವಾಗುತ್ತವೋ ಆವಾಗ ಅದೇ ವೇದಗಳು ಪರವಿದ್ಯೆ ಎನಿಸುತ್ತವೆ. ಹೀಗೆ ಪರಮಸಂಹಿತೆಯಲ್ಲಿದೆ.

**ಭಾಷ್ಯ**

**ಋಗ್ಭಿರ್ಹೌತ್ರೇಣ ಶಂಸಂತಿ ತಥೌದ್ಗಾತ್ರೈಃ ಸ್ತುವಂತಿ ಯೇ ।**
**ವಿಷ್ಣುಮೇವ ತಥಾ ತಸ್ಮೈ ಯಜುರ್ಭಿರಪಿ ಜುಹ್ವತಿ ॥**
**ಸ್ತುವಂತ್ಯಥರ್ವಣೈಶ್ಚೈನಂ ಸೇತಿಹಾಸಪುರಾಣಕೈಃ ।**

ನ ವಿಷ್ಣುಸದೃಶಂ ಕಿಂಚಿತ್ ಪರಮಂ ವಾऽಪಿ ಮನ್ವತೇ ॥
ಸರ್ವೋತ್ತಮಂ ತಂ ಜಾನಂತಸ್ತೇ ಹಿ ಭಾಗವತೋತ್ತಮಾ: ॥

ಭಾಷ್ಯಾರ್ಥ- ಯಜ್ಞದಲ್ಲಿ ಋಗ್ವೇದಮಂತ್ರಗಳನ್ನು ಶಂಸನಮಾಡುವ ಯಾವ ಹೋತೃಗಳು ಋಗ್ವೇದದಿಂದ ವಿಷ್ಣುವಿನ ಶಂಸನೆಯನ್ನೇ ಮಾಡುತ್ತಾರೋ, ಸಾಮವೇದವನ್ನು ತಿಳಿದಿರುವ ಉದ್ಗಾತೃಗಳು ಔದ್ಗಾತ್ರರೂಪವಾದ ತಮ್ಮ ಕರ್ಮವನ್ನು ಮಾಡುವಾಗ ಸಾಮಗಳಿಂದ ವಿಷ್ಣುವಿನ ಗಾನವನ್ನೇ ಮಾಡುತ್ತಾರೋ, ಯಜುರ್ವೇದ ಮಂತ್ರಗಳನ್ನು ತಿಳಿದು ಹೋಮಮಾಡುವ ಅಧ್ವರ್ಯುಗಳು ಯಾವ ವಿಷ್ಣುವನ್ನೇ ಉದ್ದೇಶ-ವಾಗಿಟ್ಟುಕೊಂಡು ಹೋಮಮಾಡುತ್ತಾರೋ, ಯಾರು ಅಥರ್ವವೇದದಿಂದ, ಇತಿಹಾಸ-ಪುರಾಣಗಳಿಂದ ಭಗವಂತನನ್ನೇ ಸ್ತುತಿಸುತ್ತಾರೋ, ವಿಷ್ಣುವಿಗೆ ಸಮಾನರಾದ, ಉತ್ತಮರಾದ ವ್ಯಕ್ತಿಗಳು ಯಾರೂ ಇಲ್ಲವೆಂದು ಆ ವಿಷ್ಣುವೇ ಸರ್ವೋತ್ತಮನೆಂದು ತಿಳಿದಿದ್ದಾರೋ ಅವರೇ ಉತ್ತಮರಾದ ಭಾಗವತರಾಗಿದ್ದಾರೆ.

## ಭಾಷ್ಯ

ವೇದೇ ರಾಮಾಯಣೇ ಚೈವ ಪುರಾಣೇ ಭಾರತೇ ತಥಾ ।
ಆದಾವಂತೇ ಚ ಮಧ್ಯೇ ಚ ವಿಷ್ಣುಃ ಸರ್ವತ್ರ ಗೀಯತೇ ॥
ಏತದಂತೇ ಚ ಮಧ್ಯೇ ಚ ಬ್ರಹ್ಮೈವೋಕ್ತಾ ವಿಜಾನತಾಮ್ ।
ಋಗಾದಿ ಪಂಚಧಾ ಸಂಸ್ಥಂ ಶಬ್ದಬ್ರಹ್ಮ ಪ್ರಶಾಮ್ಯತಿ ॥
ಯಂ ವಾಕೇಷ್ವನುವಾಕೇಷು ನಿಷತ್ಸೂಪನಿಷತ್ಸು ಚ ।
ಸ್ತುವಂತಿ ಸತ್ಯಕರ್ಮಾಣಂ ಸತ್ಯಂ ಸತ್ಯೇನ ಸಾಮಸು ॥

ಭಾಷ್ಯಾರ್ಥ- ವೇದಗಳಲ್ಲಿ, ರಾಮಾಯಣದಲ್ಲಿ, ಪುರಾಣಗಳಲ್ಲಿ, ಮಹಾಭಾರತದಲ್ಲಿ, ಇವುಗಳಲ್ಲೆಲ್ಲ ಆದಿಯಲ್ಲಿ, ಕೊನೆಗೆ ಮತ್ತು ಮಧ್ಯದಲ್ಲಿ ಎಲ್ಲಕಡೆಗೂ ವಿಷ್ಣುವೇ ಪ್ರತಿಪಾದ್ಯನಾಗಿದ್ದಾನೆ.

ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವವೇದ, ಇತಿಹಾಸ-ಪುರಾಣಗಳೆಂಬುದಾಗಿ ಐದುವಿಧವಾಗಿರುವ ವೇದರಾಶಿಯು. (ವೇದಪುರುಷನು) ಉಪಕ್ರಮಾದಿಗಳಿಂದ ವೇದಾರ್ಥವನ್ನು ತಿಳಿಯಲು ಹೊರಟ ಅಧಿಕಾರಿಗಳಿಗೆ ಆದಿಯಲ್ಲಿ ಅಂತದಲ್ಲಿ ಮತ್ತು ಮಧ್ಯದಲ್ಲಿ ವಿಷ್ಣುವನ್ನೇ ಸರ್ವೋತ್ತಮನೆಂದು ಹೇಳಿ ಅಧಿಕಾರಿಗಳ ಆಕಾಂಕ್ಷೆಯನ್ನು ಪೂರ್ಣಮಾಡುತ್ತದೆ. ಸ್ವಯಂ ಸಂತುಷ್ಟವಾಗುತ್ತದೆ.

ಅಬಾಧಿತವಾದ ಅರ್ಥಗಳನ್ನು ಪ್ರತಿಪಾದಿಸುವ ಯಜುರ್ವೇದದಲ್ಲಿರುವ ವಾಕ-ಅನುವಾಕ ಎಂಬ ಪ್ರಕರಣವಿಶೇಷಗಳಲ್ಲಿ, ನಿಷತ್-ಉಪನಿಷತ್ ಎಂಬ ಅಥರ್ವವೇದದ ಪ್ರಕರಣವಿಶೇಷಗಳಲ್ಲಿ, ಗಾನಬದ್ಧವಾದ ಸಾಮವೇದದ ಮಂತ್ರಗಳಲ್ಲಿ ಯಥಾರ್ಥವಾದ ಸೃಷ್ಟ್ಯಾದಿಕರ್ಮಗಳನ್ನು ಮಾಡುವ ಪರಮಾತ್ಮನನ್ನೇ ಸ್ತುತಿಸುತ್ತಾರೆ.

### ಭಾಷ್ಯ

ಸರ್ವೇ ವೇದಾ ಯತ್ಪದಮಾಮನಂತಿ
ತಪಾಂಸಿ ಸರ್ವಾಣಿ ಚ ಯದ್ವದಂತಿ ।
ಯದಿಚ್ಛಂತೋ ಬ್ರಹ್ಮಚರ್ಯಂ ಚರಂತಿ
ತತ್ತೇ ಪದಂ ಸಂಗ್ರಹೇಣ ಪ್ರವಕ್ಷ್ಯೇ ॥
ವೇದೈಶ್ಚ ಸರ್ವೈರಹಮೇವ ವೇದ್ಯೋ
ವೇದಾಂತಕೃದ್ವೇದವಿದೇವ ಚಾಹಮ್ ॥ ಇತಿ ಚ ಭಾರತೇ ॥

ಭಾಷ್ಯಾರ್ಥ- ಎಲ್ಲವೇದಗಳು ಯಾವ ಪರಮಾತ್ಮನ ಸ್ವರೂಪವನ್ನು ಮಹಾತಾತ್ಪರ್ಯದಿಂದ ಯುಕ್ತವಾಗಿ ಪ್ರತಿಪಾದಿಸುತ್ತವೋ. ಕಾಯಿಕ-ವಾಚಿಕ-ಮಾನಸಿಕವಾದ ವ್ರತಾದಿಗಳು ಯಾವ ಪರಮಾತ್ಮನ ಜ್ಞಾನಕ್ಕಾಗಿ ಮಾಡಬೇಕೆಂದು ಹೇಳುತ್ತಾರೋ. ಯಾವ ಪರಮಾತ್ಮನ ಜ್ಞಾನವನ್ನು ಬಯಸಿ ಅಧಿಕಾರಿಗಳು ಗುಹ್ಯೇಂದ್ರಿಯನಿಯಮನರೂಪವಾದ ಬ್ರಹ್ಮಚರ್ಯವನ್ನು ಪಾಲಿಸುತ್ತಾರೋ. ಅಂತಹ ಪರಮಾತ್ಮನ ಸ್ವರೂಪವನ್ನು ಸಂಗ್ರಹವಾಗಿ ತಿಳಿಸುತ್ತೇನೆ.

ಎಲ್ಲ ವೇದಗಳಿಂದ ಪರಮಮುಖ್ಯವೃತ್ತಿಯಿಂದ ನಾನೇ ಪ್ರತಿಪಾದ್ಯ-ನಾಗಿದ್ದೇನೆ. ನಾನೇ ವೇದವ್ಯಾಸರೂಪದಿಂದ ವೇದಾರ್ಥನಿರ್ಣಾಯಕವಾದ ಬ್ರಹ್ಮಸೂತ್ರಗಳನ್ನು ರಚಿಸಿದ್ದೇನೆ. ತತ್ತ್ವತಃ ವೇದಗಳನ್ನು ತಿಳಿದವನು ಕೂಡಾ ನಾನೇ ಆಗಿದ್ದೇನೆ. ಹೀಗೆ ಭಾರತದಲ್ಲಿದೆ.

**ಭಾಷ್ಯ**

**ಚತುರ್ದಶ ಮಹಾವಿದ್ಯಾಸ್ಥಾನಾನಿ ವೇದಿತವ್ಯಾನಿ ಭವಂತಿ ಇತಿ ಮೂಲಶ್ರುತಿಃ ।**

ಭಾಷ್ಯಾರ್ಥ- ಪುರಾಣ, ನ್ಯಾಯ, ಮೀಮಾಂಸಾ, ಧರ್ಮಶಾಸ್ತ್ರ ಶಿಕ್ಷಾ ಕಲ್ಪ ವ್ಯಾಕರಣ, ನಿರುಕ್ತ, ಛಂದಸ್ಸು ಜ್ಯೋತಿಷ್ಯ, ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವವೇದ, ಹೀಗೆ ಈ ಹದಿನಾಲ್ಕು ಶಾಸ್ತ್ರಗಳು ಭಗವಂತನ ಯಥಾರ್ಥವಾದ ಜ್ಞಾನವನ್ನು ಹುಟ್ಟಿಸುತ್ತವೆ. ಆದ್ದರಿಂದ ಇವುಗಳು ಪರವಿದ್ಯೆ ಎನಿಸುತ್ತವೆ. ಇವುಗಳನ್ನು ತಿಳಿಯಬೇಕು ಎಂದು ಮೂಲಶ್ರುತಿಯು ತಿಳಿಸುತ್ತದೆ.

**ಭಾಷ್ಯ**

**ಪಂಚರಾತ್ರಮೃಗಾದ್ಯಾಶ್ಚ ಸರ್ವಮೇಕಂ ಪುರಾಽಭವತ್ ।**
**ಮೂಲವೇದ ಇತಿ ಹ್ಯಾಖ್ಯಾ ಕಾಲೇ ಕೃತಯುಗೇ ತದಾ ॥**
**ನೈವರ್ಕ್ಸಾಮಾದಿನಾಮಾನಿ ತದಾ ವೇದಸ್ಯ ಚಾಽಭವತ್ ।**
**ನೈವ ಚೇಂದ್ರಾದಿನಾಮಾನಿ ವಿಷ್ಣೋರನ್ಯತ್ರ ಕುತ್ರಚಿತ್ ॥**
**ಬ್ರಹ್ಮರುದ್ರೇಂದ್ರಪೂರ್ವೈಸ್ತು ನಾಮಭಿಃ ಪ್ರೋಚ್ಯತೇ ಹರಿಃ ॥**

ಭಾಷ್ಯಾರ್ಥ- ಪಂಚರಾತ್ರ, ಋಗಾದಿಗಳೆಲ್ಲ ಕೃತಯುಗದಲ್ಲಿ ವಿಷ್ಣ್ವೇಕವಿಷಯಕವಾಗಿದ್ದವು. ಆದ್ದರಿಂದ ಅವುಗಳನ್ನು ಮೂಲವೇದವೆಂದು ಒಂದೇ ಹೆಸರಿನಿಂದ ವ್ಯವಹರಿಸುತ್ತಿದ್ದರು.

ವಿಭಕ್ತವಾದ ವೇದಗಳಿಗೇನೇ ಋಗಾದಿಸಂಜ್ಞೆಗಳಿವೆ. ಕೃತಯುಗದಲ್ಲಿ ವೇದಗಳು ವಿಭಕ್ತವಾಗಿರಲಿಲ್ಲವಾದ್ದರಿಂದ ಮೂಲವೇದವೆಂದೇ ಅವುಗಳನ್ನು

ವ್ಯವಹರಿಸುತ್ತಿದ್ದರು. ಅಲ್ಲದೇ ಇಂದ್ರಾದಿನಾಮಗಳು ವಿಷ್ಣುವನ್ನು ಹೊರತು ಬೇರೇ ದೇವತೆಗಳನ್ನು ಹೇಳಿಕೊಡುತ್ತಿರಲಿಲ್ಲ. ಬ್ರಹ್ಮ-ರುದ್ರ ಮೊದಲಾದ ನಾಮಗಳಿಂದಲೂ ದೇವರೇ ಪ್ರತಿಪಾದ್ಯನಾಗಿದ್ದ

### ಭಾಷ್ಯ

ದೇವತಾತ್ವೇನ ಚೇಜ್ಯಸ್ಸ ಬ್ರಹ್ಮಾದ್ಯಾ ಮನುನಾಮಕಾಃ ।
ವಕ್ತೃತ್ವೇನ ಪಿತೃತ್ವೇನ ಕಾರಿತ್ವೇನೈವ ಚಾಽದರಾತ್ ।
ಇಜ್ಯಂತೇ ದೇವತಾಃ ಸರ್ವಾ ನ ತು ದೇವತಯಾ ಕ್ವಚಿತ್ ॥
ಅನನ್ಯಯಾಜಿನಸ್ತೇ ತು ತಸ್ಮಾತ್ ಕಾರ್ತಯುಗಾ ಜನಾಃ ।
ಪ್ರಾಪ್ನುವಂತಿ ಹರಿಂ ತಂ ಚ ತಸ್ಮಾದ್ವೇದೇ ನ ಕಿಂಚನ ॥
ಪಾರಾವರ್ಯಂ ಹರೇರ್ಯಸ್ಮಾದುತ್ತಿತಾಸ್ತುರಗಾನನಾತ್ ।
ಋಗಾದ್ಯಾ ಅನುವ್ಯಾಖ್ಯಾಂತಾಃ ತಸ್ಮಾತ್ ಸರ್ವೈರ್ಹರಿಂ ಯಜೇತ್ ॥

ಭಾಷ್ಯಾರ್ಥ- ಕೃತಯುಗದಲ್ಲಿಯ ಜನರು ವಿಷ್ಣುವನ್ನೇ ದೇವತೆ ಎಂದು ತಿಳಿದು ಯಾಗಾದಿಗಳನ್ನು ಮಾಡುತ್ತಿದ್ದರು. ಅಗ್ನಿ ಮೊದಲಾದ ಎಲ್ಲ ಸೂಕ್ತಗಳಿಂದ ವಿಷ್ಣುವನ್ನೇ ತಿಳಿದು ವಿಷ್ಣುವಿನ ಉದ್ದೇಶದಿಂದಲೇ ಯಜ್ಞಾದಿಗಳನ್ನು ಮಾಡುತ್ತಿದ್ದರು.

ಮನುನಾಮಕರಾದ ಬ್ರಹ್ಮಾದಿದೇವತೆಗಳನ್ನು ದೇವತೆಗಳೆಂದು ಪೂಜಿಸುತ್ತಿರಲಿಲ್ಲ. ಇತರ ಯುಗಗಳಲ್ಲಿ ಗುರುಗಳನ್ನು ದೇವತೆಗಳೆಂದು ತಿಳಿದು ಹೇಗೆ ಪೂಜಿಸುವುದಿಲ್ಲವೋ ಹಾಗೆ. ಭಗವಂತನ ಸ್ವರೂಪವನ್ನು ಉಪದೇಶ ಮಾಡುವವರು ಆದ್ದರಿಂದ ಬ್ರಹ್ಮಾದಿದೇವತೆಗಳನ್ನು ತತ್ತ್ವೋಪದೇಶಕರಾದ ಗುರುಗಳೆಂದು, ಎಲ್ಲದಕ್ಕೂ ಜನಕರಾದುದರಿಂದ ತಂದೆ ಎಂದು, ಭಗವಂತನ ಪೂಜಕರೆಂದು ಆದರದಿಂದ ಬ್ರಹ್ಮಾದಿದೇವತೆಗಳನ್ನು ಪೂಜಿಸುತ್ತಿದ್ದರು.

ಕೃತಯುಗದ ಜನರು ಅನನ್ಯಯಾಜಿಗಳಾಗಿದ್ದರು. ದೇವರ ಹೊರತು ಮತ್ತಾರನ್ನೂ ಪೂಜಿಸುತ್ತಿರಲಿಲ್ಲ. ಹರಿಯನ್ನೇ ಪೂಜಿಸುತ್ತಿದ್ದರು ಆದ್ದರಿಂದ ಹರಿಯನ್ನೇ ಹೊಂದುತ್ತಿದ್ದರು. ಹೀಗೆ ಕೃತಯುಗದ ಜನರೆಲ್ಲರೂ ಎಲ್ಲ

ವೇದಗಳು ವಿಷ್ಣುಪ್ರತಿಪಾದಕವೆಂದೇ ತಿಳಿಯುತ್ತಿದ್ದರು. ಹೀಗಾಗಿ ಆ ಕಾಲದಲ್ಲಿ ಪರವಿದ್ಯೆಯೇ ಇತ್ತು. ಪರವಿದ್ಯೆ-ಅಪರವಿದ್ಯೆ ಎಂಬ ಭೇದವಿರಲಿಲ್ಲ. ಹಯಗ್ರೀವರೂಪಿಯಾದ ಪರಮಾತ್ಮನಿಂದಲೇ ಋಗಾದಿ-ಅನುವ್ಯಾಖ್ಯಾನಾಂತವಾದ ವಿದ್ಯೆಗಳೆಲ್ಲ ಹೊರಹೊಮ್ಮಿರುವುದರಿಂದ ಅವುಗಳಲ್ಲಿ ಪಾರಾವರ್ಯವು ಇರಲಿಲ್ಲವೆಂಬುದು ಸಿದ್ಧ. ಆದ್ದರಿಂದ ಎಲ್ಲ ವೇದಗಳಿಂದಲೂ ವಿಷ್ಣುವನ್ನೇ ಅವರು ಪೂಜಿಸುತ್ತಿದ್ದರು.

## ಭಾಷ್ಯ

**ತಸ್ಮಾದ್ ಬ್ರಹ್ಮಾದಯಃ ಸರ್ವೇ ಮನವೋ ಮಾನವಾಸ್ತಥಾ ।**
**ಯಜಂತಿ ಸರ್ವವೇದೈಸ್ತಂ ಜಾನಂತಿ ಚ ವಿನಿಶ್ಚಯಾತ್ ॥**
**ಅಶಕ್ತಃ ಪಂಚರಾತ್ರೇಣ ಋಗಾದ್ಯೈರ್ವಾಽಥ ತಂ ಯಜೇತ್ ।**
**ಋಗಾದ್ಯೈರೇವ ಸ ತ್ರೈತೈರ್ಭಿನ್ನೈರಿಷ್ಟೋ ಜನೈರ್ಹರಿಃ ॥**
**ದ್ವಾಪರೀಯೈರ್ಜನೈರ್ವಿಷ್ಣುಃ ಪಂಚರಾತ್ರೈಸ್ತು ಕೇವಲೈಃ ।**
**ಕಲೌ ತು ನಾಮಮಾತ್ರೇಣ ಪೂಜ್ಯತೇ ಭಗವಾನ್ ಹರಿಃ ॥**

ಭಾಷ್ಯಾರ್ಥ- ಆದ್ದರಿಂದ ಮನುನಾಮಕರಾದ ಬ್ರಹ್ಮಾದಿದೇವತೆಗಳು, ಮನುಪುತ್ರರಾದ ಮರೀಚ್ಯಾದಿಗಳೆಲ್ಲರೂ ಎಲ್ಲವೇದಗಳಿಂದ ವಿಷ್ಣುವನ್ನೇ ಪೂಜಿಸುತ್ತಾರೆ. ನಿರ್ಧಾರಪೂರ್ವಕವಾಗಿ ತಿಳಿಯುತ್ತಾರೆ.

ಕೃತಯುಗದಲ್ಲಿ ಮೂರುವಿಧರಾದ ಜನರಿದ್ದರು. ಉತ್ತಮರು ಎಲ್ಲವೇದಗಳಿಂದ ಪರಮಾತ್ಮನನ್ನೇ ತಿಳಿದು ಪೂಜಿಸುತ್ತಿದ್ದರು. ಈ ಶಕ್ತಿ ಇಲ್ಲದ ಮಧ್ಯಮರು ಋಗಾದಿಗಳಿಂದ ಮಾತ್ರ ಪರಮಾತ್ಮನನ್ನು ಪೂಜಿಸುತ್ತಿದ್ದರು. ಈ ಶಕ್ತಿಯೂ ಇಲ್ಲದ ಅಧಮರು ಪಂಚರಾತ್ರದಿಂದ ದೇವರನ್ನು ಪೂಜಿಸುತ್ತಿದ್ದರು.

ತ್ರೇತಾಯುಗದಲ್ಲಿ ಕೃತಯುಗದ ಜನಕ್ಕಿಂತಲೂ ಯೋಗ್ಯತೆಯಲ್ಲಿ ಭಿನ್ನರಾದ ಜನರು ಋಗಾದಿಗಳಿಂದ ಮಾತ್ರ ಪರಮಾತ್ಮನನ್ನು ಪೂಜಿಸುತ್ತಿದ್ದರು. ದ್ವಾಪರದಲ್ಲಿಯ ಜನರು ಪಂಚರಾತ್ರದಿಂದ ಮಾತ್ರ ದೇವರನ್ನು ಪೂಜಿಸುತ್ತಿದ್ದರು. ಕಲಿಯುಗದಲ್ಲಿಯ ಜನರು ನಾಮಮಾತ್ರದಿಂದ ದೇವರನ್ನು ಪೂಜಿಸುತ್ತಾರೆ.

ಭಾಷ್ಯ

ಏಕೋ ವೇದಃ ಕೃತೇ ಹ್ಯಾಸೀತ್ ತ್ರೇತಾಯಾಂ ಸ ತ್ರಿಧಾऽಭವತ್ ।
ಸ ಏವ ಪಂಚಧಾ ಜಾತೋ ದ್ವಾಪರಂ ಪ್ರಾಪ್ಯಂ ವೈ ಯುಗಮ್ ।
ಉತ್ಸನ್ನಃ ಸ ಕಲಿಂ ಪ್ರಾಪ್ಯ ವೇದಃ ಪ್ರಾಯೇಣ ಸರ್ವಶಃ ॥
ಮುಖ್ಯೋ ಧರ್ಮಃ ಕಾರ್ತಯುಗೋ ವರ್ತಿತವ್ಯಃ ಕಲಾವಪಿ ।
ತ್ರೇತಾದೌ ತದಶಕ್ತ್ಯಾ ಹಿ ಧರ್ಮೋऽನ್ಯಃ ಸಂಪ್ರಕೀರ್ತಿತಃ ॥

ಭಾಷ್ಯಾರ್ಥ- ಕೃತಯುಗದಲ್ಲಿ ಶ್ರೀಹರಿಯ ಯಜನಕ್ಕೆ ಅಂಗವಾಗಿರುವ ವೇದವು ಅವಿಭಕ್ತವಾಗಿ ಒಂದಾಗಿಯೇ ಇತ್ತು. ತ್ರೇತಾಯುಗದಲ್ಲಿ ಮೂರಾಗಿ ವಿಭಕ್ತವಾಯಿತು. ದ್ವಾಪರಯುಗದಲ್ಲಿ ಐದಾಗಿ ವಿಭಕ್ತವಾಯಿತು. ಕಲಿಯುಗದಲ್ಲಿ ಪ್ರಾಯಃ ವೇದಗಳು ಲುಪ್ತವಾದವು.

ಪರಮಸಮರ್ಥರಾದ ಬ್ರಹ್ಮಾದಿದೇವತೆಗಳು ಕಲಿಯುಗದಲ್ಲಿಯೂ ಕಾರ್ತಯುಗದ ಧರ್ಮಗಳನ್ನೇ ಪರಿಪಾಲಿಸುತ್ತಾರೆ. ತ್ರೇತಾದಿಯುಗಗಳಲ್ಲಿ ಎಲ್ಲ ವೇದಗಳಿಂದ ವಿಷ್ಣುಯಜನ ಮಾಡುವ ಶಕ್ತಿ. ಜನರಿಗೆ ಇಲ್ಲದಿದ್ದುದರಿಂದ ಋಗಾದಿಗಳಿಂದಲೇ ದೇವರನ್ನು ಪೂಜಿಸಬೇಕು ಇತ್ಯಾದಿಯಾಗಿ ಧರ್ಮಗಳನ್ನು ಹೇಳಿದ್ದಾರೆ.

ಭಾಷ್ಯ

ಕೃತೇ ಭಾಗವತಾಃ ಸರ್ವೇ ವೇದಾಶ್ಚ ಪುರುಷಾಸ್ತಥಾ ।
ತ್ರೇತಾಯಾಂ ಭಿನ್ನವಿಷಯಾಸ್ತತಃ ತ್ರೈವಿದ್ಯತಾಂ ಗತಾಃ ॥
ತಸ್ಮಾದೇಕಃ ಸರ್ವವೇದೈಃ ಜ್ಞೇಯೋ ವಿಷ್ಣುಃ ಸನಾತನಃ ।
ಪೂಜ್ಯೋ ಯಜ್ಞೈಃ ಸೋಪಚಾರೈಃ ಧ್ಯೇಯೋ ವಂದ್ಯಶ್ಚ ಸರ್ವದಾ ॥
ಇತ್ಯಾದಿನಾರಾಯಣಸಂಹಿತಾಯಾಮ್ ।

ಭಾಷ್ಯಾರ್ಥ- ಕೃತಯುಗದ ಸಾಧಕರೆಲ್ಲರೂ ಭಾಗವತರೇ ಆಗಿದ್ದರು. ಅವರು ಎಲ್ಲ ವೇದಗಳಿಂದಲೂ ದೇವರನ್ನು ಮಾತ್ರ ತಿಳಿಯುತ್ತಿದ್ದರು. ತ್ರೇತಾಯುಗದಲ್ಲಿಯ ಸಾಧಕರು ಇತರ ದೇವತೆಗಳನ್ನು ಪೂಜಿಸಲು

ಪ್ರಾರಂಭಿಸಿದರು. ವೇದಗಳನ್ನು ಇತರದೇವತಾಪ್ರತಿಪಾದಕವೆಂದೂ ತಿಳಿದರು. ಹೀಗಾಗಿ ಜನರು ತ್ರೈವಿದ್ಯರಾದರು.

ಸಮರ್ಥರಾದವರು ಕೃತಯುಗದ ಮುಖ್ಯಧರ್ಮವನ್ನೇ ಆಚರಿಸ-ಬೇಕಾದುದರಿಂದ, ಎಲ್ಲ ವೇದಗಳೂ ಭಗವದ್ವಿಷಯಕವಾದುದರಿಂದ ಎಲ್ಲ ಪುರುಷರೂ ಯಾವಾಗಲೂ ಸನಾತನನಾದ ವಿಷ್ಣುವನ್ನೇ ಎಲ್ಲ ವೇದಗಳಿಂದ ಪೂಜಿಸಬೇಕು. ಸ್ತುತಿಪೂರ್ವಕವಾದ ಅರ್ಘ್ಯ-ಪಾದ್ಯ-ಆಚಮನ ಮೊದಲಾದ ಷೋಡಷೋಪಚಾರಗಳಿಂದ ಸಹಿತವಾದ ಯಜ್ಞಗಳಿಂದ ದೇವರನ್ನು ಪೂಜಿಸಬೇಕು. ಅವನ ಧ್ಯಾನವನ್ನೇ ಮಾಡಬೇಕು. ಅವನಿಗೇನೇ ವಂದನೆಯನ್ನು ಮಾಡಬೇಕು.

## ಭಾಷ್ಯ

ವೇದವಾದಾಶ್ಚಾನುಯುಗಂ ಹ್ರಸಂತೀತಿ ಹಿ ನಃ ಶ್ರುತಿಃ ॥ ಇತಿ ಭಾರತೇ ।
ವೇದೈಶ್ಚ ಪಂಚರಾತ್ರೈಶ್ಚ ಭಕ್ತ್ಯಾ ಯಜ್ಞೈಃ ತಥೈವ ಚ ।
ದೃಶ್ಯೋऽಹಂ ನಾऽನ್ಯಥಾ ದೃಶ್ಯೋ ವರ್ಷಕೋಟಿಶತೈರಪಿ ॥
ಇತ್ಯಾದಿ ವಾರಾಹೇ ॥

ಭಾಷ್ಯಾರ್ಥ- ಕೃತಯುಗದಲ್ಲಿ ಆ ಯುಗದ ಸಾಮರ್ಥ್ಯದಿಂದ ಎಲ್ಲ ವೇದಗಳಿಗೂ ವಿಷ್ಣುವನ್ನು ಪ್ರತಿಪಾದಿಸುವ ಶಕ್ತಿಯು ಆವಿರ್ಭೂತವಾಗುತ್ತದೆ. ತ್ರೇತಾಯುಗದಲ್ಲಿ ಆ ಕಾಲದ ಬಲಕ್ಕೆ ಅನುಗುಣವಾಗಿ ವಿಷ್ಣುಪ್ರತಿಪಾದಕತ್ವ-ಶಕ್ತಿಯು ಕಡಿಮೆಯಾಗುತ್ತದೆ. ದ್ವಾಪರಯುಗದಲ್ಲಿ ವಿಷ್ಣುಪ್ರತಿಪಾದಕತ್ವಶಕ್ತಿಯು ಮತ್ತಿಷ್ಟು ಕಡಿಮೆಯಾಗುತ್ತದೆ. ಹೀಗೆ ಕ್ರಮವಾಗಿ ಯುಗಕ್ಕೆ ಅನುಗುಣವಾಗಿ ವಿಷ್ಣುಪ್ರತಿಪಾದಕತ್ವಶಕ್ತಿಯು ಕಡಿಮೆಯಾಗುತ್ತದೆಂದು ನಾವು ಕೇಳಿದ್ದೇವೆ ಎಂದು ಭಾರತವು ಹೇಳುತ್ತದೆ.

ಭಕ್ತಿಪೂರ್ವಕವಾಗಿ ಭಗವದ್ವಿಷಯಕವಾಗುವಂತೆ ಅಧ್ಯಯನ ಮಾಡಿದ ವೇದಗಳಿಂದ, ಪಂಚರಾತ್ರಗಳಿಂದ ಭಕ್ತಿಪೂರ್ವಕವಾಗಿ ಆಚರಿಸಿದ ಯಜ್ಞಗಳಿಂದ, ನಾನು ಅಪರೋಕ್ಷವಿಷಯನಾಗುತ್ತೇನೆ. ಕೋಟಿಕೋಟಿ-

ವರ್ಷಗಳ ವರೆಗೆ ಅನುಷ್ಠಾನ ಮಾಡಿದ ಯಾವ ಇತರ ಸಾಧನಗಳಿಂದಲೂ ನಾನು ಪ್ರಾಪ್ಯನಾಗುವುದಿಲ್ಲ. ಎಂದು ವರಾಹಪುರಾಣವು ತಿಳಿಸುತ್ತದೆ.

## ಭಾಷ್ಯ

ಅತ್ರಾಽಪಿ ತದೇತತ್ಸತ್ಯಂ ಮಂತ್ರೇಷು ಕರ್ಮಾಣಿ ಕವಯೋ ಯಾನ್ಯಪಶ್ಯನ್ । ಇತ್ಯಾದಿನಾ ಕರ್ಮವಿಷಯಾಮಪರವಿದ್ಯಾಮುಕ್ತ್ವಾ ಯೇನಾಕ್ಷರಂ ಪುರುಷಂ ವೇದ ಸತ್ಯಂ ಪ್ರೋವಾಚ ತಾಂ ತತ್ತ್ವತೋ ಬ್ರಹ್ಮವಿದ್ಯಾಂ ಇತ್ಯಾರಭ್ಯ ಆಥರ್ವಣಾನೇವ ಮಂತ್ರಾನ್ ಪರವಿದ್ಯಾತ್ವೇನಾಽಽಹ । ಚತುರ್ವೇದಸಂಸ್ಕಾರವತಾಮೇವ ಚ ವಿದ್ಯಾಯಾಮಧಿಕಾರ ಉಕ್ತಃ । ತೇಷಾಮೇವೈತಾಂ ಬ್ರಹ್ಮವಿದ್ಯಾಂ ವದೇತ ಶಿರೋವ್ರತಂ ವಿಧಿವದ್ಯೈಸ್ತು ಚೀರ್ಣಮ್ ಇತಿ । ಶಿರೋವ್ರತಮಿತ್ಯುಪಲಕ್ಷಣತ್ವೇನ । ಸ್ವವೇದವ್ರತಯುಕ್ತಸ್ಯ ಸರ್ವವೇದಗತಾಸ್ವಪಿ । ಅಧಿಕಾರೋಽಸ್ತಿ ವಿದ್ಯಾಸು ನಾಽವೇದವ್ರತಿನಃ ಕ್ವಚಿತ್ ॥ ಇತಿ ವ್ಯಾಸಸ್ಮೃತೌ ॥

ಭಾಷ್ಯಾರ್ಥ- ಈ ಉಪನಿಷತ್ತಿನಲ್ಲಿಯೂ, 'ತದೇತತ್ಸತ್ಯಂ ಮಂತ್ರೇಷು...' ಎಂಬ ಮಂತ್ರದಿಂದ ಕರ್ಮವಿಷಯಕವಾದುದು ಅಪರವಿದ್ಯಾ ಎಂದು ಹೇಳಿ, 'ಯೇನಾಽಕ್ಷರಂ ಪುರುಷಂ ವೇದ ಸತ್ಯಂ ಪ್ರೋವಾಚ ತಾಂ ತತ್ತ್ವತೋ ಬ್ರಹ್ಮವಿದ್ಯಾಮ್' ಎಂಬ ಮಂತ್ರದಿಂದ ಮೊದಲು ಮಾಡಿ ಆಥರ್ವಣಮಂತ್ರಗಳನ್ನು ಪರವಿದ್ಯೆಯಾಗುವಂತೆ ಹೇಳಿದ್ದಾರೆ.

ನಾಲ್ಕು ವೇದಗಳ ಅಧ್ಯಯನಾದಿಗಳಿಗೆ ಯಾವ ಸಂಸ್ಕಾರವು ಉಕ್ತವಾಗಿದೆಯೋ ಆ ಸಂಸ್ಕಾರವನ್ನು ಪಡೆದವನಿಗೇ ಬ್ರಹ್ಮವಿದ್ಯೆಯಲ್ಲಿ ಅಧಿಕಾರವನ್ನು ಹೇಳಿದ್ದಾರೆ. ಇದನ್ನು ತೇಷಾಮೇವೈತಾಂ... ಎಂಬ ಮಂತ್ರದಿಂದ ಹೇಳಿದ್ದಾರೆ. ಶಿರೋವ್ರತವೆಂಬುದು ಉಪಲಕ್ಷಣ.

ಉಪಲಕ್ಷಣಯಾ ಏನನ್ನು ತೆಗೆದುಕೊಳ್ಳಬೇಕೆಂದು ವ್ಯಾಸಸ್ಮೃತಿಯು ಈ ರೀತಿಯಾಗಿ ತಿಳಿಸುತ್ತದೆ. ಆಯಾ ವೇದಗಳ ಅಧ್ಯಯನಕ್ಕೆ ಹೇಳಿದ ಸಂಸ್ಕಾರವನ್ನು ಪಡೆದವನು, ಯಾವುದೇ ವೇದದಲ್ಲಿಯ ಬ್ರಹ್ಮವಿದ್ಯೆಯನ್ನು

ಅಧ್ಯಯನ ಮಾಡಲು ಅಧಿಕೃತನಾಗುತ್ತಾನೆ. ಋಗ್ವೇದವನ್ನು ಅಧ್ಯಯನ ಮಾಡಲು, ಉಕ್ತವಾದ ಸಂಸ್ಕಾರಗಳಿಂದ ಸಂಸ್ಕೃತನಾಗಿರುವ ವ್ಯಕ್ತಿ ಯಜುರ್ವೇದದಲ್ಲಿಯ ಬ್ರಹ್ಮವಿದ್ಯೆಯನ್ನು ಅಧ್ಯಯನ ಮಾಡಬೇಕಾದಾಗ ಮತ್ತೆ ಪ್ರತ್ಯೇಕವಾಗಿ ಯಜುರ್ವೇದಿಗಳಿಗೆ ಉಕ್ತವಾದ ಸಂಸ್ಕಾರಗಳನ್ನು ಪಡೆಯುವ ಕಾರಣವಿಲ್ಲ. ಸ್ವವೇದವ್ರತಯುಕ್ತನಾಗಿದ್ದರೇ ಸಾಕು. ಹೀಗೆಯೇ ಯಜುರ್ವೇದಿಗಳಿಗೂ, ಸಾಮವೇದಿಗಳಿಗೂ ತಿಳಿಯಬೇಕು. ಯಾವನು ಸ್ವವೇದಾಧ್ಯಯನಕ್ಕೆ ಉಕ್ತವಾದ ಸಂಸ್ಕಾರದಿಂದ ಸಂಸ್ಕೃತನಾಗಿಲ್ಲವೋ ಅವನಿಗೆ ಯಾವ ವಿದ್ಯೆಯನ್ನೂ ಓದುವ ಅಧಿಕಾರವು ಇರುವುದಿಲ್ಲ. ಈ ಶಿರೋವ್ರತವೆಂದರೇ ಉಪಾಕರ್ಮವೆಂದು ಹಲವು ವ್ಯಾಖ್ಯಾನಕಾರರು ಅಭಿಪ್ರಾಯ ಪಡುತ್ತಾರೆ.

## ಖಂಡಾರ್ಥ

ಅಪರವಿದ್ಯೈವೋಪಾಧಿಭೇದೇನ ಪರವಿದ್ಯೇತಿ ಭಾವೇನ ಪ್ರಸ್ತಾವಪೂರ್ವಮಪರವಿದ್ಯಾಮಾಹ- **ತತ್ರಾऽಪರೇತಿ** ॥ ಉಪಾಧಿಭೇದೇನ ಭಿನ್ನತಯಾ ನಿರ್ದಿಷ್ಟಯೋರ್ಮಧ್ಯ ಇತ್ಯರ್ಥ: । ವರ್ಣಾನಾಂ ಸ್ಥಾನಪ್ರಯತ್ನಾದಿನಿರೂಪಕಂ ಶಾಸ್ತ್ರಂ ಶಿಕ್ಷಾ । ಪ್ರಸಿದ್ಧಪ್ರಯೋಗಬೋಧಿನೋ ಬೌಧಾಯನಾಪಸ್ತಂಬಾಶ್ವಲಾಯನಾದಿಗ್ರಂಥಾ: ಕಲ್ಪ: ।

ಸಿದ್ಧರೂಪಪ್ರಯೋಗೋ ಯೈ: ಕರ್ಮಣಾಮನುಗಮ್ಯತೇ ।
ತೇ ಕಲ್ಪಾ ಲಕ್ಷಣಾರ್ಥಾನಿ ಸೂತ್ರಾಣೀತಿ ಪ್ರಚಕ್ಷತೇ ॥

ಇತಿ ತಂತ್ರವಾರ್ತಿಕೋಕ್ತೇ: । ಶಬ್ದಾನುಶಾಸನಪರಂ ವ್ಯಾಕರಣಮ್ । ಶಬ್ದನಿರ್ವಚನಪರಂ ನಿರುಕ್ತಮ್ । ಗಾಯತ್ರ್ಯುಷ್ಣಿಗಾದಿಚ್ಛಂದಸಾಂ ಲಕ್ಷಣನಿರೂಪಕಂ ಛಂದ: । ಕಾಲನಿರ್ಣಯಪರಂ ಶಾಸ್ತ್ರಂ ಜ್ಯೋತಿಷಮ್ । ಏತದೇವ ಋಗಾದಿಶಾಸ್ತ್ರಮಕ್ಷರಾದಿಗತಿಹೇತುತ್ವೋಪಾದಿನಾ ಪರವಿದ್ಯೇತಿ ಭಾವೇನಾಹ- **ಅಥ ಪರೇತಿ** ॥ ಅವಸರಪ್ರಾಪ್ತಾ ಪರವಿದ್ಯಾ ನಿರೂಪ್ಯತ ಇತ್ಯರ್ಥ: । ಯದದ್ರೇಶ್ಯತ್ವಾದಿಗುಣಕಂ ತದಕ್ಷರಂ ಯಯಾ ವಿದ್ಯಯಾ ವಿಶ್ತಿಜನಕಋಗಾದಿ-ಶಾಸ್ತ್ರೇಣ ಅದಿಗಮ್ಯತೇ ನಾऽಕ್ಷರಜ್ಞಪ್ತಿಹೇತುತ್ವೋಪಾದಿನಾ ಪರವಿದ್ಯೇತ್ಯುಚ್ಯತ

ಇತ್ಯರ್ಥಃ । ತದುಕ್ತಂ 'ಋಗಾದ್ಯಾ ಅಪರಾ ವಿದ್ಯಾ' ಇತ್ಯಾದಿ । ಯದ್ವೈಕಮೇವ ಚ ಕರ್ಮ ಸಕಾಮತ್ವನಿಷ್ಕಾಮತ್ವೋಪಾಧಿಭ್ಯಾಂ ಪ್ರವೃತ್ತಂ ನಿವೃತ್ತಮಿತಿ ಚೋಚ್ಯತೇ ತದ್ವೇತಿ ಭಾವಃ ॥೧.೫॥

ಅನುವಾದ- ಅಪರವಿದ್ಯೆಯೇ ಮತ್ತೊಂದು ಉಪಾಧಿಯಿಂದ ಪರವಿದ್ಯೆ ಎನಿಸಿಕೊಳ್ಳುತ್ತದೆ ಎಂಬ ಭಾವನೆಯಿಂದ ಪ್ರಸ್ತಾವಪೂರ್ವಕವಾಗಿ ಅಪರವಿದ್ಯೆಯನ್ನು 'ತತ್ರಾಽಪರಾ...' ಎಂಬ ಮಾತುಗಳಿಂದ ವೇದಪುರುಷನು ಹೇಳುತ್ತಿದ್ದಾನೆ.

ತತ್ರ ಎಂದರೇ ಉಪಾಧಿಭೇದದಿಂದ ಭಿನ್ನವೆಂದು ನಿರ್ದಿಷ್ಟವಾದವುಗಳ ಮಧ್ಯದಲ್ಲಿ ಎಂದು ಅರ್ಥ. ವರ್ಣಗಳ ಸ್ಥಾನ ಪ್ರಯತ್ನ ಮುಂತಾದವುಗಳನ್ನು ನಿರೂಪಣೆ ಮಾಡುವ ಶಾಸ್ತ್ರ ಶಿಕ್ಷಾಶಾಸ್ತ್ರ. ಪ್ರಸಿದ್ಧವಾದ ಪ್ರಯೋಗಗಳನ್ನು ಬೋಧಿಸುವ ಬೋಧಾಯನ, ಆಪಸ್ತಂಭ ಆಶ್ವಲಾಯನ ಮುಂತಾದವರು ರಚಿಸಿರುವ ಗ್ರಂಥಗಳು ಕಲ್ಪ. ಶಬ್ದಗಳನ್ನು ಅನುಶಾಸನ ಮಾಡುವುದೇ ವ್ಯಾಕರಣಶಾಸ್ತ್ರ. ಶಬ್ದಗಳನ್ನು ನಿರ್ವಚನ ಮಾಡುವ ಶಾಸ್ತ್ರವೇ ನಿರುಕ್ತ. ಗಾಯತ್ರೀ-ಉಷ್ಣಿಕ್-ಬೃಹತೀ ಮೊದಲಾದ ಛಂದಸ್ಸುಗಳ ಲಕ್ಷಣಗಳನ್ನು ನಿರೂಪಿಸುವ ಶಾಸ್ತ್ರವೇ ಛಂದಃಶಾಸ್ತ್ರ. ಕಾಲವನ್ನು ನಿರ್ಣಯ ಮಾಡುವ ಶಾಸ್ತ್ರವೇ ಜ್ಯೋತಿಷ್ಯ.

ಈ ಋಗಾದಿಶಾಸ್ತ್ರವೇ ಅಕ್ಷರಾಧಿಗತಿಹೇತುತ್ವವೆಂಬ ಉಪಾಧಿಯಿಂದ (ಅಕ್ಷರನಾಮಕನಾದ ಪರಮಾತ್ಮನನ್ನು ತಿಳಿಸಿಕೊಡುವ ಕಾರಣಕ್ಕಾಗಿ) ಪರವಿದ್ಯೆ ಎನಿಸಿಕೊಳ್ಳುತ್ತದೆ ಎಂಬ ಭಾವನೆಯಿಂದ 'ಅಥ ಪರಾ' ಎಂದು ಪರವಿದ್ಯೆಯ ನಿರೂಪಣೆಯನ್ನು ವೇದಪುರುಷನು ಮಾಡುತ್ತಿದ್ದಾನೆ. ಅವಸರಸಂಗತಿಯಿಂದ ಪ್ರಾಪ್ತವಾದ ಪರವಿದ್ಯೆಯನ್ನು ಇನ್ನು ಮೇಲೆ ನಿರೂಪಿಸುತ್ತೇವೆ ಎಂದು ಅರ್ಥ. ಯಾವುದು ಅದ್ರೇಶ್ಯತ್ವವೇ ಮೊದಲಾದ ಗುಣಗಳಿಂದ ಯುಕ್ತವಾಗಿದೆಯೋ ಅಂತಹ ಅಕ್ಷರಬ್ರಹ್ಮನನ್ನು ಜ್ಞಾನವಿಷಯಕವಾದ ಯಾವ ಋಗಾದಿಶಾಸ್ತ್ರದಿಂದ ತಿಳಿಯಲು ಸಾಧ್ಯವಾಗುತ್ತದೋ ಆ ವಿದ್ಯೆಯೇ ಅಕ್ಷರಪ್ರಾಪ್ತಿಹೇತುತ್ವವೆಂಬ ಉಪಾಧಿಯಿಂದ ಪರವಿದ್ಯೆ.

ಎನಿಸಿಕೊಳ್ಳುತ್ತದೆ ಎಂದು ಅರ್ಥ. 'ಋಗಾದ್ಯಾ ಅಪರಾ ವಿದ್ಯಾ:' ಎಂಬ ಭಾಷ್ಯದ ಪ್ರಮಾಣವಚನವು ಇದೇ ವಿಷಯವನ್ನೇ ಸ್ಪಷ್ಟಪಡಿಸುತ್ತದೆ. ಹೇಗೆ ಒಂದೇ ಕರ್ಮವು ಸಾಮವಾಗಿ ಮಾಡಿದಾಗ ಸಾಮತ್ವವೆಂಬ ಉಪಾಧಿಯಿಂದ ಪ್ರವೃತ್ತಕರ್ಮವೆಂದು, ನಿಷ್ಕಾಮವಾಗಿ ಮಾಡಿದಾಗ ನಿಷ್ಕಾಮತ್ವವೆಂಬ ಉಪಾಧಿಯಿಂದ ನಿವೃತ್ತಕರ್ಮವೆಂದು ಹೇಳಲ್ಪಡುವುದೋ ಹಾಗೆಯೇ ಒಂದೇ ವಿದ್ಯೆಯು ಮುಖ್ಯಾರ್ಥಪ್ರತಿಪಾದಕತ್ವ, ಅಮುಖ್ಯಾರ್ಥಪ್ರತಿಪಾದ-ಕತ್ವವೆಂಬ ಉಪಾಧಿದ್ವಯಗಳಿಂದ ದ್ವಿವಿಧವಾಗಿದೆ ಎಂದು ಪ್ರಕೃತದಲ್ಲಿ ಹೇಳಲ್ಪಟ್ಟಿದೆ ಎಂದು ತಿಳಿಯಬೇಕು. ॥ ೧.೫ ॥

**ಉಪನಿಷತ್**

**ಯತ್ ತದದ್ರೇಶ್ಯಮಗ್ರಾಹ್ಯಮಗೋತ್ರಮವರ್ಣ-**
**ಮಚಕ್ಷುಃಶ್ರೋತ್ರಂ ತದಪಾಣಿಪಾದಮ್ ।**
**ನಿತ್ಯಂ ವಿಭುಂ ಸರ್ವಗತಂ ಸುಸೂಕ್ಷ್ಮಂ ತದವ್ಯಯಂ**
**ಯದ್ ಭೂತಯೋನಿಂ ಪರಿಪಶ್ಯಂತಿ ಧೀರಾಃ ॥೧.೬॥**

**ಉಪನಿಷದರ್ಥ-** ಯಾವುದು ಕಣ್ಣು ಮೊದಲಾದ ಬಾಹ್ಯವಾದ ಇಂದ್ರಿಯಗಳಿಗೆ ಗೋಚರವಾಗಿಲ್ಲವೋ, ಮತ್ತು ಆಂತರವಾದ ಮನೋರೂಪ-ವಾದ ಇಂದ್ರಿಯಕ್ಕೂ ಗೋಚರವಲ್ಲವೋ, ಗೋತ್ರರಹಿತವಾಗಿದೆಯೋ, ಪ್ರಾಕೃತವಾದ ವರ್ಣಗಳಿಂದ ರಹಿತವಾಗಿದೆಯೋ, ಪ್ರಾಕೃತವಾದ ಚಕ್ಷುರಿಂದ್ರಿಯ-ಶ್ರೋತ್ರೇಂದ್ರಿಯಗಳಿಂದ ರಹಿತವಾಗಿದೆಯೋ, ಪ್ರಾಕೃತವಾದ ಕಾಲು, ಕೈ ಮೊದಲಾದ ಅವಯವಗಳಿಂದ ರಹಿತವಾಗಿದೆಯೋ, ದೇಹತಃ ನಾಶರಹಿತವಾಗಿದೆಯೋ, ಸಮರ್ಥವಾಗಿದೆಯೋ, ಸರ್ವವ್ಯಾಪ್ತವಾಗಿದೆಯೋ, ಅತಿಶಯವಾಗಿ ಸೂಕ್ಷ್ಮವಾಗಿದೆಯೋ, ಅಂತಹ ಅಕ್ಷರಬ್ರಹ್ಮ ಎಲ್ಲ ಭೂತಗಳಿಗೆ ಕಾರಣವೆಂಬುದಾಗಿ ಮತ್ತು ಶಶ್ವದೇಕಪ್ರಕಾರ ಎಂಬುದಾಗಿ ಜ್ಞಾನಿಗಳಾದವರು ತಿಳಿಯುತ್ತಾರೆ.

### ಖಂಡಾರ್ಥ

ಕೀದೃಶಂ ತದಕ್ಷರಮಿತ್ಯತಸ್ತನ್ಮಹಿಮಾನಮಾಹ- **ಯತ್ತದಿತಿ** ॥ ಯದಕ್ಷರಮದ್ರೇಶ್ಯಂ ದೃಷ್ಟ್ಯುಪಲಕ್ಷಿತಬಾಹ್ಯೇಂದ್ರಿಯಾವಿಷಯಃ, ಅಗ್ರಾಹ್ಯಂ ಮನಸೋಽಪ್ಯವಿಷಯಃ । ಸಾಕಲ್ಯೇನೇತಿ ವಾ, ಅಯೋಗ್ಯೈರಿತಿ ವಾ ಯೋಜ್ಯಮ್ । ಯದ್ವಾ ದೃಶ್ಯಾದನ್ಯದದೃಶ್ಯಮ್ । ಗ್ರಾಹ್ಯಾದನ್ಯದಗ್ರಾಹ್ಯಮಿತ್ಯರ್ಥಃ । ನ ವಿದ್ಯತೇ ಗೋತ್ರಂ ವರ್ಣೋ ವಾ ಯಸ್ಯ ತದಗೋತ್ರಮ್ ಅವರ್ಣಮ್ । ಅಚಕ್ಷುಃಶ್ರೋತ್ರಮಿತ್ಯಾದೇಃ ಪ್ರಾಕೃತಚಕ್ಷುರಾದಿಶೂನ್ಯಮಿತ್ಯರ್ಥಃ । ನಿತ್ಯಂ ದೇಹತೋಽಪಿ ನಾಶರಹಿತಮ್ । ವಿಭುಂ ಸಮರ್ಥಮ್ । ಸರ್ವಗತಂ ಸರ್ವವ್ಯಾಪಿ । ಸರ್ವಗತತ್ವೇ ಪ್ರತಿಹತಿಃ ಸ್ಯಾದಿತ್ಯತ ಆಹ- **ಸುಸೂಕ್ಷ್ಮಮಿತಿ** ॥ ಅತ್ಯಂತಾಪ್ರತಿಘಮ್ । 'ಸೂಕ್ಷ್ಮಂ ತು ತದರ್ಹತ್ವಾತ್' ಇತ್ಯುಕ್ತೇಃ । ತತ್ತ್ವಯಾ ಪೃಷ್ಟಮಕ್ಷರಮಿತಿ ಪೂರ್ವಂ ಶ್ರುತತತ್ಪದಸ್ಯಾನ್ವಯಃ । ಅದ್ರೇಶ್ಯಮಿತ್ಯುಕ್ತಿಃ ನ ಸರ್ವಥೇತಿ ಭಾವೇನಾಽಕ್ಷರಸ್ಯ ಗುಣಾಂತರಮಾಹ- **ತದವ್ಯಯಮಿತ್ಯಾದಿನಾ** ॥ ಯದಕ್ಷರಂ ಭೂತಾನಾಂ ಪ್ರಾಣಿನಾಂ ಯೋನಿಂ ಕಾರಣಂ ಧೀರಾ ಜ್ಞಾನಿನಃ ಪರಿಪಶ್ಯಂತಿ ಅವ್ಯಯಂ ಶಶ್ವದೇಕಪ್ರಕಾರಭೂತಂ, ತತ್ ಪ್ರಾಗುಕ್ತಮಕ್ಷರಮಿತ್ಯರ್ಥಃ । ತದಾ ಚ ಸೂತ್ರಂ 'ಅದೃಶ್ಯತ್ವಾದಿಗುಣಕೋ ಧರ್ಮೋಕ್ತೇಃ' ಇತಿ ॥೧.೬ ॥

**ಅನುವಾದ**- ಆ ಅಕ್ಷರವು ಎಂಥದ್ದು ಎಂದು ಕೇಳಿದರೇ ಅಕ್ಷರದ ಮಹಿಮೆಯನ್ನು 'ಯತ್ತತ್...' ಎಂಬ ಮಾತುಗಳಿಂದ ಹೇಳುತ್ತಿದ್ದಾರೆ. ಯಾವ ಅಕ್ಷರವು ಅದೃಶ್ಯವಾಗಿದೆಯೋ ಅಂದರೇ ದೃಷ್ಟಿಯಿಂದ ಉಪಲಕ್ಷಿತವಾದ ಬಾಹ್ಯವಾದ ಶ್ರೋತ್ರ ಮೊದಲಾದ ಯಾವ ಇಂದ್ರಿಯಗಳಿಗೂ ಗೋಚರವಾಗಿಲ್ಲವೋ ಎಂದು ಅರ್ಥ. ಅಗ್ರಾಹ್ಯಂ ಎಂದರೇ ಮನಸ್ಸಿಗೂ ವಿಷಯನಾಗದವನು ಎಂದು ಅರ್ಥ. ಪರಿಪೂರ್ಣವಾಗಿ ತಿಳಿಯಲು ಸಾಧ್ಯನಾಗದವನು ಎಂದಾದರೂ ಅರ್ಥಮಾಡಿಕೊಳ್ಳಬಹುದು. ಅಥವಾ ಅಯೋಗ್ಯಜನರಿಂದ ತಿಳಿಯಲಾಗದವನು ಎಂದಾದರೂ ಅರ್ಥವನ್ನು ಯೋಜಿಸಿಕೊಳ್ಳಬೇಕು. ಅಥವಾ ದೃಶ್ಯದಿಂದ ಭಿನ್ನನಾದವನು ಅದ್ರೇಶ್ಯ ಎಂದು ಅರ್ಥ ಮಾಡಿಕೊಳ್ಳಬೇಕು. ಹಾಗೆಯೇ ಅಗ್ರಾಹ್ಯ ಎಂದರೇ

ತಿಳಿಯಲಾಗುವ ಪದಾರ್ಥಗಳಿಂದ ಭಿನ್ನನಾದವನು ಎಂದು ಅರ್ಥಮಾಡಿಕೊಳ್ಳಬೇಕು. ಕಾಶ್ಯಪ ವಸಿಷ್ಠ ವಿಶ್ವಾಮಿತ್ರ ಅತ್ರಿ ಮೊದಲಾದ ಗೋತ್ರಗಳು ಇಲ್ಲದವನು. ಮತ್ತು ಪ್ರಾಕೃತವಾದ ಕಪ್ಪು-ಬಿಳುಪು ಮೊದಲಾದ ಬಣ್ಣವಿಲ್ಲದವನು ಆದ್ದರಿಂದ ಅವನು ಅಗೋತ್ರ ಅವರ್ಣ ಎಂದು ತಿಳಿಯಬೇಕು. ಅಚಕ್ಷುಃಶ್ರೋತ್ರಂ ಇತ್ಯಾದಿಗಳಿಗೆ ಪ್ರಾಕೃತವಾದ ಚಕ್ಷುರಾದಿ ಇಂದ್ರಿಯಗಳು ಇಲ್ಲದವನು ಎಂದು ಅರ್ಥವನ್ನು ತಿಳಿಯಬೇಕು. ನಿತ್ಯ ಎಂದರೇ ದೇಹದಿಂದಲೂ ನಾಶವಿಲ್ಲದವನು ಎಂದು ತಿಳಿಯಬೇಕು. ವಿಭು ಎಂದರೇ ಸಮರ್ಥನಾದವನು ಎಂದು ಅರ್ಥ. ಸರ್ವಗತ ಎಂದರೇ ಸರ್ವತ್ರ ವ್ಯಾಪ್ತನಾದವನು ಎಂದು ಅರ್ಥ. ಭಗವಂತ ಸರ್ವಗತನಾದರೇ ಪ್ರತಿಹತಿಯು ಅಂದರೇ ನಡೆದಾಡುವ ಬೆಳೆಯುವ ಎಲ್ಲರಿಗೂ ತಡೆಯಾಗಬೇಕಾದೀತು ಎಂಬ ಸಮಸ್ಯೆಯು ಬರುತ್ತದೆ. 'ಸುಸೂಕ್ಷ್ಮಮ್' ಎಂಬ ವಚನವು ಈ ಶಂಕೆಯನ್ನು ಪರಿಹರಿಸುತ್ತದೆ. ದೇವರ ಸರ್ವವ್ಯಾಪ್ತಿಯಿಂದ ಯಾರಿಗೂ ಯಾವುದೇ ರೀತಿಯಾದ ತಡೆಯು ಉಂಟಾಗುವುದಿಲ್ಲವೆಂದು ತಿಳಿಯಬೇಕು. ದೇವರು ಬಲು ಸೂಕ್ಷ್ಮನೆಂದು ಈ ಸೂತ್ರವು ತಿಳಿಸುತ್ತದೆ. 'ಸೂಕ್ಷ್ಮಂ ತು ತದರ್ಹತ್ವಾತ್' (ಬ್ರ.ಸೂ.೧.೪.೨) 'ಸೂಕ್ಷ್ಮವಾದುದೇ ಅವ್ಯಕ್ತಶಬ್ದವಾಚ್ಯವಾಗಲು ಅರ್ಹವಾಗಿದೆ. ಮುಖ್ಯವಾಗಿ ಸೂಕ್ಷ್ಮತ್ವವು ಭಗವಂತನಿಗೆ ಮಾತ್ರವಿದೆ' 'ತತ್ ತ್ವಯಾ ಪೃಷ್ಟಂ ಅಕ್ಷರಮ್' ಅದುವೇ ನೀನು ಹಿಂದೆ ಕೇಳಿದ ಅಕ್ಷರವು ಎಂದು ಪೂರ್ವದಲ್ಲಿ ಶ್ರುತವಾದ ತತ್ ಶಬ್ದದ ಅನ್ವಯವನ್ನು ಮಾಡಿಕೊಳ್ಳಬೇಕು. ಸರ್ವಥಾ ಅದೃಶ್ಯ ಎಂಬ ಭಾವನೆಯಿಂದ ಇಲ್ಲಿ ಅದ್ರೇಶ್ಯತ್ವವನ್ನು ಹೇಳಿಲ್ಲ ಎಂಬುದನ್ನು ತಿಳಿಸಲು ಅಕ್ಷರನ ಗುಣಾಂತರಗಳನ್ನು 'ತದವ್ಯಯಂ' ಇತ್ಯಾದಿವಚನಗಳಿಂದ ತಿಳಿಸುತ್ತಿದ್ದಾರೆ. ಯಾವ ಅಕ್ಷರವು ಪ್ರಾಣಿಗಳಿಗೆ ಕಾರಣವಾಗಿದೆ ಎಂಬುದಾಗಿ ಜ್ಞಾನಿಗಳು ತಿಳಿಯುತ್ತಾರೋ ಶಬ್ದದೇಕಪ್ರಕಾರವಾಗಿದೆಯೋ ಅದುವೇ ಹಿಂದೆ ಹೇಳಲ್ಪಟ್ಟ ಅಕ್ಷರವೆಂದು ತಿಳಿಯಬೇಕು. ಈ ಅದೃಶ್ಯತ್ವಾದಿ ಗುಣಗಳುಳ್ಳವನು ಭಗವಂತನೆಂದೇ ಈ ಸೂತ್ರವೂ ತಿಳಿಸುತವೆ. 'ಅದೃಶ್ಯತ್ವಾದಿಗುಣಕೋ ಧರ್ಮೋಕ್ತೇಃ'(ಬ್ರ.ಸೂ.೧.೨.೨೧)'ಯತ್ತದದ್ರೇಶ್ಯಂ ಎಬ ಈ ಮಂತ್ರದಲ್ಲಿ

ಉಕ್ತವಾದ ಅದೃಶ್ಯತ್ವಾದಿ ಗುಣಗಳುಳ್ಳವನು ವಿಷ್ಣುವೇ ಆಗಿದ್ದಾನೆ. ಪೃಥಿವ್ಯಾದಿಗಳಲ್ಲ. ಯಾಕೆಂದರೇ ಅದೃಶ್ಯತ್ವಾದಿಧರ್ಮಗಳಿರುವವನೇ ಪರವಿದ್ಯಾವಿಷಯನಾಗಿದ್ದಾನೆ ಎಂದು ತಿಳಿಸಿದ್ದಾರೆ ॥೧.೬॥

**ಉಪನಿಷತ್**

**ಯಥೋರ್ಣನಾಭಿಃ ಸೃಜತೇ ಗೃಹ್ಣತೇ ಚ**
**ಯಥಾ ಪೃಥಿವ್ಯಾಮೋಷಧಯಃ ಸಂಭವಂತಿ ।**
**ಯಥಾ ಸತಃ ಪುರುಷಾತ್ಕೇಶಲೋಮಾನಿ**
**ತಥಾಕ್ಷರಾತ್ಸಂಭವತೀಹ ವಿಶ್ವಮ್ ॥೧.೭॥**

**ಉಪನಿಷದರ್ಥ-** ಊರ್ಣನಾಭಿಯು ಅಂದರೇ ಜೇಡರ ಹುಳವು ತಾನು ತಿಂದಿರುವ ಪದಾರ್ಥಗಳ ಪರಿಣಾಮವಾದ ಜಾಲವನ್ನು ತನ್ನ ಸುತ್ತಲೂ ಸೃಷ್ಟಿಸಿಕೊಳ್ಳುವುದೋ, ತನಗೆ ಬೇಡವಾದಾಗ ತಾನು ಸೃಷ್ಟಿಸಿದ ಆ ಜಾಲವನ್ನು ತಾನೇ ತಿಂದು ಹಾಕುವುದೋ, ಈ ಭೂಮಿಯು ತನ್ನಲ್ಲಿ ಬಿತ್ತಿದ ಬೀಜಗಳಿಗೆ ಅನುಗುಣವಾಗಿ ಮಾವು, ಬೇವು ಮೊದಲಾದ ಅಂಕುರಗಳನ್ನು ಹುಟ್ಟಿಸುತ್ತದೋ. ಚೇತನನಿರುವ ದೇಹದಿಂದ ತಲೆಯ ಕೂದಲುಗಳು ದೇಹದಲ್ಲಿಯ ಕೂದಲುಗಳು ಅನಾಯಾಸವಾಗಿ ಹೇಗೆ ಜನಿಸುತ್ತವೋ ಹಾಗೆಯೇ ಅಕ್ಷರನಿಂದ ಈ ಪ್ರಪಂಚವೆಲ್ಲವೂ ಜನಿಸುತ್ತದೆ. ಈ ಪ್ರಪಂಚವೆಲ್ಲವೂ ಅವನಲ್ಲಿಯೇ ಸಂಹೃತವಾಗುತ್ತದೆ ಎಂದು ತಿಳಿಯಬೇಕು.

**ಖಂಡಾರ್ಥ**

ಯದ್ಭೂತಯೋನಿಮಿತ್ಯುಕ್ತಭೂತಕಾರಣತ್ವಂ ಸಂಹರ್ತೃತ್ವಸ್ಯೋಪಲಕ್ಷಣಂ ಇತ್ಯುಪೇತ್ಯ ತದುಭಯಪ್ರಕಾರಂ ದೃಷ್ಟಾಂತಪೂರ್ವಂ ವ್ಯನಕ್ತಿ- **ಯಥೇತಿ** ॥ ಊರ್ಣನಾಭಿಃ ಜಂತುವಿಶೇಷಃ ಸ್ವೋಪಭುಕ್ತವಸ್ತೂನಿ ತಂತ್ವಾತ್ಮನಾ ಸ್ವೋದರೇ ಪರಿಣತಾನಿ ಸೃಜತೇ ಬಹಿರ್ನಿಷ್ಕಾಸಯತಿ । ಗೃಹ್ಣತೇ ಗೃಹ್ಣಾತಿ ಚ । ತಂತ್ವಾದ್ಯಾಕಾರತಯಾ ಬಹಿರ್ನಿಷ್ಕಾಸಿತಂ ಪುನರಂತಃ ಸ್ವೋದರೇ ಗೃಹ್ಣಾತಿ । ತಥಾ ವಿಶ್ವಂ ಲಯೇ ನಿಗೀರ್ಣಂ ಸತ್ ಅಕ್ಷರಾದ್ಬಹಿರ್ದೇಶೇ

ಸಂಭವತೀತ್ಯರ್ಥ: । ನ ತು ವಿಕ್ರಾತ್ಮನಾ ಪರಿಣಮಮಾನತ್ವಂ, ನ ವಾ ತದಾತ್ಮನಾ ವಿವರ್ತತ್ವಂ ಚ ಭೂತಯೋನಿತ್ವಮಿತ್ಯರ್ಥ: । ಏತಚ್ಚೋಪಲಕ್ಷಣಮ್ । ಊರ್ಣನಾಭಿನಾ ತಂತುರಾಶಿರಿವ ಸಂಹ್ರಿಯತೇ ಚೇತ್ಯಪಿ ಧ್ಯೇಯಮ್ । ನಾನಾವಿಧಸೃಷ್ಟೌ ವೈಷಮ್ಯಾದಿದೋಷ: ಕಿಂ ನೇತ್ಯತ ಉಕ್ತಮ್- **ಯಥಾ ಪೃಥಿವ್ಯಾಮಿತಿ** ॥ ಯಥಾ ಪೃಥಿವೀ ಶಾಲ್ಯಾದಿನಾನಾಬೀಜಾನ್ಯಪೇಕ್ಷ್ಯ ನಾನಾವಿಧಾಂಕುರಾನ್ ಜನಯತಿ ತಥಾ ಜೀವಾನಾಂ ನಾನಾವಿಧಕರ್ಮಾಣ್ಯನುಸೃತ್ಯ ನಾನಾವಿಧಜೀವಾನ್ ಸೃಜತೀತ್ಯರ್ಥ: । ತಥಾಚ ಸೂತ್ರಂ 'ವೈಷಮ್ಯನೈರ್ಘೃಣ್ಯೇ ನ ಸಾಪೇಕ್ಷತ್ವಾತ್' ಇತಿ । ನನು ಅಕ್ಷರಸ್ಯ ವಿಶ್ವಸೃಷ್ಟ್ಯಾದಿನಾ ಫಲಸತ್ತ್ವೇಽಪೂರ್ಣತಾಪ್ರಾಪ್ತಿ: । ತದಸತ್ತ್ವೇ ಪ್ರೇಕ್ಷಾವತಸ್ತತ್ರ ಪ್ರವೃತ್ತ್ಯಯೋಗ ಇತ್ಯತ ಉಕ್ತಮ್- **ಯಥಾ ಸತ ಇತಿ** ॥ ಯಥಾ ಸತ: ಚೇತನಾಧಿಷ್ಠಿತಾತ್ ಪುರುಷಾತ್ ದೇಹಾತ್ ಕೇಶಲೋಮಾನ್ಯನಾಯಾಸೇನ ಭವಂತಿ ತಥಾಽಕ್ಷರಾದನಾಯಾಸೇನ ವಿಶ್ವಂ ಸಂಭವತೀತ್ಯರ್ಥ: । ಅತ್ಯಾಯಾಸಸಾಧ್ಯೇ ಹಿ ಫಲಾಪೇಕ್ಷಾ । ಅನಾಯಾಸಸಾಧ್ಯೇಽಂಗುಲಿಚಾಲನಾದೌ ಲೋಕೇ ಪ್ರೇಕ್ಷಾವತಾಮಪಿ ನ ಫಲಾಪೇಕ್ಷಾಽಸ್ತೀತಿ ಭಾವ: । ಶಿರೋರುಹಾ: ಕೇಶಾ:, ದೇಹಜಾನಿ ಲೋಮಾನೀತಿ ವಿವೇಕ: ॥೧.೭॥

**ಅನುವಾದ-** 'ಯದ್ಭೂತಯೋನಿಂ' ಎಂಬಲ್ಲಿ ಭೂತಕಾರಣತ್ವವು ಅಕ್ಷರನಿಗೆ ಉಕ್ತವಾಗಿದೆ. ಉಪಲಕ್ಷಣಯಾ ಅಕ್ಷರನಲ್ಲಿ ಸಂಹಾರಕರ್ತೃತ್ವವನ್ನೂ ಚಿಂತಿಸಬೇಕೆಂಬ ಭಾವನೆಯಿಂದ '**ಯಥಾ...**' ಎಂಬ ಮಂತ್ರದಲ್ಲಿ ಈ ಎರಡನ್ನೂ ದೃಷ್ಟಾಂತಪೂರ್ವಕವಾಗಿ ಹೇಳುತ್ತಿದ್ದಾರೆ.

ಊರ್ಣನಾಭಿಯು, ಜೇಡರ ಹುಳವು ತಾನು ತಿಂದಿರುವ ಪದಾರ್ಥಗಳನ್ನು ದಾರವಾಗಿ ಪರಿಣಮಿಸಿಕೊಂಡು ಆ ದಾರವನ್ನು ಹೊರಗೆ ಹಾಕುತ್ತದೆ. ಹೊರಗೆ ಹಾಕಿದ ಆ ಪದಾರ್ಥವನ್ನು ತಾನೇ ಮತ್ತೆ ತನ್ನ ಹೊಟ್ಟೆಯಲ್ಲಿ ಹಾಕಿಕೊಳ್ಳುತ್ತದೆ. ಇದೇ ರೀತಿಯಾಗಿ ಅಕ್ಷರನಾಮಕನಾದ ಪರಮಾತ್ಮನು ಲಯಕಾಲದಲ್ಲಿ ತನ್ನ ಹೊಟ್ಟೆಯೊಳಗೆ ಹಾಕಿಕೊಂಡ ಪ್ರಪಂಚವನ್ನೆಲ್ಲ ಸೃಷ್ಟಿಕಾಲದಲ್ಲಿ ತನ್ನ ಹೊಟ್ಟೆಯಿಂದ ಹೊರಗೆ ಹಾಕುವ

ಮೂಲಕ ಸೃಷ್ಟಿಸುತ್ತಾನೆ ಎಂದು ತಿಳಿಯಬೇಕು. ಇದರ ಹೊರತು ಘಟಕ್ಕೆ ಮಣ್ಣಿನಂತೆ ಪ್ರಪಂಚಕ್ಕೆ ಪರಮಾತ್ಮ ಪರಿಣಾಮಿಕಾರಣನೆಂದು, ಸರ್ಪಭ್ರಮಕ್ಕೆ ಹಗ್ಗದಂತೆ, ಪ್ರಪಂಚವೆಂಬ ಭ್ರಾಂತಿಗೆ ಅಧಿಷ್ಠಾನನಾಗಿದ್ದಾನೆಂದು ಚಿಂತಿಸಬಾರದು. ಇದು ಉಪಲಕ್ಷಣ. ಜೇಡರ ಹುಳ ತಾನು ಸೃಷ್ಟಿಸಿದ ಜಾಲವನ್ನು ತಾನೇ ತಿಂದುಹಾಕುವಂತೆ ಪ್ರಲಯದಲ್ಲಿ ಈ ಎಲ್ಲ ಪ್ರಪಂಚವನ್ನು ತಿನ್ನುವ ಮೂಲಕ ಸಂಹರಿಸುತ್ತಾನೆ ಎಂದೂ ತಿಳಿಯಬೇಕು.

ನಾನಾವಿಧವಾದ ಸೃಷ್ಟಿಯನ್ನು ಮಾಡಿದ್ದಕ್ಕಾಗಿ ದೇವರಲ್ಲಿ ವೈಷಮ್ಯವೆಂಬ ದೋಷ ಬರುತ್ತದಲ್ಲಾ ಎಂಬ ಶಂಕೆ ಬಂದರೇ ಆ ಶಂಕೆಯನ್ನು 'ಯಥಾ ಪೃಥಿವ್ಯಾಂ' ಎಂಬ ವಚನವು ಪರಿಹರಿಸುತ್ತದೆ. ಯಾವ ರೀತಿಯಾಗಿ ಭೂಮಿಯು ಭತ್ತ ಮೊದಲಾದ ನಾನಾವಿಧವಾದ ಬೀಜಗಳನ್ನು ಅಪೇಕ್ಷಿಸಿಯೇ ನಾನಾವಿಧವಾದ ಮೊಳಕೆಗಳನ್ನು ಹುಟ್ಟಿಸುತ್ತದೋ, ಹಾಗೆಯೇ ಜೀವರಾಶಿಗಳು ಮಾಡಿದ ಸಾತ್ತ್ವಿಕ-ರಾಜಸ- ತಾಮಸವೆಂಬ ಮೂರುವಿಧವಾದ ಕರ್ಮಗಳನ್ನು ಅಪೇಕ್ಷಿಸಿಯೇ ಭಗವಂತ ನಾನಾವಿಧವಾದ ಜೀವರ ಸಮುದಾಯವನ್ನು ಸೃಷ್ಟಿಸುತ್ತಾನೆ. ಅಂದರೇ ಆಯಾ ಜೀವರಾಶಿಗಳಿಗೆ ಮನುಷ್ಯ ಪ್ರಾಣಿ, ಪಶು, ಪಕ್ಷಿ ಮೊದಲಾದ ಯೋನಿಗಳನ್ನು ಕೊಡುತ್ತಾನೆ ಎಂದು ಅರ್ಥ. ಜೀವರ ತ್ರಿವಿಧಕರ್ಮಗಳಿಗೆ ಅನುಗುಣವಾಗಿ ಅವರವರಿಗೆ ಯೋಗ್ಯವಾದ ಯೋನಿಗಳನ್ನು ಸೃಷ್ಟಿಸುತ್ತಾನಾದ್ದರಿಂದ ದೇವರಲ್ಲಿ ವೈಷಮ್ಯಕ್ಕೆ ಸರ್ವಥಾ ಅವಕಾಶವಿರುವುದಿಲ್ಲ. ಇಲ್ಲವಾದರೇ ಭೂಮಿಯಲ್ಲಿಯೂ ವೈಷಮ್ಯವಿದೆ ಎಂದು ತಿಳಿಯಬೇಕಾದೀತು. ಬ್ರಹ್ಮಸೂತ್ರವು ಕೂಡಾ ಇದೇ ವಿಷಯವನ್ನು ತಿಳಿಸುತ್ತದೆ. 'ವೈಷಮ್ಯನೈರ್ಘೃಣ್ಯೇ ನ ಸಾಪೇಕ್ಷತ್ವಾತ್' (ಬ್ರ.ಸೂ.೧.೨.೩೪) 'ಪುಣ್ಯೇನ ಪುಣ್ಯಂ ನಯತಿ ಪಾಪೇನ ಪಾಪಂ' ಎಂದು ಶ್ರುತಿ ಇರುವುದರಿಂದ, ದೇವರು ಜೀವರ ಕರ್ಮಗಳನ್ನು ಅಪೇಕ್ಷಿಸಿಯೇ ಫಲವನ್ನು ನೀಡುತ್ತಾನೆ ಆದ್ದರಿಂದ ಅವನಲ್ಲಿ ವೈಷಮ್ಯವಾಗಲೀ ನೈರ್ಘೃಣ್ಯವಾಗಲೀ ಇರುವುದಿಲ್ಲ.

ಅಕ್ಷರನಾಮಕನಾದ ಪರಮಾತ್ಮ ಈ ಪ್ರಪಂಚವನ್ನು ಸೃಷ್ಟಿಸುತ್ತಾನೆ. ಹಾಗೆಯೇ ಸಂಹರಿಸುತ್ತಾನೆ. ಈ ಕಾರ್ಯಗಳಿಂದ ದೇವರಿಗೆ ಏನಾದರೂ ಪ್ರಯೋಜನವಿದೆ ಎಂದಾದರೇ ದೇವರು ಅಪೂರ್ಣನಾಗಬೇಕಾದೀತು. ಪ್ರಯೋಜನವೇನೂ ಇಲ್ಲವೆಂದಾದರೇ ಪ್ರೇಕ್ಷಾವಂತನಾದ ಪರಮಾತ್ಮನಿಗೆ ಆ ಕಾರ್ಯಗಳಲ್ಲಿ ಪ್ರವೃತ್ತಿಯೇ ಇಲ್ಲದೇ ಹೋಗಬೇಕಾದೀತು ಎಂಬ ಸಮಸ್ಯೆಯನ್ನು 'ಯಥಾ ಸತಃ..' ಎಂಬ ಮಾತಿನಿಂದ ವೇದಪುರುಷನು ಪರಿಹರಿಸುತ್ತಾನೆ.

ಚೇತನನಿಂದ ಅಧಿಷ್ಠಿತವಾದ ದೇಹದಿಂದ ಕೇಶ-ಲೋಮಗಳು ಹೇಗೆ ಅನಾಯಾಸವಾಗಿ ಹುಟ್ಟುತ್ತವೋ ಹಾಗೆ ಅಕ್ಷರನಿಂದ ಈ ಪ್ರಪಂಚವೆಲ್ಲ ಅನಾಯಾಸವಾಗಿ ಹುಟ್ಟುತ್ತದೆ ಎಂದು ತಿಳಿಯಬೇಕು.

ಅತಿಯಾದ ಆಯಾಸದಿಂದ ಕರ್ಮಗಳನ್ನು ಮಾಡಿದಾಗ ಫಲದ ಅಪೇಕ್ಷೆ ಇರುವುದು ಲೋಕದಲ್ಲಿ ಕಂಡಿದೆ. ಅನಾಯಾಸವಾಗಿ ಸಾಧ್ಯವಾದ ಬೆರಳಾಡಿಸುವುದೇ ಮೊದಲಾದ ಕರ್ಮಗಳನ್ನು ಮಾಡುವಾಗ ಯಾವುದೇ ವಿಧವಾದ ಪ್ರಯೋಜನದ ಅನುಸಂಧಾನ ಪ್ರೇಕ್ಷಾವಂತರಿಗೆ ಇರುವುದಿಲ್ಲವೆಂಬ ಅಭಿಪ್ರಾಯವು ಈ ಮಾತಿನಿಂದ ತಿಳಿದು ಬರುತ್ತದೆ. ಕೇಶಗಳು ಎಂದರೇ ತಲೆಕೂದಲುಗಳು ಎಂದು ಲೋಮಾನಿ ಎಂದರೇ ದೇಹದಲ್ಲಿಯ ಕೂದಲುಗಳು ಎಂದು ಅರ್ಥವನ್ನು ತಿಳಿಯಬೇಕು.

### ಉಪನಿಷತ್

**ತಪಸಾ ಚೀಯತೇ ಬ್ರಹ್ಮ ತತೋऽನ್ನಮಭಿಜಾಯತೇ । ಅನ್ನಾತ್ ಪ್ರಾಣೋ ಮನಃ ಸತ್ಯಂ ಲೋಕಾಃ ಕರ್ಮಸು ಚಾऽಮೃತಮ್ ॥೧.೮॥**

**ಉಪನಿಷದರ್ಥ-** ಅಕ್ಷರನಾಮಕನಾದ ಪರಮಾತ್ಮನು, ಸೃಷ್ಟಿಸುವ ಮೊದಲು ಈ ಪ್ರಪಂಚವನ್ನು ಹೇಗೆ ಸೃಷ್ಟಿಸಬೇಕೆಂದು ಆಲೋಚಿಸುತ್ತಾನೆ. ಹೀಗೆ ಆಲೋಚನೆ ಮಾಡಿದ ನಂತರ ಅನ್ನ ಮತ್ತು ಅನ್ನಾಭಿಮಾನಿಗಳಾದ

ದೇವತೆಗಳು ಆ ಪರಮಾತ್ಮನಿಂದ ಹುಟ್ಟುತ್ತಾರೆ. ಅನ್ನದಿಂದ ಪ್ರಾಣ, ಮನಸ್ಸು ಯಥಾರ್ಥವಚನರೂಪವಾದ ಸತ್ಯ, ಲೋಕಗಳು, ಕರ್ಮಗಳು, ಕರ್ಮಗಳಿಂದ ಪ್ರಾಪ್ಯವಾಗುವ ಸ್ವರ್ಗಾದಿಗಳು, ಕ್ರಮವಾಗಿ ಒಂದರ ನಂತರ ಮತ್ತೊಂದಾಗಿ ಜನಿಸುತ್ತವೆ. ಮತ್ತು ಇವುಗಳಿಗೆಲ್ಲ ಅಭಿಮಾನಿಗಳಾದ ದೇವತೆಗಳು ಕೂಡಾ ಕ್ರಮವಾಗಿ ಜನಿಸುತ್ತಾರೆಂದು ತಿಳಿಯಬೇಕು.

### ಖಂಡಾರ್ಥ

ಯಥಾ ಪೃಥಿವ್ಯಾಮಿತಿ ದೃಷ್ಟಾಂತೋಕ್ತ್ಯಾ ಪ್ರಾಪ್ತಪರಿಣಾಮಶಂಕಾಂ ನಿರಸ್ಯನ್ ಅಕ್ಷರಾದ್ವಿಶ್ವಸಂಭವಕ್ರಮಂ ವ್ಯನಕ್ತಿ- **ತಪಸೇತಿ** ॥ ಅಕ್ಷರಾಖ್ಯಂ ಬ್ರಹ್ಮ ತಪಸಾ ಜ್ಞಾನೇನ ಚೀಯತೇ ಸಂಬದ್ಧ್ಯತೇ । ಬ್ರಹ್ಮ ವಿಶ್ವಂ ಸೃಜಾನೀತಿ ವ್ಯಚಾರಯದಿತಿ ಯಾವತ್ । ಜ್ಞಾನರೂಪವಿಚಾರವತೋ ನ ಪರಿಣಾಮಿತಾ ಇತಿ ಭಾವಃ । ತತೋ ವಿಚಾರಾನಂತರಮಿತಿ, ವಿಚಾರಿತವತೋ ಬ್ರಹ್ಮಣ ಇತಿ ವಾ । ಅತ್ರಾನ್ನಾದಿಪದೈಃ ಜಡಂ ತದಭಿಮಾನಿದೇವತಾ ಚ ಗ್ರಾಹ್ಯಾ । ಲೋಕಾ ಜಾಯಂತೇ ಇತ್ಯನುಷಂಗಃ । ತದನಂತರಂ ಕರ್ಮ ಜಾಯತ ಇತಿ ಶೇಷಃ । ಜಾತೇಷು ಕರ್ಮಸು ನಿಮಿತ್ತಭೂತೇಷು ಅಮೃತಂ ಸ್ವರ್ಗಾದಿಫಲಂ ಜಾಯತ ಇತ್ಯನುಷಂಗಃ ॥ ೧.೮ ॥

**ಅನುವಾದ-** 'ಯಥಾ ಪೃಥಿವ್ಯಾಂ' ಎಂಬ ದೃಷ್ಟಾಂತದಿಂದ ಭಗವಂತನು ಕೂಡಾ ಈ ಪ್ರಪಂಚಕ್ಕೆ ಪರಿಣಾಮಿಯಾಗಿದ್ದಾನೆ ಎಂಬ ಶಂಕೆಯು ಪ್ರಾಪ್ತವಾಗುತ್ತದೆ. ಈ ಶಂಕೆಯನ್ನು ಪರಿಹರಿಸುತ್ತಾ ಅಕ್ಷರನಿಂದ ವಿಶ್ವವು ಉತ್ಪನ್ನವಾಗುವ ಕ್ರಮವನ್ನು 'ತಪಸಾ...' ಎಂಬ ಮಂತ್ರದಲ್ಲಿ ತಿಳಿಸುತ್ತಿದ್ದಾರೆ.

ಅಕ್ಷರನಾಮಕನಾದ ಪರಮಾತ್ಮ ಮೊದಲು ತಪಸ್ಸಿನಿಂದ ಅಂದರೇ ಆಲೋಚನೆಯಿಂದ ಸಂಬದ್ಧನಾಗುತ್ತಾನೆ. ಬ್ರಹ್ಮನು ವಿಶ್ವವನ್ನು ಸೃಷ್ಟಿಸುತ್ತೇನೆ ಎಂದು ವಿಚಾರಿಸಿದನು ಎಂದು ಅಭಿಪ್ರಾಯ. ಜ್ಞಾನರೂಪವಾದ ವಿಚಾರವಿರುವ ವ್ಯಕ್ತಿ ಪರಿಣಾಮಿಕಾರಣನಾಗಲು ಸಾಧ್ಯವಿಲ್ಲವೆಂದು ಅರ್ಥ. ತತಃ ಎಂದರೇ ವಿಚಾರಮಾಡಿದ ನಂತರ ಎಂದು ಅಥವಾ ವಿಚಾರಮಾಡಿದ ಬ್ರಹ್ಮದೇವರಿಂದ ಎಂದಾದರೂ ಅರ್ಥವನ್ನು ತಿಳಿಯಬಹುದು.

ಇಲ್ಲಿ ಅನ್ನಾದಿಪದಗಳಿಂದ ಜಡವಾದುದನ್ನು ಮತ್ತು ಅದಕ್ಕೆ ಅಭಿಮಾನಿಗಳಾದ ದೇವತೆಗಳನ್ನೂ ತೆಗೆದುಕೊಳ್ಳಬೇಕು. ಲೋಕಾಃ ಎಂಬ ಶಬ್ದ ಅನನ್ವಿತವಾಗಿ ಇದೆ. ಜಾಯಂತೇ ಎಂಬ ಕ್ರಿಯಾಪದವನ್ನು ಲೋಕಾಃ ಎಂಬ ಶಬ್ದದ ಜೊತೆ ಸೇರಿಸಿಕೊಂಡು ಅನ್ವಯವನ್ನು ತಿಳಿಯಬೇಕು. ಲೋಕಗಳ ನಂತರ ಕರ್ಮವು ಉತ್ಪನ್ನವಾಗುತ್ತದೆ ಎಂದು ತಿಳಿಯಬೇಕು. ನಿಮಿತ್ತವಾದ ಕರ್ಮಗಳು ಉತ್ಪನ್ನವಾದಮೇಲೆ ಅಮೃತಂ ಅಂದರೇ ಸ್ವರ್ಗಾದಿಫಲವು ಹುಟ್ಟಿತು ಎಂದು ತಿಳಿಯಬೇಕು.

### ಉಪನಿಷತ್

**ಯಸ್ಸರ್ವಜ್ಞಃ ಸರ್ವವಿದ್ಯಸ್ಯ ಜ್ಞಾನಮಯಂ ತಪಃ ।**
**ತಸ್ಮಾದೇತದ್ ಬ್ರಹ್ಮ ನಾಮರೂಪಮನ್ನಂ ಚ ಜಾಯತೇ ॥೧.೯॥**

ಉಪನಿಷದರ್ಥ- ಯಾವ ಪರಮಾತ್ಮ ಎಲ್ಲವನ್ನೂ ಪರಿಪೂರ್ಣವಾಗಿ ತಿಳಿದದ್ದರಿಂದ ಸರ್ವಜ್ಞನೆನಿಸಿರುವನೋ, ಎಲ್ಲವನ್ನೂ ಪಡೆದಿದ್ದರಿಂದ ಸರ್ವವಿತ್ ಆಪ್ತಕಾಮನಾಗಿರುವನೋ ಇಂಥವನ ತಪಸ್ಸು ಜ್ಞಾನರೂಪವೇ ಹೊರತು ಋಷ್ಯಾದಿಗಳು ಮಾಡುವ ಸಂತಾಪಾತ್ಮಕವಾಗಿಲ್ಲವೋ, ಇಂತಹ ಪರಮಾತ್ಮನಿಂದಲೇ ನಾಮರೂಪಾತ್ಮಕವಾದ ಪ್ರಪಂಚವು ಮತ್ತು ಈ ಚತುರ್ಮುಖ ಬ್ರಹ್ಮದೇವರು ಹುಟ್ಟಿದ್ದಾರೆ ಎಂದು ತಿಳಿಯಬೇಕು.

### ಭಾಷ್ಯ

**ಏತದ್ಬ್ರಹ್ಮ ಚತುರ್ಮುಖಃ ॥**

ಭಾಷ್ಯಾರ್ಥ- ಏತತ್ ಬ್ರಹ್ಮ ಎಂದರೇ ಚತುರ್ಮುಖ ಬ್ರಹ್ಮ ಎಂದು ಅರ್ಥ.

### ಖಂಡಾರ್ಥ

ತಪನಾ ಚೇಯತ ಇತ್ಯುಕ್ತ್ವಾ ವ್ರಾಕ್ ಜ್ಞಾನಂ ವಿನೇತಿ ವ್ರಾಪ್ತಶಂಕಾಂ ನಿರಸ್ಯನ್ ತಪಃಸ್ವರೂಪೋಕ್ತಿಪೂರ್ವಂ ಪ್ರದಮತಃ ಸೃಷ್ಟಂ ಬಾಸಹ- **ಯಃ ಸರ್ವಜ್ಞ ಇತ್ಯಾದಿನಾ** ॥ ಸರ್ವಂ ಜಾನಾತೀತಿ ಸರ್ವಜ್ಞಃ । ಸರ್ವಂ ವೇತ್ತೀತಿ

ಸರ್ವವಿತ್ । ಜ್ಞಾನವೇದನಯೋಃ ಸಾಮಾನ್ಯವಿಶೇಷತ್ವೇನಾऽಪೌನರುಕ್ತ್ಯಮ್ । ಸರ್ವಂ ವಿಂದತ ಇತಿ ವಾ ಸರ್ವವಿತ್ । 'ವಿದ್ಲೃ ಲಾಭೇ' ಇತಿ ಧಾತೋಃ ಕ್ವಿಪ್ । ಸರ್ವಂ ಲಭತ ಆಪ್ತಕಾಮ ಇತ್ಯರ್ಥಃ । ಹೇತುಗರ್ಭಮಿದಂ ದ್ವಯಮ್ । ಸರ್ವಜ್ಞತ್ವಾದಾಪ್ತಕಾಮತ್ವಾದಸ್ಯ ತಪೋ ಜ್ಞಾನಮಯಂ ಜ್ಞಾನಾತ್ಮಕಂ ನಾऽಲೋಚನಾತ್ಮಕಂ, ನಾऽಪಿ ಸಂತಾಪಾತ್ಮಕಮಿತಿ । ಅಜ್ಞೋ ಹ್ಯಾಲೋಚಯತಿ । ಅನಾಪ್ತಕಾಮಸ್ತು ತಪ್ಯತಿ । ನಿತ್ಯಸಿದ್ಧಸರ್ವವಿಷಯಕಮಪಿ ಜ್ಞಾನಂ ಸಿಸೃಕ್ಷಾರೂಪವಿಶೇಷಾತ್ಮನಾ ಕಾಲವಿಶೇಷೇ ವ್ಯಜ್ಯತ ಇತಿ, 'ತಪಸಾ ಚೀಯತೇ' ಇತಿ, 'ಸೋऽಕಾಮಯತ' ಇತಿ, 'ತದೈಕ್ಷತ' ಇತಿ, 'ಸ ಈಕ್ಷಾಂಚಕ್ರೇ' 'ತಪಸ್ತಪ್ತ್ವಾ' ಇತ್ಯಾದಿರೂಪೇಣ ಶ್ರುತಿಷೂಚ್ಯತ ಇತಿ ಭಾವಃ । ತಸ್ಮಾತ್ಸರ್ವಜ್ಞಾದ್ ಬ್ರಹ್ಮಣಃ ನಾಮರೂಪಶಬ್ದಿತಶಬ್ದಪ್ರಪಂಚಾರ್ಥಪ್ರಪಂಚಾऽಭಿಮಾನಿತಯಾ ಅಭೇದೋಪಚಾರೇಣ ನಾಮರೂಪಮನ್ನಮಿತ್ಯುಕ್ತಮ್, ಏತತ್ ಬ್ರಹ್ಮ ಚತುರ್ಮುಖಾಖ್ಯಂ ಜಾಯತ ಇತ್ಯರ್ಥಃ ॥೧.೯॥

**ಅನುವಾದ-** 'ತಪಸಾ ಚೀಯತೇ' ಜ್ಞಾನದಿಂದ ಸಂಬದ್ಧನಾಗುತ್ತಾನೆ ಎಂದು ಹೇಳಿದ್ದರಿಂದ ಇವರ ಮೊದಲು ದೇವರಿಗೆ ಜ್ಞಾನವಿದ್ದಿದ್ದಿಲ್ಲ ಎಂಬ ಶಂಕೆಯು ಬರುತ್ತದೆ. ಈ ಶಂಕೆಯನ್ನು ಪರಿಹರಿಸುತ್ತಾ ದೇವರ ತಪಸ್ಸು ಎಂದರೇ ಏನು ಎಂದು ತಿಳಿಸುತ್ತಾ ದೇವರಿಂದ ಮೊದಲು ಸೃಷ್ಟವಾದದ್ದನ್ನು ಕೂಡಾ 'ಯಸ್ಸರ್ವಜ್ಞಃ...' ಎಂಬ ಮಂತ್ರದಿಂದ ತಿಳಿಸುತ್ತಿದ್ದಾರೆ.

'ಸರ್ವಂ ಜಾನಾತಿ' ಎಲ್ಲವನ್ನೂ ತಿಳಿದಿದ್ದಾನೆ ಆದ್ದರಿಂದ ದೇವರು ಸರ್ವಜ್ಞನಾಗಿದ್ದಾನೆ. 'ಸರ್ವಂ ವೇತ್ತಿ' ಎಲ್ಲವನ್ನೂ ತಿಳಿದಿದ್ದಾನೆ ಆದ್ದರಿಂದ ದೇವರು ಸರ್ವವಿತ್ ಆಗಿದ್ದಾನೆ. ಒಂದೇ ಅರ್ಥವನ್ನು ತಿಳಿಸುವ ಎರಡು ಶಬ್ದಗಳನ್ನು ಪ್ರಯೋಗಿಸಿದ್ದರಿಂದ ಪುನರುಕ್ತಿ ಎಂದು ತಿಳಿಯಬಾರದು. ಸರ್ವಜ್ಞ ಎಂದರೇ ಎಲ್ಲವನ್ನೂ ಸಾಮಾನ್ಯವಾಗಿ ತಿಳಿದಿದ್ದಾನೆ ಎಂದು ಅರ್ಥ. ಸರ್ವವಿತ್ ಎಂದರೇ ಎಲ್ಲವನ್ನೂ ವಿಶೇಷವಾಗಿ ತಿಳಿದಿದ್ದಾನೆ ಎಂದು ಅರ್ಥ. ಹೀಗೆ ಅರ್ಥಭೇದವಿದ್ದುದರಿಂದ ಪುನರುಕ್ತಿಯು ದೋಷವಲ್ಲವೆಂದು ತಿಳಿಯಬೇಕು. ಅಥವಾ 'ಸರ್ವಂ ವಿಂದತೇ' ಎಲ್ಲವನ್ನೂ ಪಡೆಯುತ್ತಾನೆ

ಎಂಬ ಅಭಿಪ್ರಾಯವನ್ನು ಸರ್ವವಿತ್ ಎಂಬ ಶಬ್ದಕ್ಕೆ ತಿಳಿಯಬೇಕು. ಹೀಗ ತಿಳಿಯುವುದರಿಂದ ಪುನರುಕ್ತಿಯ ಪ್ರಸಂಗವೇ ಇರುವುದಿಲ್ಲ. 'ವಿದ್ಲೃ ಲಾಭೇ' ಎಂಬ ಧಾತುವಿಗೆ ಕ್ವಿಪ್ ಪ್ರತ್ಯಯವು ಬಂದು ಸರ್ವವಿತ್ ಎಂಬ ರೂಪವು ಸಿದ್ಧವಾಗಿದೆ. ಎಲ್ಲವನ್ನೂ ಪಡೆದವನು, ಆಪ್ತಕಾಮ ಎಂಬ ಅರ್ಥವನ್ನು ಸರ್ವವಿತ್ ಎಂಬ ಶಬ್ದಕ್ಕೆ ತಿಳಿಯಬೇಕು. ಈ ಸರ್ವಜ್ಞತ್ವ ಮತ್ತು ಸರ್ವವಿತ್ತ್ವ ಎಂಬ ವಿಶೇಷಣಗಳು ಹೇತುಗರ್ಭವಾಗಿವೆ. ಸರ್ವಜ್ಞನಾದ್ದರಿಂದ, ಆಪ್ತಕಾಮನಾದ್ದರಿಂದ ದೇವರ ತಪಸ್ಸು ಜ್ಞಾನರೂಪವೇ ಹೊರತು ಆಲೋಚನಾರೂಪವಾಗಲೀ, ಸಂತಾಪರೂಪವಾಗಲೀ ಅಲ್ಲ. ಯಾವನು ಅಜ್ಞಾನಿಯೋ ಅವನು ಆಲೋಚಿಸುತ್ತಾನೆ, ಯಾವನ ಕಾಮನೆಗಳು ಪೂರ್ಣವಾಗಿಲ್ಲವೋ ಅವನು ತಪಸ್ಸು ಮಾಡುತ್ತಾನೆ. ದೇವರಿಗೆ ಈ ಎರಡೂ ಇಲ್ಲವೆಂದು ತಿಳಿಯಬೇಕು.

ದೇವರಿಗೆ ನಿತ್ಯವೂ ಎಲ್ಲ ವಿಷಯಕವಾದ ಜ್ಞಾನವಿದ್ದರೂ ಆಯಾ ಕಾಲವಿಶೇಷಗಳಲ್ಲಿ ಸೃಷ್ಟ್ಯಾದಿವಿಷಯಕವಾದ ಜ್ಞಾನಗಳು ಅಭಿವ್ಯಕ್ತವಾಗುತ್ತವೆ. ಆದ್ದರಿಂದಲೇ 'ತಪಸಾ ಚೀಯತೇ' ಎಂದು, 'ಸೋಽಕಾಮಯತ' ಎಂದು, 'ತದೈಕ್ಷತ' ಎಂದು, 'ಸ ಈಕ್ಷಾಂಚಕ್ರೇ' ಎಂದು, 'ತಪಸ್ತಪ್ತ್ವಾ' ಎಂದು ಶ್ರುತಿಗಳು ಹೇಳುತ್ತವೆ ಎಂದು ಅಭಿಪ್ರಾಯ. ಈ ಸರ್ವಜ್ಞನಾದ ಆಪ್ತಕಾಮನಾದ ಪರಮಾತ್ಮನಿಂದ ನಾಮರೂಪ ಎಂಬ ಶಬ್ದದಿಂದ ಕರೆಯಲ್ಪಡುವ ಶಬ್ದಪ್ರಪಂಚ ಅರ್ಥಪ್ರಪಂಚವು ಜನಿಸುತ್ತದೆ. ಇವುಗಳಿಗೆ ಅಭಿಮಾನಿಗಳಾದ ದೇವತೆಗಳನ್ನೂ ಔಪಚಾರಿಕವಾಗಿ ಅಭೇದೇನ ವ್ಯವಹರಿಸಿದ್ದಾರೆ. ಏತತ್‌ಬ್ರಹ್ಮ ಚತುರ್ಮುಖ ಬ್ರಹ್ಮ ಜನಿಸುತ್ತಾನೆ ಎಂದು ತಿಳಿಯಬೇಕು.

॥ ಇತಿ ಪ್ರಥಮಖಂಡಮಂತ್ರಾರ್ಥಃ ॥

# ॥ ಅಥ ದ್ವಿತೀಯಃ ಖಂಡಃ ॥

## ಉಪನಿಷತ್

**ತದೇತತ್ ಸತ್ಯಮ್ ।**
**ಮಂತ್ರೇಷು ಕರ್ಮಾಣಿ ಕವಯೋ ಯಾನ್ಯ-**
**ಪಶ್ಯಂಸ್ತಾನಿ ತ್ರೇತಾಯಾಂ ಬಹುಧಾ ಸಂತತಾನಿ ।**
**ತಾನ್ಯಾಚರಥ ನಿಯತಂ ಸತ್ಯಕಾಮಾ**
**ಏಷ ವಃ ಪಂಥಾಃ ಸುಕೃತಸ್ಯ ಲೋಕೇ ॥೨.೧॥**

ಉಪನಿಷದರ್ಥ- ಪೂರ್ವದಲ್ಲಿ ಯಾವ ಅಕ್ಷರವು ಪ್ರತಿಪಾದಿತವಾಗಿದೆಯೋ ಆ ಅಕ್ಷರಶಬ್ದವಾಚ್ಯನಾದ ಪರಮಾತ್ಮನೇ ಸತ್ಯನಾಗಿದ್ದಾನೆ.

ಆಯಾ ಮಂತ್ರಗಳಲ್ಲಿ ಆಯಾ ಕರ್ಮಗಳು ಪ್ರತಿಪಾದ್ಯವಾಗಿವೆ ಎಂದು ಜ್ಞಾನಿಗಳು ತಿಳಿದಿದ್ದಾರೆ. ಆ ಕರ್ಮಗಳು ಕೃತಯುಗದಲ್ಲಿ ಕೇವಲ ವಿಷ್ಣುಮಾತ್ರವಿಷಯಕಗಳಾದಂತೆ, ತ್ರೇತಾಯುಗದಲ್ಲಿ ವಿಷ್ಣುಮಾತ್ರ-ವಿಷಯಕವಾಗಿರುವುದಿಲ್ಲ. ಕಿಂತು ಭಗವಂತ ತದಿತರದೇವತಾದಿ ವಿಷಯಕಗಳೂ ಆಗಿರುತ್ತವೆ. ಆದ್ದರಿಂದ ಅಪರೋಕ್ಷಜ್ಞಾನದಿಂದ ಭಗವಂತನ ಪ್ರೀತಿಯನ್ನು ಪಡೆಯಬೇಕೆಂದು ಬಯಸಿದ ನೀವೆಲ್ಲರೂ ವಿಷ್ಣುವಿಷಯಕವಾದ ಆ ಕರ್ಮಗಳನ್ನು ತಪ್ಪದೇ ಆಚರಿಸಿರಿ. ಭಗವತ್ಪ್ರೀತ್ಯರ್ಥವಾಗಿ ಅನುಷ್ಠಿತವಾದ ಈ ನಿವೃತ್ತಕರ್ಮಗಳೆಲ್ಲವೂ ಸುಕೃತಲಭ್ಯವಾದ ಲೋಕಗಳ ಪ್ರಾಪ್ತಿಯ ವಿಷಯದಲ್ಲಿ ಅಪರೋಕ್ಷಜ್ಞಾನದ್ವಾರಾ ಮಾರ್ಗವಾಗುತ್ತವೆ.

## ಭಾಷ್ಯ

ತದೇತತ್ಸತ್ಯಂ ಭಗವಾನ್ । ತತ್ಕಾಮಾಃ ಕರ್ಮಾಣ್ಯಾಚರಥ । ತದಾ ಸಾಽಪಿ ಪರವಿದ್ಯಾ । ಅನ್ಯಥಾ ಪ್ಲವಾ ಹ್ಯೇತೇ ಅದೃಢಾ ಯಜ್ಞರೂಪಾಃ ॥

ಭಾಷ್ಯಾರ್ಥ- ಪ್ರಕೃತ. ಸತ್ಯ ಎಂದರೇ ಯಥಾರ್ಥ ಎಂದು ಅರ್ಥವಲ್ಲ. ಕಿಂತು ಪರಮಾತ್ಮ ಎಂದೇ ಅರ್ಥ. ನಿತ್ಯನಿರತಿಶಯವಾದ ಆನಂದಾನುಭವ-

ರೂಪನಾದುದರಿಂದ ದೇವರು ಸತ್ಯನಾಮಕನಾಗಿದ್ದಾನೆ. ಅಪರೋಕ್ಷ-ಜ್ಞಾನದ್ವಾರಾ ಭಗವಂತನ ಪ್ರೀತಿಯನ್ನು ಬಯಸಿ ಕರ್ಮಗಳನ್ನು ಆಚರಿಸಬೇಕು. ಭಗವಂತನ ಪ್ರೀತಿಗಾಗಿ ಕರ್ಮವನ್ನು ಪ್ರತಿಪಾದಿಸುತ್ತಿರುವಾಗ ಕರ್ಮಪ್ರತಿಪಾದಕವಾದ ವೇದವು ಕೂಡಾ ಪರವಿದ್ಯೆಯೇ ಆಗುತ್ತದೆ. ಬ್ರಹ್ಮನಲ್ಲಿ ತಾತ್ಪರ್ಯವಿರುವ ವಿದ್ಯೆಯೇ ಪರವಿದ್ಯೆ. ಬ್ರಹ್ಮನ ಪ್ರೀತಿಯ ಉದ್ದೇಶದಿಂದ ಕರ್ಮವನ್ನು ವಿಧಾನ ಮಾಡಿದ್ದರಿಂದ ಕರ್ಮವಿಧಾಯಕವಾದ ವಿದ್ಯೆಯು ಕೂಡಾ ಬ್ರಹ್ಮನಲ್ಲಿಯೇ ಮಹಾತಾತ್ಪರ್ಯ ಉಳ್ಳದ್ದಾಗಿದೆ. ಆದ್ದರಿಂದ ಅದು ಪರವಿದ್ಯೆಯೇ ಆಗುತ್ತದೆ. ಭಗವದ್ವಿಷಯಕವಾಗದೇ ಇರುವ ಯಜ್ಞಾದಿಗಳೇ ದೃಢವಾಗದ ದೋಣಿಗಳು. ಅವುಗಳಿಂದ ಮಾತ್ರ ಅನರ್ಥವೆಂದು ತಿಳಿಯಬೇಕು. ಭಗವಂತನು ವಿಷಯನಾಗದೇ ಇರುವ ಕರ್ಮಗಳ ನಿಂದೆಯನ್ನೇ 'ಪ್ಲವಾ ಹ್ಯೇತೇ' ಎಂಬ ಮಂತ್ರದಿಂದ ಮಾಡಿದ್ದಾರೆಂದು ತಿಳಿಯಬೇಕು. ॥

## ಖಂಡಾರ್ಥ

ಕರ್ಮದೇವತಾದಿಜ್ಞಾನಂ ಯಜ್ಞಾನಾರ್ಥಂ ಸದನಲ್ಪಸ್ಥಿರಫಲವದ್ಭವತಿ ತನ್ಮೇ ಬ್ರೂಹೀತಿ ಪೃಷ್ಟವಂತಂ ಶೌನಕಂ ಪ್ರತಿ ಅಂಗಿರಾ ಬ್ರಹ್ಮಜ್ಞಾನಾರ್ಥಂ ಸತ್ ತಾದೃಶಫಲವದ್ಭವತೀತಿ ಭಾವೇನ ಬ್ರಹ್ಮಸ್ವರೂಪಂ ಲೇಶೇನ ನಿರೂಪ್ಯ ಇದಾನೀಂ ಯಜ್ಞಾನಾರ್ಥಂ ಸದಿತ್ಯುಕ್ತಂ ತಜ್ಞಾನಾರ್ಥತ್ವಪ್ರಕಾರಮಾಹ-**ತದೇತತ್ಸತ್ಯಮಿತ್ಯಾದಿನಾ** ॥ ತದೇತತ್ಪರವಿದ್ಯಾವಿಷಯತಯಾ ದೃಶ್ಯತ್ವಾದಿಗುಣಕತಯೋಕ್ತ- ಮಕ್ಷರಂ ಸತ್ಯಮಪರಾಧೀನಸ್ವರೂಪಂ ಸರ್ವಸತ್ತಾಪ್ರದಂ ಚೇತ್ಯರ್ಥ: । ಕವಯೋ ಜ್ಞಾನಿನೋ ಮಂತ್ರೇಷು ಯಾನಿ ಕರ್ಮಾಣಿ ಸಮಾಧೌ ಮನಸಾ ಅಪಶ್ಯನ್ ತಾನಿ ತ್ರೇತಾಯಾಂ ತ್ರೇತಾಯುಗೇ ಬಹುಧಾ ಸಂತತಾನಿ ಕೃತಯುಗ ಇವ ವಿಷ್ಣ್ವೇಕವಿಷಯಕಾಣಿ ನಾಽಸನ್ । ಕಿಂತು 'ತ್ರೇತಾದೌ ತದಶಕ್ತ್ಯಾ ಹಿ ಧರ್ಮೋಽನನ್ಯಸ್ಸಂಪ್ರವರ್ತತೇ' ಇತಿ, 'ಪೃಥಕ್ ಪೃಥಕ್ ಚ ತ್ರೇತಾಯಾಂ ಯಜಂತೇ ದೇವತಾಗಣಾನ್' ಇತಿ ಚ ಸ್ಮೃತ್ಯಾ ಕೃತಯುಗ ಇವ ವಿಷ್ಣ್ವೇಕನಿಷ್ಠತಾಂ ವಿನಾ ನಾನಾಪ್ರಕಾರೇಣ ತತ್ತದ್ದೇವತೋದ್ದೇಶೇನ ಕೃತ್ವಾ ಅಂತೇ ವಿಷ್ಣಾವರ್ಪಯಂತೀತಿ ಬಹುಧಾ

ಪ್ರವರ್ತಿತಾನಿ ಆಸನ್ನಿತ್ಯರ್ಥಃ । ಸತ್ಯಕಾಮಾಃ ಸತ್ಯಾಖ್ಯಭಗವಜ್ಜ್ಞಾನಕಾಮಾಃ ಸಂತಃ ಯೂಯಂ ತಾನಿ ಕರ್ಮಾಣಿ ನಿಯತಂ ಯಥಾ ಭವತಿ ತಥಾ ಆಚರಥ ಅನುತಿಷ್ಠತ । ತಥಾಹಿ ಕರ್ಮದೇವತಾದಿಜ್ಞಾನಂ 'ಉತ್ತಮಿಷ್ಟತ ಏವಂಭಾವಾದಿತ್ಯೌಡುಲೋಮಿಃ' ಇತ್ಯಾದಿಸೂತ್ರೋಕ್ತದಿಶಾ ತದನುಷ್ಠಾನೇನ ಅಂತಃಕರಣಶುದ್ಧಿದ್ವಾರಾ ಬ್ರಹ್ಮಜ್ಞಾನಹೇತುಶ್ರವಣಾದ್ಯಂಗಂ ಸತ್ ಬ್ರಹ್ಮಜ್ಞಾನಂ ಜನಯಿತ್ವಾ ಅನಂತಫಲವದ್ಭವತಿ । ಅಪರಮಮುಖ್ಯವೃತ್ತ್ಯಾ ಕರ್ಮದೇವತಾದಿಸ್ವರೂಪಪ್ರತಿಪಾದಕಮಪಿ ಋಗಾದಿಕಂ ಪರಮಮುಖ್ಯವೃತ್ತ್ಯಾ ಅಕ್ಷರಬೋಧಕತ್ವೇ ಪರವಿದ್ಯೈವ ಭವತೀತಿ ಭಾವೇನಾಽಹ- **ಏಷ ವ ಇತಿ ॥** ಏಷಃ ಭಗವಜ್ಜ್ಞಾನೋದ್ದೇಶಕಃ ಕರ್ಮಾಚಾರಃ, ವಃ ಯುಷ್ಮಾಕಂ, ಸುಕೃತಸ್ಯ ಲೋಕೇ ಲೋಕಸ್ಯ ಪಂಥಾಃ ಮಾರ್ಗ ಇತ್ಯರ್ಥಃ । ಆಚರಥೇತಿ ಬಹುವಚನೋಕ್ತ್ಯಾ ಪ್ರಷ್ಟಾ ಶೌನಕ ಉಪಲಕ್ಷಣಮಿತಿ ಸೂಚಿತಮ್ ॥೨.೧॥

ಅನುವಾದ- ಕರ್ಮದೇವತಾದಿಗಳ ಜ್ಞಾನ ಯಾವ ಜ್ಞಾನವನ್ನು ಹುಟ್ಟಿಸುವುದರಿಂದ ಬಹಳವಾದ ಮತ್ತು ಶಾಶ್ವತವಾದ ಫಲ ಉಳ್ಳದ್ದಾಗುತ್ತದೆಯೋ ಆ ಜ್ಞಾನವನ್ನು ನನಗೆ ಉಪದೇಶಿಸಿರಿ ಎಂದು ಶೌನಕರು ಕೇಳಿದರು. ಬ್ರಹ್ಮಜ್ಞಾನವನ್ನು ಹುಟ್ಟಿಸಿದಾಗಲೇ ಕರ್ಮದೇವತಾದಿಗಳ ಜ್ಞಾನವು ನೀನು ಕೇಳಿದಂತಹ ಫಲವನ್ನು ನೀಡುತ್ತದೆ ಎಂಬ ಅಭಿಪ್ರಾಯದಿಂದ ಅಂಗಿರಸರು ಬ್ರಹ್ಮಜ್ಞಾನವನ್ನು ಸ್ವಲ್ಪವಾಗಿ ಉಪದೇಶಿಸಿ, ಈಗ 'ತದೇತತ್ಸತ್ಯಂ...' ಎಂಬ ಮಂತ್ರದಿಂದ ಆ ಜ್ಞಾನದ ಪ್ರಕಾರವನ್ನು ಉಪದೇಶಿಸುತ್ತಿದ್ದಾರೆ.

ತದೇತತ್ ಎಂದರೇ ಪರವಿದ್ಯಾವಿಷಯತಯಾ ಅದೃಶ್ಯತ್ವಾದಿಗುಣಗಳುಳ್ಳ ಯಾವ ಭಗವಂತ ಪೂರ್ವದಲ್ಲಿ ಉಕ್ತನಾಗಿರುವನೋ ಆ ಅಕ್ಷರನಾಮಕನಾದ ಪರಮಾತ್ಮನು ಸತ್ಯನಾಗಿದ್ದಾನೆ. ಅಂದರೇ ಅವನ ಸ್ವರೂಪ ಪರಾಧೀನವಾಗಿಲ್ಲ. ಸ್ವತಂತ್ರವಾದ ಸ್ವರೂಪ ಉಳ್ಳವನಾಗಿದ್ದಾನೆ ಎಂದು ಅರ್ಥ. ಅಥವಾ ಸರ್ವರಿಗೂ ಸತ್ಯತ್ವವನ್ನು ನೀಡುವವನಾಗಿದ್ದಾನೆ ಎಂದಾದರೂ ಅರ್ಥವನ್ನು ತಿಳಿಯಬಹುದು. ಕವಿಗಳು ಅಂದರೇ ಜ್ಞಾನಿಗಳು ಮಂತ್ರಗಳಲ್ಲಿ

ಯಾವ ಕರ್ಮಗಳನ್ನು ಕಂಡರೋ ಆ ಕರ್ಮಗಳು ತ್ರೇತಾಯುಗದಲ್ಲಿ ಬಹಳವಾಗಿ ಪ್ರವೃತ್ತವಾಗಿವೆ. ಕೃತಯುಗದಲ್ಲಿ ವಿಷ್ಣ್ವೇಕವಿಷಯಕಗಳಾದಂತೆ ತ್ರೇತೆಯಲ್ಲಿ ಭಗವದೇಕವಿಷಯಕಗಳಾಗಿಲ್ಲ ಎಂದು ಅರ್ಥ. 'ತ್ರೇತಾಯಾಂ ತದಶಕ್ತ್ಯಾ ಹಿ ಧರ್ಮೋऽನ್ಯಃ ಸಂಪ್ರವರ್ತತೇ' ತ್ರೇತಾದಿಯುಗಗಳಲ್ಲಿ ಭಗವದೇಕವಿಷಯಕತ್ವವನ್ನು ತಿಳಿಸುವ ಸಾಮರ್ಥ್ಯ ಕಡಿಮೆಯಾಗುತ್ತಲೇ ಹೋಗುತ್ತದೆ. ಆದ್ದರಿಂದ ಆವಾಗ ಬೇರೇ ಧರ್ಮವೇ ಪ್ರವೃತ್ತವಾಗುತ್ತದೆ ಎಂಬ ಪ್ರಮಾಣಕ್ಕೆ ಅನುಗುಣವಾಗಿ, ಮತ್ತು 'ಪೃಥಕ್ ಪೃಥಕ್ ಚ ತ್ರೇತಾಯಾಂ ಯಜಂತೇ ದೇವತಾಗಣಾನ್' ತ್ರೇತಾದಿಯುಗಗಳಲ್ಲಿ ಪ್ರತ್ಯೇಕ ಪ್ರತ್ಯೇಕವಾಗಿ ದೇವತಾಸಮೂಹಗಳನ್ನೇ ಪೂಜಿಸುತ್ತಾರೆ ಎಂಬ ಸ್ಮೃತಿಗೆ ಅನುಗುಣವಾಗಿ ಕೃತಯುಗದಲ್ಲಿ ಭಗವದೇಕನಿಷ್ಠವಾದ ಕರ್ಮಗಳನ್ನು ಮಾಡಿದಂತೆ, ತ್ರೇತಾದಿಯುಗಗಳಲ್ಲಿ ಅದನ್ನು ಪರಿತ್ಯಜಿಸಿ ನಾನಾರೀತಿಯಾಗಿ ಆಯಾ ದೇವತೆಗಳ ಉದ್ದೇಶದಿಂದ ಕರ್ಮಗಳನ್ನು ಮಾಡಿ ಕೊನೆಯಲ್ಲಿ ಮಾಡಿದ ಆ ಕರ್ಮಗಳನ್ನು ವಿಷ್ಣುವಿನಲ್ಲಿಯೇ ಸಮರ್ಪಿಸುತ್ತಾರೆ. ಹೀಗೆ ಕರ್ಮಗಳು ತ್ರೇತಾದಿಯುಗಗಳಲ್ಲಿ ಬಹುಧಾ ಪ್ರವೃತ್ತವಾಗುತ್ತವೆ ಎಂದು ತಿಳಿಯಬೇಕು. ಸತ್ಯಕಾಮಾಃ=ಸತ್ಯನಾಮಕನಾದ ಭಗವಂತನ ಜ್ಞಾನವನ್ನು ಬಯಸುವ ನೀವೆಲ್ಲರೂ ಆ ಕರ್ಮಗಳನ್ನು ತಪ್ಪದೇ ಆಚರಿಸಿರಿ.

'ಉತ್ಕ್ರಮಿಷ್ಯತ ಏವಂಭಾವಾದಿತ್ಯೌಡುಲೋಮಿಃ'(ಬ್ರ.ಸೂ೧.೪.೨೨) 'ಸಂಸಾರಬಂಧವನ್ನು ತೊರೆಯುವ ಇಚ್ಛೆ ಇರುವ ಮೋಕ್ಷಾಪೇಕ್ಷಿಗಳು, ಮೋಕ್ಷಕ್ಕೆ ಸಾಧನವಾದ ಅಪರೋಕ್ಷಜ್ಞಾನಕ್ಕೆ ಸಾಧನವಾಗಿರುವ ಕರ್ಮವನ್ನು ಮಾಡಲೇಬೇಕು. ಆದ್ದರಿಂದ ವೇದವು ಕರ್ಮವನ್ನು ವಿಧಾನ ಮಾಡುತ್ತದೆ. ಎಂದು ಔಡುಲೋಮಿಗಳು ಅಭಿಪ್ರಾಯಪಡುತ್ತಾರೆ' ಎಂಬ ಸೂತ್ರದಲ್ಲಿ ಹೇಳಿದಂತೆ ಕರ್ಮಗಳ ಅನುಷ್ಠಾನದಿಂದ ಅಂತಃಕರಣ ಪರಿಶುದ್ಧವಾಗುತ್ತದೆ. ತದ್ದ್ವಾರಾ ಬ್ರಹ್ಮಜ್ಞಾನಕ್ಕೆ ಕಾರಣವಾದ ಶ್ರವಣಾದಿಗಳಿಗೆ ಅಂಗವಾದ ಈ ಕರ್ಮ-ದೇವತಾದಿಗಳ ಜ್ಞಾನವು ಬ್ರಹ್ಮಜ್ಞಾನವನ್ನು ಹುಟ್ಟಿಸುವ ಮೂಲಕ ಅನಂತವಾದ ಫಲ ಉಳ್ಳದ್ದಾಗುತ್ತದೆ.

ಅಮುಖ್ಯವೃತ್ತಿಯಿಂದ ಕರ್ಮ-ದೇವತಾದಿಗಳ ಸ್ವರೂಪವನ್ನು ಪ್ರತಿಪಾದಿಸುವ ಋಗಾದಿ ಶಾಸ್ತ್ರಗಳು ಕೂಡಾ ಪರಮಮುಖ್ಯವೃತ್ತಿಯಿಂದ ಅಕ್ಷರಬೋಧಕವಾದಾಗ ಪರವಿದ್ಯೆಯೇ ಆಗುತ್ತದೆ ಎಂಬುದನ್ನು 'ಏಷ ವಃ' ಎಂಬ ಮಾತಿನಿಂದ ಹೇಳುತ್ತಿದ್ದಾರೆ. ಏಷಃ=ಭಗವಂತನ ಜ್ಞಾನವೇ ಉದ್ದೇಶವಾಗಿರುವ ಕರ್ಮಗಳ ಆಚರಣೆಯು, ವಃ=ನಿಮಗೆ, ಸುಕೃತಲಭ್ಯವಾದ ಲೋಕಗಳನ್ನು ಹೊಂದಲು ಮಾರ್ಗವಾಗುತ್ತದೆ. 'ಆಚರಥ' ಎಂದು ಬಹುವಚನವನ್ನು ಪ್ರಯೋಗಿಸಿರುವುದರಿಂದ ಶ್ರೋತೃಗಳು ಶೌನಕರು ಮಾತ್ರವಲ್ಲ ಬೇರೆಯವರೂ ಇದ್ದಾರೆ ಎಂದು ತಿಳಿದುಬರುತ್ತದೆ. ॥

### ಉಪನಿಷತ್

**ಯದಾ ಲೇಲಾಯತೇ ಹ್ಯರ್ಚಿಃ ಸಮಿದ್ಧೇ ಹವ್ಯವಾಹನೇ ।**
**ತದಾಜ್ಯಭಾಗಾವಂತರೇಣಾಹುತೀಃ ಪ್ರತಿಪಾದಯೇತ್॥ ೨.೨ ॥**

**ಉಪನಿಷದರ್ಥ-** ಇಂಧನಗಳಿಂದ ಅಗ್ನಿಯು ಪ್ರಜ್ವಲಿಸುತ್ತಿರುವಾಗ, ಜ್ವಾಲೆಯು ನಾಲಿಗೆಯನ್ನಾಡಿಸುತ್ತಿರುವಾಗ, ಆಜ್ಯಾಹುತಿಗಳ ಮಧ್ಯದಲ್ಲಿ ಪ್ರಧಾನವಾದ ಆಹುತಿಯನ್ನು ಸಮರ್ಪಿಸಬೇಕು. (ಮೊದಲು ಆಜ್ಯಾಹುತಿಯನ್ನು ಹಾಕಿ, ಮಧ್ಯದಲ್ಲಿ ಕ್ಷೀರ-ಚರು-ಪುರೋಡಾಶವೇ ಮೊದಲಾದ ಪ್ರಧಾನವಾದ ಆಹುತಿಯನ್ನು ಹಾಕಿ, ನಂತರ ಮತ್ತೆ ಆಜ್ಯಾಹುತಿಯನ್ನು ಸಮರ್ಪಿಸಬೇಕೆಂದು ಅರ್ಥ. ಇದು ಅಗ್ನಿಹೋತ್ರವನ್ನು ಮಾಡುವ ಕ್ರಮ.)

### ಖಂಡಾರ್ಥ

**ಕರ್ಮಾಚರಣಪ್ರಕಾರಮಾಹ- ಯದೇತ್ಯಾದಿನಾ ॥ ಲೇಲಾಯತೇ ಪರಿವರ್ತತೇ । ಅರ್ಚಿಃ ಜ್ವಾಲಾ । ಸಮಿದ್ಧೇ, ಞಿ ಇಂಧೀ ದೀಪ್ತೌ, ಸಮ್ಯಕ್ ದೀಪ್ಯಮಾನೇ ಇತ್ಯರ್ಥಃ । ಆಜ್ಯಭಾಗಾವಂತರೇಣ ಆಜ್ಯಭಾಗಯೋರ್ಮಧ್ಯೇ ಆಹುತೀಃ ಪ್ರಧಾನಹೋಮಾನ್ ಪ್ರತಿಪಾದಯೇತ್ ಕುರ್ಯಾತ್, ತದಾ ಏಷ ಕರ್ಮಾಚಾರಃ ಸುಕೃತಸ್ಯ ಪಂಥಾ ಇತಿ ಯೋಜನಾ । ಆಜ್ಯಭಾಗಾಖ್ಯಹೋಮೌ ಪಾರ್ಶ್ವಯೋಃ ಕೃತ್ವಾ ಮಧ್ಯೇ ಹೋಮಾಃ ಕಾರ್ಯಾ ಇತ್ಯರ್ಥಃ ॥೨.೨॥**

**ಅನುವಾದ- 'ಯದಾ...'** ಇತ್ಯಾದಿಗಳಿಂದ ಕರ್ಮವನ್ನು ಆಚರಿಸುವ ಪ್ರಕಾರವನ್ನು ತಿಳಿಸುತ್ತಿದ್ದಾರೆ. ಲೇಲಾಯತೇ ಎಂದರೇ ಜ್ವಲಿಸುತ್ತದೋ ಎಂದು ಅರ್ಥ. ಅರ್ಚಿಃ ಅಂದರೇ ಜ್ವಾಲೆಯು. ಸಮಿದ್ಧೇ ಎಂದರೇ 'ಞಿ ಇಂಧೀ ದೀಪ್ತೌ' ಎಂಬ ಧಾತುವ್ಯಾಖ್ಯಾನಕ್ಕೆ ಅನುಗುಣವಾಗಿ ಪ್ರಜ್ವಲಿಸುತ್ತಿರುವಾಗ ಎಂದು ಅರ್ಥ. ಆಜ್ಯಭಾಗಗಳ ಮಧ್ಯದಲ್ಲಿ ಪ್ರಧಾನಹೋಮವನ್ನು ಮಾಡಬೇಕು. ಆವಾಗ ಈ ಕರ್ಮಾಚರಣೆಯು ಸುಕೃತಲಭ್ಯವಾಗುವ ಲೋಕಗಳನ್ನು ಹೊಂದಲು ಮಾರ್ಗವಾಗುತ್ತದೆ. ಎಂದು ಅನ್ವಯವನ್ನು ಯೋಜಿಸಿಕೊಳ್ಳಬೇಕು. ಆಜ್ಯಭಾಗ ಎಂಬ ಹೋಮಗಳನ್ನು ಪಾರ್ಶ್ವದಲ್ಲಿ ಮಾಡಿ ಮಧ್ಯದಲ್ಲಿ ಪ್ರಧಾನಹೋಮವನ್ನು ಮಾಡಬೇಕೆಂದು ಅರ್ಥ.

**ಉಪನಿಷತ್**

**ಯಸ್ಯಾಽಗ್ನಿಹೋತ್ರಮದರ್ಶಮಪೌರ್ಣ-**
**ಮಾಸಮನಾಗ್ರಯಣಮತಿಥಿವರ್ಜಿತಂ ಚ ।**
**ಅಹುತಮವೈಶ್ವದೇವಮವಿಧಿನಾ ಹುತ-**
**ಮಾಸಪ್ತಮಾಂಸ್ತಸ್ಯ ಲೋಕಾನ್ ಹಿನಸ್ತಿ ॥ ೨.೩ ॥**

**ಉಪನಿಷದರ್ಥ-** ಯಾವ ಅಧಿಕಾರಿಯು ಮಾಡಿರುವ ಅಗ್ನಿಹೋತ್ರವು ದರ್ಶಪೌರ್ಣಮಾಸರಹಿತವಾಗಿದೆಯೋ, ನೂತನಧಾನ್ಯಸಂಸ್ಕಾರಕ್ಕಾಗಿ ಆಚರಿಸುವ ಆಗ್ರಾಯಣವೆಂಬ ಇಷ್ಟಿರಹಿತವಾಗಿದೆಯೋ, ಅತಿಥಿಪೂಜಾ-ರಹಿತವಾಗಿದೆಯೋ, ಕಾಲ-ಕಾಲದಲ್ಲಿ ಮಾಡಬೇಕಾದ ಯಾಗಗಳಿಂದ ರಹಿತವಾಗಿದೆಯೋ, ವಿಶ್ವೇದೇವತಾಪೂಜಾರಹಿತವಾಗಿದೆಯೋ, ವಿಧಿಯನ್ನು ಅತಿಕ್ರಮಿಸಿ ಮಾಡಲ್ಪಟ್ಟದೆಯೋ, ಅಂತಹ ಅಗ್ನಿಹೋತ್ರವು, ಪುಣ್ಯವಶದಿಂದ ಪ್ರಾಪ್ತವಾದ ಏಳು ಊರ್ಧ್ವಲೋಕಗಳು ಆಗದಿರುವಂತೆ ಮಾಡುತ್ತದೆ. ಆದ್ದರಿಂದ ಅಗ್ನಿಹೋತ್ರ ಮಾಡುವವರು ದರ್ಶ-ಪೌರ್ಣಮಾಸಯಾಗಗಳನ್ನು, ಆಗ್ರಯಣೇಷ್ಟಿಯನ್ನು ಅತಿಥಿಪೂಜೆಯನ್ನು, ಕಾಲಕಾಲದಲ್ಲಿ ಮಾಡಬೇಕಾದ ಯಾಗಗಳನ್ನು, ವಿಶ್ವೇದೇವತೆಗಳ ಆರಾಧನೆಯನ್ನು, ವಿಧಿಬದ್ಧವಾಗಿ ಮಾಡಬೇಕು. ಅಂಥವರಿಗೆ ಮಾತ್ರ ಊರ್ಧ್ವಲೋಕಗಳು ಆಗುತ್ತವೆ.

**ಖಂಡಾರ್ಥ**

ಅಗ್ನೌ ಕ್ರಿಯಮಾಣಕರ್ಮಣ ಇತಿಕರ್ತವ್ಯತಾಂ ವಿಪಕ್ಷೇಽನರ್ಥಕಥನೇನ ಆಹ- **ಯಸ್ಯೇತಿ** ॥ ಯಸ್ಯ ಪುರುಷಸ್ಯಾಽಗ್ನಿಹೋತ್ರಂ ದರ್ಶಪೌರ್ಣಮಾಸಾಗ್ರಯಣಾಖ್ಯೇಷ್ಟಿತ್ರಯಾಽನುಷ್ಠಾನರಹಿತಮಹುತಂ ಕಾಲೇ ಹುತಂ ನ ಭವತಿ, ಅವೈಶ್ವದೇವಂ ವೈಶ್ವದೇವಕರ್ಮರಹಿತಂ, ಅವಿಧಿನಾ ಹುತಂ ಚ ತಸ್ಯ ತತ್ಕರ್ಮ ಆಸಪ್ತಮಾನ್ ಭೂಲೋಕಂ ಆರಭ್ಯ ಸಪ್ತಮಭೂತಸತ್ಯಲೋಕಪರ್ಯಂತಾನ್ ಲೋಕಾನ್, ಭುವರ್ಲೋಕಮಾರಭ್ಯ ಸಪ್ತಮಭೂತವೈಕುಂಠಲೋಕಪರ್ಯಂತಾನಿತಿ ವಾ, ಹಿನಸ್ತಿ 'ಹಿಂಸಿ ಹಿಂಸಾಯಾಂ' ನಾಶಯತಿ, ಊರ್ಧ್ವಲೋಕಾಸ್ತಸ್ಯ ನ ಭವಂತೀತ್ಯರ್ಥಃ । ಅತೋ ದರ್ಶಪೌರ್ಣಮಾಸಾದಿಕಮಾಹಿತಾಗ್ನಿನಾ ಕಾಲೇ ಕಾಲೇ ಕಾರ್ಯಮಿತಿ ಭಾವಃ ॥೨.೩॥

ಅನುವಾದ- ಅಗ್ನಿಯಲ್ಲಿ ಮಾಡಬೇಕಾದ ಕರ್ಮಗಳನ್ನು ಈ ರೀತಿಯಾಗಿ ಮಾಡಬೇಕೆಂಬುದನ್ನು, ಹಾಗೆ ಮಾಡದೇ ಹೋದರೇ ಅನರ್ಥವನ್ನು ಹೇಳುವ ಮುಖಾಂತರ 'ಯಸ್ಯಾಽಗ್ನಿಹೋತ್ರಂ...' ಎಂಬ ಮಂತ್ರದಿಂದ ಹೇಳುತ್ತಿದ್ದಾರೆ.

ಯಾವ ಪುರುಷನು ಮಾಡಿದ ಅಗ್ನಿಹೋತ್ರವು ದರ್ಶ-ಪೌರ್ಣಮಾಸ-ಆಗ್ರಾಯಣವೆಂಬ ಯಾಗತ್ರಯಾನುಷ್ಠಾನರಹಿತವಾಗಿದೆಯೋ, ಸಕಾಲದಲ್ಲಿ ಹುತವಾಗಿಲ್ಲವೋ, ವಿಶ್ವೇದೇವತೆಗಳ ಪೂಜೆಯಿಂದ ರಹಿತವಾಗಿದೆಯೋ, ವಿಧಿಗೆ ಅನನುಗುಣವಾಗಿ ಹುತವಾಗಿದೆಯೋ, ಅವನು ಮಾಡಿದ ಆ ಅಗ್ನಿಹೋತ್ರರೂಪವಾದ ಕರ್ಮವು, ಆಸಪ್ತಮಾನ್ ಭೂಲೋಕ ಮೊದಲು ಮಾಡಿ ಏಳನೆಯದಾದ ಸತ್ಯಲೋಕಪರ್ಯಂತವಾದ ಲೋಕಗಳನ್ನು, ಅಥವಾ ಭುವರ್ಲೋಕವನ್ನು ಮೊದಲು ಮಾಡಿ ಏಳನೆಯದಾದ ವೈಕುಂಠದ ವರೆಗಿನ ಲೋಕಗಳನ್ನು ನಾಶಮಾಡುತ್ತದೆ. ಈ ಊರ್ಧ್ವಲೋಕಗಳು ಅವನಿಗೆ ದೊರೆಯುವುದಿಲ್ಲವೆಂದು ಅರ್ಥ. ಆದ್ದರಿಂದ ಆಹಿತಾಗ್ನಿಯಾದವನು ದರ್ಶ-ಪೌರ್ಣಮಾಸಾದಿಗಳನ್ನು ಕಾಲಕಾಲದಲ್ಲಿ ಮಾಡುತ್ತಲೇ ಇರಬೇಕೆಂದು ಭಾವ. ॥೨.೩॥

**ಉಪನಿಷತ್**

**ಕಾಲೀ ಕರಾಲೀ ಚ ಮನೋಜವಾ ಚ**
**ಸುಲೋಹಿತಾ ಯಾ ಚ ಸುಧೂಮ್ರವರ್ಣಾ ।**
**ಸ್ಫುಲಿಂಗಿನೀ ವಿಶ್ವರುಚೀ ಚ ದೇವೀ**
**ಲೇಲಾಯಮಾನಾ ಇತಿ ಸಪ್ತ ಜಿಹ್ವಾಃ ॥೨.೪॥**

**ಏತೇಷು ಯಶ್ಚರತೇ ಭ್ರಾಜಮಾನೇಷು**
**ಯಥಾಕಾಲಂ ಚಾಹುತಯೋ ಹ್ಯಾದದಾಯನ್ ।**
**ತಂ ನಯಂತ್ಯೇತಾಃ ಸೂರ್ಯಸ್ಯ ರಶ್ಮಯೋ**
**ಯತ್ರ ದೇವಾನಾಂ ಪತಿರೇಕೋಧಿವಾಸಃ ॥೨.೫॥**

**ಉಪನಿಷದರ್ಥ-** ಕಾಲೀ, ಕರಾಲೀ, ಮನೋಜವಾ, ಸುಲೋಹಿತಾ, ಸುಧೂಮ್ರವರ್ಣಾ, ಸ್ಫುಲಿಂಗಿನೀ, ವಿಶ್ವರುಚೀ ಎಂಬ ಪ್ರಕಾಶಮಾನವಾದ, ಲೇಲಾಯಮಾನವಾದ ಅಗ್ನಿಯ ಏಳು ಜಿಹ್ವೆಗಳಲ್ಲಿ ಅಗ್ನಿಹೋತ್ರಾದಿರೂಪವಾದ ಯಾಗಗಳನ್ನು ಅಧಿಕಾರಿಯಾದವನು ಮಾಡಬೇಕು.

**ಖಂಡಾರ್ಥ**

ಕುತ್ರ ಹೋತವ್ಯಮಿತ್ಯಪೇಕ್ಷಾಯಾಂ ಯದಾ ಲೇಲಾಯತ ಇತ್ಯುಕ್ತಮಧಿಕರಣಂ ವಿವೃಣೋತಿ- **ಕಾಲೀತಿ** ॥ ವಿಶ್ವರುಚೀ ಚ ದೇವೀತ್ಯೇಕಾ, ಭ್ರಾಜಮಾನೇಷು ದೀಪ್ಯಮಾನಾಸು ಏತೇಷು ಏತಾಸು ಜಿಹ್ವಾಸು ವ್ಯತ್ಯಯಾತ್, ಯಥಾಕಾಲಮಾಹುತಯಃ ಆಹುತೀಃ ಹೂಯಮಾನಹವೀಂಷಿ ಆದದಾಯನ್ ಆದದಾನೋ ಯಶ್ಚರತೇ ಕರ್ಮ ಕುರುತೇ, ಯದ್ವಾ ಚರತ ಇತ್ಯಸ್ಯ ವಿವರಣಂ- ಯಥಾಕಾಲಂ ಕಾಲಮನತಿಕ್ರಮ್ಯ ಆಹುತಯಃ ಆಹುತೀಃ ಆದದಾಯನ್ ಆದದಾನಃ ಕುರ್ವನ್ನಿತಿ ಯಾವತ್ ॥೨.೪॥

ಯಥಾಕಾಲಂ ನತ್ಯಜ್ಞಾನಕಾಮನಯೋಕ್ತನ್ನಾನೇಷು ಹೋತುಃ ಫಲಮಾಹ- **ತಮಿತಿ** ॥ ಏತಾ ಏತೇ ಪ್ರಸಿದ್ಧಾಃ ಸೂರ್ಯಸ್ಯ ರಶ್ಮಯಃ ರಶ್ಮಿಷು ಸ್ಥಿತಾ ದೇವಾಃ,

ದೇವಾನಾಂ ಪತಿರೇಕೋ ಮುಖ್ಯ ಅಧಿವಾಸಃ ಅಧಿವಸಂತಿ ಅತ್ರ ಇತ್ಯಧಿವಾಸೋ ಮುಖ್ಯಾಶ್ರಯೋ ಯತ್ರ ತಿಷ್ಠತಿ ತತ್ರ ತಂ ನಯಂತೀತಿ ।।೨.೫।।

ಅನುವಾದ- ಯಾವ ಅಧಿಕರಣದಲ್ಲಿ ಅಗ್ನಿಹೋತ್ರಾದಿರೂಪವಾದ ಯಾಗಗಳನ್ನು ಮಾಡಬೇಕೆಂದು ಸಮಸ್ಯೆ ಬಂದಾಗ 'ಯದಾ ಲೇಲಾಯತೇ' ಎಂಬ ಮಂತ್ರದಿಂದ ಹೇಳಿರುವ ಅಧಿಕರಣವನ್ನೇ ವಿವರವಾಗಿ 'ಕಾಲೀ...' ಎಂಬ ಈ ಮಂತ್ರದಿಂದ ವಿವರಿಸುತ್ತಿದ್ದಾರೆ.

ವಿಶ್ವರುಚೀ ಎಂಬ ದೇವಿಯೊಬ್ಬಳು, ಭ್ರಾಜಮಾನೇಷು=ಪ್ರಕಾಶ-ಮಾನವಾಗಿರುವ ಈ ಜಿಹ್ವೆಗಳಲ್ಲಿ, ಏತೇಷು ಎಂಬುದನ್ನು ಏತಾಸು ಎಂಬುದಾಗಿ ಲಿಂಗವ್ಯತ್ಯಯ ಮಾಡಿಕೊಳ್ಳಬೇಕು. ಯಾವನು ಯೋಗ್ಯವಾದ ಕಾಲವನ್ನು ಮೀರದೇ ಆಹುತಿಗಳನ್ನು ಸಮರ್ಪಿಸುವನೋ ಎಂದು ಅರ್ಥ. ।।೨.೪।।

ಸತ್ಯ-ಜ್ಞಾನಾದಿಗಳನ್ನು ಬಯಸಿ ಯೋಗ್ಯವಾದ ಕಾಲದಲ್ಲಿ ಉಕ್ತವಾದ ಅಧಿಕರಣದಲ್ಲಿ ಯಾಗವನ್ನು ಮಾಡುವವನು ಯಾವ ಫಲವನ್ನು ಪಡೆಯುತ್ತಾನೆ ಎಂಬುದನ್ನು 'ತಂ ನಯಂತ್ಯೇತಾಃ...' ಎಂಬ ಮಂತ್ರಾರ್ಥದಿಂದ ಹೇಳುತ್ತಿದ್ದಾರೆ. ಏತಾಃ ಅಂದರೇ ಪ್ರಸಿದ್ಧವಾದ ಸೂರ್ಯನ ರಶ್ಮಿಗಳು, ರಶ್ಮಿಗಳಲ್ಲಿ ಸನ್ನಿಹಿತರಾದ ದೇವತೆಗಳು ಎಂದು ಅರ್ಥ. ದೇವತೆಗಳಲ್ಲಿ ಮುಖ್ಯನಾದ, ದೇವತೆಗಳಿಗೆಲ್ಲ ಆಶ್ರಯನಾದ ಪರಮಾತ್ಮನು ಎಲ್ಲಿರುತ್ತಾನೋ ಆ ಸ್ಥಾನಕ್ಕೆ ಈ ಯಜ್ಞಗಳನ್ನು ಮಾಡಿದ ಯಜಮಾನನನ್ನು ಕರೆದು ಕೊಂಡು ಹೋಗುತ್ತಾರೆ. ।।೨.೫।।

### ಉಪನಿಷತ್

ಏಹ್ಯೇಹೀತಿ ತಮಾಹುತಯಃ ಸುವರ್ಚಸಃ
ಸೂರ್ಯಸ್ಯ ರಶ್ಮಿಭಿರ್ಯಜಮಾನಂ ವಹಂತಿ ।
ಪ್ರಿಯಾಂ ವಾಚಮಭಿವದಂತ್ಯೋಽರ್ಚಯಂತ್ಯ
ಏಷ ವಃ ಪುಣ್ಯಃ ಸುಕೃತೋ ಬ್ರಹ್ಮಲೋಕಃ ।।೨.೬।।

**ಉಪನಿಷದರ್ಥ-** ಯಜಮಾನನು ನೀಡಿರುವ ಆಹುತಿಗಳನ್ನು ಸ್ವೀಕರಿಸಿರುವ ಅತಿಶಯವಾದ ವರ್ಚಸ್ಸುಳ್ಳ ಸೂರ್ಯನ ರಶ್ಮಿಗಳಲ್ಲಿ ಸನ್ನಿಹಿತರಾದ ದೇವತೆಗಳು 'ನೀನು ಮಾಡಿರುವ ಪುಣ್ಯಕರ್ಮಗಳಿಂದ ಸಂಪಾದಿಸಿದ ಪರಬ್ರಹ್ಮಲೋಕವಿದು' ಎಂದು ಆ ಲೋಕವನ್ನು ಪ್ರೀತಿಯಿಂದ ಪರಿಚಯಿಸುತ್ತಾ, ಅವರನ್ನು ಅರ್ಚಿಸುತ್ತಾ ಪರಬ್ರಹ್ಮನ ಲೋಕಕ್ಕೆ ಕರೆದುಕೊಂಡು ಹೋಗುತ್ತಾರೆ.

**ಭಾಷ್ಯ**

**ಭಗವದ್ವಿಷಯತ್ವೇನ ಕೃತ ಏಷ ವಃ ಪುಣ್ಯಃ ಸುಕೃತೋ ಬ್ರಹ್ಮಲೋಕಃ । ಪರಬ್ರಹ್ಮಲೋಕಃ ।**

**ಭಾಷ್ಯಾರ್ಥ-** ಭಗವಂತನೇ ವಿಷಯನೆಂದು ತಿಳಿದು ಆಚರಿಸಿರುವ, ಅಂದರೇ, 'ನಾನು ಕರ್ತಾ ಅಲ್ಲ, ಭಗವಂತನೇ ಕರ್ತಾ, ಈ ಎಲ್ಲ ಕರ್ಮವೂ ಭಗವತ್ಪೂಜಾರೂಪ, ಭಗವಂತನೇ ಎಲ್ಲ ಯಜ್ಞಗಳ ಭೋಕ್ತಾ, ಅವನೇ ಸ್ವಾಮೀ' ಎಂಬ ಅನುಸಂಧಾನಪೂರ್ವಕವಾಗಿ ಭಗವದರ್ಪಣಬುದ್ಧಿಯಿಂದ ನೀವು ಆಚರಿಸಿರುವ ಪ್ರಮಾಣಪ್ರಮಿತವಾದ ನಿವೃತ್ತಕರ್ಮದಿಂದ ಲಭ್ಯವಾಗುವ ಪರಬ್ರಹ್ಮಲೋಕವು ನಿಮಗಾಗಿ ಸಿದ್ಧವಾಗಿದೆ.

**ಭಾಷ್ಯ**

**ನಿಷ್ಕಾಮಂ ಜ್ಞಾನಪೂರ್ವಂ ತು ನಿವೃತ್ತಮಿತಿ ಚೋಚ್ಯತೇ ।**
**ನಿವೃತ್ತಂ ಸೇವಮಾನಸ್ತು ಬ್ರಹ್ಮಾऽಭ್ಯೇತಿ ಸನಾತನಮ್ ॥**
**ಇತಿ ವ್ಯಾಸಸ್ಮೃತಿಃ ॥**

**ಭಾಷ್ಯಾರ್ಥ-** ಸ್ವರ್ಗಾದಿಕಾಮನೆಗಳಿಲ್ಲದೇ, ನಾऽಹಂ ಕರ್ತಾ ಇತ್ಯಾದಿಯಾದ ಜ್ಞಾನದಿಂದ ಯುಕ್ತನಾಗಿ, ಆಚರಿಸಿರುವ ಕರ್ಮವು ನಿವೃತ್ತವೆನಿಸುತ್ತದೆ. ನಿವೃತ್ತವಾದ ಕರ್ಮಗಳನ್ನು ಆಚರಿಸುವವನು ಸನಾತನನಾದ ಪರಮಾತ್ಮನನ್ನು ಪಡೆಯುತ್ತಾನೆ. ನಿವೃತ್ತಕರ್ಮವು ಪರಬ್ರಹ್ಮಲೋಕಕ್ಕೆ ಸಾಧನವಾಗುತ್ತದೆ. ಎಂದು ವ್ಯಾಸಸ್ಮೃತಿಯು ತಿಳಿಸುತ್ತದೆ.

**ಭಾಷ್ಯ**

**ಸ ಯ ಆತ್ಮಾನಮೇವ ಲೋಕಮುಪಾಸ್ತೇ ನ ಹಾಽಸ್ಯ ಕರ್ಮ ಕ್ಷೀಯತೇ ಇತಿ ಚ ಶ್ರುತಿಃ ।**

ಭಾಷ್ಯಾರ್ಥ- ಪ್ರಸಿದ್ಧನಾದ ಯಾವ ಅಧಿಕಾರಿಯು ಸರ್ವಾಶ್ರಯನಾದ ಪರಮಾತ್ಮನನ್ನು ಸತ್ಕರ್ಮಗಳಿಂದ ಅರ್ಚಿಸುತ್ತಾನೋ ಅವನು ಜ್ಞಾನಪೂರ್ವಕವಾಗಿ ಅನುಷ್ಠಾನ ಮಾಡಿರುವ ಸ್ವವರ್ಣಾಶ್ರಮೋಚಿತವಾದ ಕರ್ಮವು, ಕ್ಷಯವಾದ ಸ್ವರ್ಗಾದಿಫಲಕವಾಗುವುದಿಲ್ಲ. ಕಿಂತು ಅಪರೋಕ್ಷಜ್ಞಾನದ್ವಾರಾ ಅಕ್ಷಯವಾದ ಭಗವಲ್ಲೋಕದ ಪ್ರಾಪ್ತಿಗೆ ಸಾಧನವಾಗುತ್ತದೆ. ಹ= ಇದು ಪ್ರಸಿದ್ಧವಾಗಿದೆ. ಹೀಗೆಂದು ಶ್ರುತಿಯು ಹೇಳುತ್ತದೆ.

**ಭಾಷ್ಯ**

**ಸಹಯಜ್ಞಾಃ ಪ್ರಜಾಃ ಸೃಷ್ಟ್ವಾ ಇತ್ಯುಕ್ತ್ವಾ**
**ಏವಂ ಪ್ರವರ್ತಿತಂ ಚಕ್ರಂ ನಾಽನುವರ್ತಯತೀಹ ಯಃ ।**
**ಅಘಾಯುರಿಂದ್ರಿಯಾರಾಮೋ ಮೋಘಂ ಪಾರ್ಥ ಸ ಜೀವತಿ ॥**
**ಇತಿ ಚ ॥**

ಭಾಷ್ಯಾರ್ಥ- ವಿಹಿತವಾದ ಯಜ್ಞಾದಿಕರ್ಮಕಲಾಪಗಳಿಂದ ಸಹಿತವಾಗಿಯೇ ಪ್ರಜರನ್ನು ಪರಮಾತ್ಮ ಸೃಷ್ಟಿಮಾಡಿದ, ಎಂದು ಹೇಳಿ ಹೀಗೆ ಪರಮಾತ್ಮನಿಂದಲೇ ಪ್ರವರ್ತಿತವಾಗಿರುವ ಯಜ್ಞಜನ್ಯ ಪರ್ಜನ್ಯ, ಪರ್ಜನ್ಯಜನ್ಯ ಅನ್ನ ಅನ್ನಜನ್ಯವಾಗಿವೆ ಭೂತಗಳು ಎಂಬ ಈ ರೀತಿಯಾದ, ವೇದಬ್ರಹ್ಮಾದಿ ಈ ಚಕ್ರವನ್ನು ಯಾರು ಸ್ವವಿಹಿತವಾದ ಕರ್ಮಗಳನ್ನು ಮಾಡುವ ಮೂಲಕ ಅನುಸರಿಸುವುದಿಲ್ಲವೋ, ಅವನ ಆಯುಷ್ಯವೆಲ್ಲ ಪಾಪಜನಕವೇ ಆಗುತ್ತದೆ. ಕೇವಲ ವಿಷಯಭೋಗದಲ್ಲಿ ಆಸಕ್ತನಾಗಿರುವ ಅವನ ಜೀವನವೆಲ್ಲ ಬರಡಾಗುತ್ತದೆ. ಎಂದು ಗೀತೆಯಲ್ಲಿ ಹೇಳಿದ್ದಾರೆ. ಆದ್ದರಿಂದ ಸ್ವವಿಹಿತವಾದ ಕರ್ಮಗಳನ್ನು ಆಚರಿಸಲೇ ಬೇಕು.

### ಭಾಷ್ಯ

'ಯಾಂತಿ ಮದ್ಯಾಜಿನೋಽಪಿ ಮಾಮ್' ಇತಿ ಚ ।

ಭಾಷ್ಯಾರ್ಥ- ಭಗವಂತನೇ ಕರ್ತಾ ಇವೇ ಮೊದಲಾದ ಅನುಸಂಧಾನಗಳಿಂದ ಯುಕ್ತನಾಗಿ ಸ್ವೋಚಿತವಾದ ಕರ್ಮಗಳಿಂದ ನನ್ನ ಪೂಜೆಯನ್ನೇ ಮಾಡುವ ಸ್ವಭಾವ ಉಳ್ಳ ಸಾಧಕರು ನನ್ನನ್ನೇ ಹೊಂದುತ್ತಾರೆ. ಹೀಗೆಂದು ಕೃಷ್ಣನು ಗೀತೆಯಲ್ಲಿ ಹೇಳಿದ್ದಾನೆ ಆದ್ದರಿಂದ ಭಗವತ್ಪ್ರೀತಿಗಾಗಿ ಕರ್ಮವನ್ನು ಮಾಡಬೇಕು. ಹೀಗೆ ಮಾಡಿದ ಕರ್ಮವು ಪರಬ್ರಹ್ಮಲೋಕಕ್ಕೆ ಸಾಧನವಾಗುತ್ತದೆ ಎಂದು ಈ ಪ್ರಮಾಣದಿಂದ ಸಿದ್ಧವಾಗುತ್ತದೆ.

### ಭಾಷ್ಯ

ಅಹಂ ಹಿ ಸರ್ವಯಜ್ಞಾನಾಂ ಭೋಕ್ತಾ ಚ ಪ್ರಭುರೇವ ಚ ।
ನ ತು ಮಾಮಭಿಜಾನಾಂತಿ ತತ್ತ್ವೇನಾಽತಶ್ಚ್ಯವಂತಿ ತೇ ॥ ಇತಿ ಚ ॥

ಭಾಷ್ಯಾರ್ಥ- ನಾನೇ ಎಲ್ಲ ಯಜ್ಞಗಳ ಕರ್ತಾ. ಅವುಗಳ ಭೋಕ್ತೃವೂ ನಾನೇ ಆಗಿದ್ದೇನೆ. ಸ್ವಾಮಿಯೂ ಪೂಜ್ಯನೂ ನಾನೇ. ಈ ವಿಷಯ ಶ್ರುತ್ಯಾದಿ ಪ್ರಸಿದ್ಧವಾಗಿದೆ. ಹೀಗಿದ್ದರೂ ಸರ್ವಯಜ್ಞಭೋಕ್ತೃತ್ವಾದಿನಾ ನನ್ನನ್ನು ತಿಳಿಯದೇ ಇತರದೇವತೆಗಳನ್ನು ಹಲವರು ಪೂಜಿಸುತ್ತಾರೆ. ಆದ್ದರಿಂದ ಅವರು ಆಚರಿಸಿದ ಕರ್ಮದ ಫಲವಾದ ಸ್ವರ್ಗಾದಿಗಳನ್ನು ಅನುಭವಿಸಿ ಪುಣ್ಯಕ್ಷಯವಾದ ಮೇಲೆ ಮತ್ತೆ ಕೆಳಗೆ ಬೀಳುತ್ತಾರೆ. ಈ ವಿಷಯವನ್ನು ಕೃಷ್ಣಪರಮಾತ್ಮ ಗೀತೆಯಲ್ಲಿ ಹೇಳಿದ್ದಾನೆ. ಹೀಗಾಗಿ ಭಗವದ್ವಿಷಯತ್ವೇನ ಸ್ವೋಚಿತವಾದ ಕರ್ಮಗಳನ್ನು ಮಾಡಬೇಕು. ಇಲ್ಲದಿದ್ದರೇ ಅನರ್ಥವಾಗುತ್ತದೆ ಎಂದು ಈ ಪ್ರಮಾಣವಚನ ತಿಳಿಸುತ್ತದೆ.

### ಭಾಷ್ಯ

ಯಸ್ಮಾತ್ತ್ವರತಿಃ ಇತ್ಯುಕ್ತ್ವಾಪಿ 'ಕುರ್ಯಾದ್ವಿದ್ವಾಂಸ್ತಥಾಽಸಕ್ತಃ'
ಇತ್ಯೇವೋಕ್ತತ್ವಾಚ್ಚ ।

ಭಾಷ್ಯಾರ್ಥ- 'ಯಸ್ತ್ವಾತ್ಮರತಿಃ' 'ಯಾವನು ಪರಮಾತ್ಮನ ದರ್ಶನದಿಂದ ಜನ್ಯವಾದ ಆನಂದದಲ್ಲಿ ಮಗ್ನನಾಗಿರುವನೋ ಅವನು ಕರ್ಮಮಾಡಬೇಕಾಗಿಲ್ಲ' ಎಂಬ ಶ್ಲೋಕವು ಜ್ಞಾನಿಯಾದವನು ಕರ್ಮವನ್ನು ಮಾಡಬಾರದು ಎಂಬ ವಿಷಯವನ್ನು ತಿಳಿಸುವುದಿಲ್ಲ. ಈ ಮಾತನ್ನು ಹೇಳಿದ ನಂತರ, 'ಕುರ್ಯಾತ್...' ಜ್ಞಾನಿಯಾದವನು ಸ್ವರ್ಗಾದಿರೂಪವಾದ ಫಲದಲ್ಲಿ ಆಸಕ್ತನಾಗದೇ ಕರ್ಮಗಳನ್ನು ಮಾಡಬೇಕು. ಎಂದೇ ಕೃಷ್ಣಪರಮಾತ್ಮ ಹೇಳಿದ್ದಾನೆ. ಆದ್ದರಿಂದ 'ಯಸ್ತ್ವಾತ್ಮರತಿಃ' ಎಂಬ ವಾಕ್ಯವು ಅಸಂಪ್ರಜ್ಞಾತಸಮಾಧ್ಯವಸ್ಥೆಯಲ್ಲಿ ಇದ್ದವನು ಸ್ವವಿಹಿತವಾದ ಕರ್ಮಗಳನ್ನು ಮಾಡದಿದ್ದರೇ ಅವನಿಗೆ ಪ್ರತ್ಯವಾಯವಿಲ್ಲ ಎಂದು ಮಾತ್ರ ಹೇಳುತ್ತದೆ. ಅಸಂಪ್ರಜ್ಞಾತಸಮಾಧಿ ಎಂಬ ಅವಸ್ಥೆಯನ್ನು ಬಿಟ್ಟು ಉಳಿದಾಗ ಜ್ಞಾನಿಗಳು ಕರ್ಮಗಳನ್ನು ಮಾಡಲೇ ಬೇಕು ಎಂದು ತಿಳಿಯಬೇಕು.

### ಭಾಷ್ಯ

ಯೇ ತ್ವೇತದಭ್ಯಸೂಯಂತೋ ನಾನುತಿಷ್ಠಂತಿ ಮೇ ಮತಮ್ ।
ಸರ್ವಜ್ಞಾನವಿಮೂಢಾನ್ ತಾನ್ ವಿದ್ಧಿ ನಷ್ಟಾನಚೇತಸಃ ।।ಇತಿ ಚ।।

ಭಾಷ್ಯಾರ್ಥ- ಶ್ರದ್ಧಾರಹಿತರಾದ, ದುಃಖಭೂಯಿಷ್ಠವಾದ ಕರ್ಮದಲ್ಲಿ ತೊಡಗಿಸಿದ ದೇವರು ಕಾರುಣಿಕನಲ್ಲ ಎಂದು ದೇವರ ಅಸೂಯೆ ಮಾಡುವವರಾಗಿ, ನನಗೆ (ಕೃಷ್ಣಪರಮಾತ್ಮನಿಗೆ) ಸಮ್ಮತವಾದ ಸ್ವವಿಹಿತವಾದ ಕರ್ಮಗಳನ್ನು ಅನುಷ್ಠಾನ ಮಾಡುವುದಿಲ್ಲವೋ ಅವರು ಸರ್ವಕರ್ಮಗಳ, ಎಲ್ಲ ಜೀವರ ಮತ್ತು ದೇವರ ವಿಷಯದಲ್ಲಿ ಮೋಹವನ್ನು ಹೊಂದಿದ್ದರಿಂದ ನರಕಾದ್ಯನರ್ಥವನ್ನು ಹೊಂದುವರು ಎಂದು, ಅವರು ದುಷ್ಟಚಿತ್ತರೆಂದು ತಿಳಿ. ಎಂದು ನಿಂದೆ ಮಾಡಿದ್ದಾರೆ. ಆದ್ದರಿಂದ ಭಗವತ್ಪ್ರೀತ್ಯರ್ಥ ಸ್ವವರ್ಣಾಶ್ರಮೋಚಿತವಾದ ಕರ್ಮಗಳನ್ನು ಮಾಡಬೇಕೆಂದು ತಿಳಿಯಬೇಕು.

### ಭಾಷ್ಯ

'ಲೋಕೇಽಸ್ಮಿನ್ ದ್ವಿವಿಧಾ ನಿಷ್ಠಾ ಪುರಾ ಪ್ರೋಕ್ತಾ ಮಯಾಽನಘ'
ಇತ್ಯುಕ್ತತ್ವಾಚ್ಚ ನಾತ್ರಮಾಂತರವಿರೋಧಃ ।

ಭಾಷ್ಯಾರ್ಥ- ಭಗವದ್ವಿಷಯಕವಾದ ಯಜ್ಞಾದಿಕರ್ಮಗಳನ್ನು ಅವಶ್ಯವಾಗಿ ಮಾಡಲೇಬೇಕೆಂದರೇ ಯತ್ಯಾಶ್ರಮಿಗಳಿಗೆ ಕರ್ಮಲೋಪವು ಪ್ರಸಕ್ತವಾಗುತ್ತದೆ. ಯಜ್ಞಾದಿಗಳನ್ನು ಆಚಸಿರಿದರೇ ಪ್ರತ್ಯವಾಯವು ಪ್ರಾಪ್ತವಾಗುತ್ತದೆ ಆದ್ದರಿಂದ ಯತ್ಯಾಶ್ರಮವೇ ಲುಪ್ತವಾಗಬೇಕಾಗುತ್ತದೆ ಎಂಬ ಸಮಸ್ಯೆಗೆ ಈ ಭಾಷ್ಯವು ಉತ್ತರವಾಗಿದೆ.

ಈ ಲೋಕದಲ್ಲಿ ಸಾಂಖ್ಯಯೋಗಿಗಳು ಅಂದರೇ ಜ್ಞಾನಯೋಗಿಗಳು, ಮತ್ತು ಕರ್ಮಯೋಗಿಗಳೆಂದು ಸಾಧಕರು ಎರಡು ರೀತಿಯಾಗಿದ್ದಾರೆ. ಗೃಹಸ್ಥರಾದವರು ಅಗ್ನಿಹೋತ್ರಾದಿಸ್ವವರ್ಣಾಶ್ರಮವಿಹಿತವಾದ ಕರ್ಮಗಳನ್ನು ಭಗವತ್ಪ್ರೀತ್ಯರ್ಥವಾಗಿ ಮಾಡುತ್ತಲೇ ಕರ್ಮಪ್ರಚುರವಾದ ಉಪಾಯದಿಂದ ಮುಕ್ತಿಯನ್ನು ಪಡೆಯಬೇಕು.

ಯತಿಗಳು ಜ್ಞಾನಯೋಗಿಗಳು. ಜ್ಞಾನಪ್ರಚುರವಾದ ಉಪಾಯದಿಂದಲೇ ಅವರಿಗೆ ಮುಕ್ತಿ. ಹೀಗಾಗಿ ಅವರು ಗೃಹಸ್ಥರಿಗೆ ಮಾತ್ರ ವಿಹಿತವಾದ ಅಗ್ನಿಹೋತ್ರಾದಿ ಕರ್ಮಗಳನ್ನು ಮಾಡಬಾರದು. ಆದರೂ ಶಮ-ದಮಾದಿಬ್ರಾಹ್ಮಕರ್ಮಗಳನ್ನು ಅನುಷ್ಠಾನಮಾಡುವುದು ಯತಿಗಳ ಧರ್ಮವೇ ಆಗಿದೆ. ಆದ್ದರಿಂದ ಶಮ-ದಮಾದಿಪೂರ್ವಕವಾಗಿ ಜ್ಞಾನವನ್ನು ಸಂಪಾದಿಸುತ್ತಲೇ ಇರಬೇಕು. ಇದರಿಂದಲೇ ಅವರಿಗೆ ಮುಕ್ತಿಯು ದೊರೆಯುತ್ತದೆ. ಹೀಗೆಂದು ಕೃಷ್ಣನು ಸ್ಪಷ್ಟವಾಗಿ ಹೇಳಿದ್ದರಿಂದ ಯತ್ಯಾಶ್ರಮಲೋಪಪ್ರಸಕ್ತಿಯು ಇರುವುದಿಲ್ಲ.

## ಭಾಷ್ಯ

ತ್ರೇತಾಯಾಂ ಬಹುಧಾ ಸಂತತಾನಿ ಕೃತೇ ತ್ವೇಕಪ್ರಕಾರೇಣೈವ ಸಂತತಾನಿ ।

ಭಾಷ್ಯಾರ್ಥ- ತ್ರೇತಾಯುಗದಲ್ಲಿ ಉತ್ತಮರಾದ ಸಾಧಕರು ವಿಷ್ಣುಪೂಜಾತ್ಮಕವಾದ ಯಜ್ಞಾದಿಕರ್ಮಗಳನ್ನು ಅನುಷ್ಠಾನಮಾಡುತ್ತಿದ್ದರು. ಮಧ್ಯಮರಾದ ಸಾಧಕರು ಇತರದೇವತಾವಿಷಯಕವಾದ ಯಜ್ಞಾದಿಕರ್ಮಗಳನ್ನು ಮಾಡಿದರೂ ಕೊನೆಯಲ್ಲಿ ಅವುಗಳನ್ನು ವಿಷ್ಣುವಿಗೇ ಸಮರ್ಪಿಸುತ್ತಿದ್ದರು.

ಅಧಮರಾದವರು ಕೊನೆಯಲ್ಲಿಯೂ ವಿಷ್ಣುವಿಗೆ ಸಮರ್ಪಿಸದೇ ನಾನಾದೇವತಾವಿಷಯಕವಾದ ಕರ್ಮಗಳನ್ನು ಮಾಡುತ್ತಿದ್ದರು. ಹೀಗೆ ತ್ರೇತೆಯಲ್ಲಿ ಬಹುಧಾ ಕರ್ಮಗಳು ಪ್ರಚಲಿತವಾಗಿದ್ದವು. ಕೃತಯುಗದಲ್ಲಿ ಸಾಧಕರೆಲ್ಲರೂ ಭಗವತ್ಪ್ರೀತ್ಯರ್ಥವಾಗಿಯೇ ಯಜ್ಞಾದಿ ಎಲ್ಲ ಕರ್ಮಗಳನ್ನು ಆಚರಿಸುತ್ತಿದ್ದರು. ಹೀಗಾಗಿ ಏಕಪ್ರಕಾರವಾಗಿಯೇ ಕರ್ಮಗಳು ಪ್ರಚಲಿತವಾಗಿದ್ದವು. ಆದ್ದರಿಂದ ಕೃತಯುಗದ ಸಾಧಕರೆಲ್ಲರೂ, ತ್ರೇತಾಯುಗದ ಉತ್ತಮಸಾಧಕರು ವಿಷ್ಣುವಿಷಯಕವಾದ ಕರ್ಮಗಳನ್ನು ಮಾಡಿದ್ದಾರೆ ಎಂದು ತಿಳಿಸುವುದರಿಂದ ಈ ವಿಷಯದಲ್ಲಿ ಶಿಷ್ಟಾಚಾರವನ್ನು ತಿಳಿಸಿದಂತೆ ಆಯಿತು. ಆದ್ದರಿಂದಲೂ ವಿಷ್ಣುಪೂಜಾರೂಪವಾದ ಕರ್ಮಗಳನ್ನು ಪ್ರತಿಯೊಬ್ಬ ಸಾಧಕನೂ ಆಚರಿಸಲೇ ಬೇಕೆಂದು ಸಿದ್ಧವಾಗುತ್ತದೆ. ಈ ವಿಷಯದಲ್ಲಿ ಮುಂದಿನ ಪಾದ್ಮ ಪುರಾಣದ ವಚನವು ಸಂವಾದಿಯಾಗಿದೆ.

### ಭಾಷ್ಯ

ಅಗ್ನಿಷ್ಟೋಮಾದಿಭಿರ್ಯಜ್ಞೈಃ ಸರ್ವದೇವಸ್ಥಿತಂ ಹರಿಮ್ ।
ಯಜಂತಿ ತಾಂಶ್ಚ ಕಾರಿತ್ವಾದ್ವಸುಸ್ತಸ್ಮಾತ್ ತಥಾಽಯಜತ್ ॥
ಪೃಥಕ್ ಪೃಥಕ್ ಚ ತ್ರೇತಾಯಾಂ ಯಜಂತೇ ದೇವತಾಗಣಾನ್ ।
ಯಥಾ ಕೃತೇ ತಥಾ ಪ್ರಾಜ್ಞಾಃ ತ್ರೇತಾಯಾಂ ಬಹುಧಾ ತತಃ ॥

ಇತಿ ಪಾದ್ಮೇ॥

ಭಾಷ್ಯಾರ್ಥ- ಕೃತಯುಗದಲ್ಲಿ ಅಗ್ನಿಷ್ಟೋಮಾದಿಯಜ್ಞಗಳಿಂದ ಎಲ್ಲ ದೇವತೆಗಳಲ್ಲಿರುವ ಶ್ರೀಹರಿಯನ್ನೇ ಪೂಜಿಸುತ್ತಿದ್ದರು. ಇಂದ್ರಾದಿದೇವತೆಗಳನ್ನು ಭಗವತ್ಸೇವೆಯನ್ನು ಮಾಡುವವರು ಎಂದು ಪೂಜಿಸುತ್ತಿದ್ದರು. ವಸುಮಹಾರಾಜನು ಕೂಡಾ ಇದೇರೀತಿಯಾಗಿ ಯಜ್ಞಾದಿಕರ್ಮಗಳನ್ನು ಮಾಡಿದನು.

ತ್ರೇತಾಯುಗದಲ್ಲಿ ಪ್ರತ್ಯೇಕ-ಪ್ರತ್ಯೇಕವಾಗಿ ದೇವತೆಗಳನ್ನು ಪೂಜಿಸಿ ಅದನ್ನು ಕೊನೆಯಲ್ಲಿ ವಿಷ್ಣುವಿಗೆ ಸಮರ್ಪಿಸುತ್ತಿದ್ದರು. ಮತ್ತೆ ಕೆಲವರು ದೇವರಿಗೂ ಸಮರ್ಪಿಸದೇ ಅನೇಕದೇವತಾವಿಷಯಕವಾದ ಕರ್ಮಗಳನ್ನು

ಮಾಡುತ್ತಿದ್ದರು. ತ್ರೇತಾಯುಗದಲ್ಲಿಯೂ ಪ್ರಾಜ್ಞರಾದವರು ಕೃತಯುಗದಲ್ಲಿಯ ಸಾಧಕರಂತೆ ವಿಷ್ಣುಪೂಜಾತ್ಮಕವಾಗಿಯೇ ಎಲ್ಲ ಯಜ್ಞಗಳನ್ನು ಮಾಡುತ್ತಿದ್ದರು. ಹೀಗೆ ತ್ರೇತೆಯಲ್ಲಿ ಕರ್ಮಗಳು ಬಹುಧಾ ಸಂತತವಾಗಿದ್ದವು. ಈ ವಿಷಯವನ್ನು ಪದ್ಮಪುರಾಣವು ತಿಳಿಸುತ್ತದೆ.

## ಭಾಷ್ಯ

ಯಮಿಂದ್ರಮಾಹುರ್ವರುಣಂ ಯಮಾಹುಃ
ಯಂ ಮಿತ್ರಮಾಹುರ್ಯಮು ಸತ್ಯಮಾಹುಃ ।
ಯೋ ದೇವಾನಾಂ ದೇವತಮೋ ಜನಿತ್ರೋ
ವಾಯೋಸ್ತಸ್ಮೈ ಸೋಮಮೇಭ್ಯೋ ಜುಹೋಮಿ ॥

ಏವಂ ವಾಯೋಃ ಪಿತರಂ ವಿಷ್ಣುಮೇವ
ಯಜಂತಿ ದೇವೈಃ ಸಹ ಯೇ ಕೃತೇ ಜನಾಃ ।
ಏವಂ ತ್ರೇತಾಯಾಂ ಕೇಚಿದನ್ಯೇ ಪೃಥಕ್
ತಾನಿಷ್ಟ್ವಾ ವಿಷ್ಣಾವರ್ಪಯಂತೇ ನ ಚಾಽನ್ಯೇ ॥

ಭಾಷ್ಯಾರ್ಥ- ಕೃತಯುಗದ ಜನರು ಭಗವಂತನನ್ನು ಇಂದ್ರನೆಂದು, ವರುಣನೆಂದು, ಮಿತ್ರನೆಂದು, ಸತ್ಯ ಎಂದು ಕರೆಯುತ್ತಿದ್ದರು. ಅವನು ದೇವತೆಗಳಿಗೆಲ್ಲ ಉತ್ತಮನಾಗಿದ್ದಾನೆ. ವಾಯುದೇವರಿಗೆ ಜನಕರಾಗಿದ್ದಾರೆ. ಅಂತಹ ಪರಮಾತ್ಮನಿಗೆ ಮತ್ತು ಅವನ ಸೇವಕರಾದ ವಾಯು-ಇಂದ್ರಾದಿ-ದೇವತೆಗಳಿಗೆ ಈ ಸೋಮವನ್ನು ಸಮರ್ಪಿಸುತ್ತೇನೆ ಎಂದು ಹೇಳಿ ಸೋಮಾದಿದ್ರವ್ಯಗಳನ್ನು ಸಮರ್ಪಿಸುತ್ತಾ ಕೃತಯುಗದ ಜನರು ದೇವರನ್ನೇ ಪ್ರಧಾನವಾಗಿ ಪೂಜಿಸುತ್ತಾ ದೇವತೆಗಳನ್ನೂ ಅಪ್ರಧಾನವಾಗಿ ಪೂಜಿಸುತ್ತಿದ್ದರು. ಇದೇರೀತಿಯಾಗಿ ತ್ರೇತಾಯುಗದಲ್ಲಿಯೂ ಕೆಲವರು ಕೃತಯುಗದ ಸಾಧಕರಂತೆ ಪೂಜಿಸುತ್ತಿದ್ದರು. ಮತ್ತೆ ಕೆಲವರು ಅನ್ಯದೇವತೆಗಳನ್ನು ಯಜಿಸಿ ಕೊನೆಗೆ ಆ ಕರ್ಮವನ್ನು ವಿಷ್ಣುವಿಗೆ ಸಮರ್ಪಿಸುತ್ತಿದ್ದರು. ಉಳಿದವರು ಅನ್ಯದೇವತೆಗಳನ್ನು ಯಜಿಸಿದರೂ ಆ ಕರ್ಮವನ್ನು ವಿಷ್ಣುವಿಗೆ ಸಮರ್ಪಿಸುತ್ತಿರಲಿಲ್ಲ. ಹೀಗೆಂದು ಬ್ರಹ್ಮಾಂಡಪುರಾಣವು ತಿಳಿಸುತ್ತದೆ.

### ಖಂಡಾರ್ಥ

ನಯನಪ್ರಕಾರಮೇವಾಹ- **ಏಹ್ಯೇಹೀತಿ ॥ ಆಹುತಯಃ ಆಹೂಯಮಾನಾಃ,** **ಸ್ವೀಕೃತಹವಿರ್ಭಾಗಾ ಇತಿ ಯಾವತ್, ಸುವರ್ಚಸಃ ಶೋಭನವರ್ಚಸ್ಕಾಃ ದೇವಾಃ ಸ್ವಾಧಿಷ್ಠಾನಭೂತೈಃ ಸೂರ್ಯಸ್ಯ ರಶ್ಮಿಭಿಃ ಯಜಮಾನಂ ವಹಂತಿ । ಕಥಮ್? ಏಹ್ಯೇಹಿ ವಃ ಪುಣ್ಯಃ ಪುಣ್ಯಸಾಧ್ಯಃ, ತಸ್ಯ ವಿವರಣಮ್ ಸುಕೃತಃ ಬ್ರಹ್ಮಲೋಕಃ ಪರಬ್ರಹ್ಮಲೋಕ ಇತಿ ಪ್ರಿಯಾಂ ವಾಚಮಭಿವದಂತ್ಯಃ ಅಭಿವದಂತಃ ಅರ್ಚಯಂತ್ಯಃ ಪೂಜಯಂತಃ ವಹಂತೀತಿ ॥೨.೬॥**

ಅನುವಾದ- ಸೂರ್ಯನ ರಶ್ಮಿಗಳಲ್ಲಿ ಸನ್ನಿಹಿತರಾದ ದೇವತೆಗಳು ಅಗ್ನಿಹೋತ್ರಾದಿರೂಪವಾದ ಯಾಗಗಳನ್ನು ಅನುಷ್ಠಾನ ಮಾಡಿದ ಪುರುಷನನ್ನು ಹೇಗೆ ವಿಷ್ಣುಲೋಕಕ್ಕೆ ಕರೆದುಕೊಂಡು ಹೋಗುತ್ತಾರೆ ಎಂಬುದನ್ನು 'ಏಹ್ಯೇಹಿ...' ಎಂಬ ಮಂತ್ರವು ತಿಳಿಸುತ್ತದೆ.

ಆಹುತಿಗಳು ಎಂದರೇ ತಮ್ಮ ಹವಿರ್ಭಾಗವನ್ನು ಸ್ವೀಕರಿಸಿದ ದೇವತೆಗಳು ಎಂದು ಅರ್ಥ. ಸುವರ್ಚಸಃ ಎಂದರೇ ಶೋಭಿತವಾದ ಕಾಂತಿ ಉಳ್ಳವರು ಎಂದು ಅರ್ಥ. ಇಂತಹ ದೇವತೆಗಳು ತಮಗೆ ಅಧಿಷ್ಠಾನವಾಗಿರುವ ಸೂರ್ಯನ ರಶ್ಮಿಗಳಿಂದ ಯಜಮಾನನನ್ನು ಕರೆದುಕೊಂಡು ಹೋಗುತ್ತಾರೆ. 'ಬನ್ನಿ ಬನ್ನಿ ಇದು ನಿಮ್ಮ ಪುಣ್ಯದಿಂದ ನೀವು ಸಂಪಾದಿಸಿದ ಬ್ರಹ್ಮಲೋಕ ಪರಬ್ರಹ್ಮನಾದ ಪರಮಾತ್ಮನ ಲೋಕ' ಎಂದು ಪ್ರಿಯವಾದ ಮಾತುಗಳನ್ನು ಆಡುತ್ತಾ ಯಜಮಾನರನ್ನು ಪೂಜಿಸುತ್ತಾ ಕರೆದುಕೊಂಡು ಹೋಗುತ್ತಾರೆ ಎಂದು ತಾತ್ಪರ್ಯ. ॥೨.೬॥

### ಉಪನಿಷತ್

**ಪ್ಲವಾ ಹ್ಯೇತೇ ಅದೃಢಾ ಯಜ್ಞರೂಪಾ**
**ಅಷ್ಟಾದಶೋಕ್ತಮವರಂ ಯೇಷು ಕರ್ಮ ।**
**ಏತಚ್ಛ್ರೇಯೋ ಯೇಽಭಿನಂದಂತಿ ಮೂಢಾ**
**ಜರಾಮೃತ್ಯುಂ ತೇ ಪುನರೇವಾಪಿಯಂತಿ ॥೨.೭॥**

**ಉಪನಿಷದರ್ಥ-** ಭಗವಂತ ಯಾವ ಯಜ್ಞಗಳಿಗೆ ವಿಷಯನಾಗಿಲ್ಲವೋ ಅಂತಹ ಯಜ್ಞಗಳು ವಿಧ್ಯುಕ್ತವಾದ ಯಜ್ಞಗಳಂತ ತೋರುತ್ತವೆ. ಆದರೇ ಅವು ನಿಜವಾಗಿ ಯಜ್ಞಗಳಲ್ಲ, ದೋಣಿಗಳಂತೆ ಕಾಣುತ್ತವೆ ಎಂದು ತಿಳಿದು ಶಿಥಿಲವಾದ ದೋಣಿಗಳಿಂದ ನದಿಯನ್ನು ದಾಟಲು ಹೊರಟರೇ ಹೇಗೆ ಅನರ್ಥವಾಗುತ್ತದೋ ಹಾಗೆ ಭಗವದ್ವಿಷಯಕವಾಗದ ಈ ಯಾಗಗಳಿಂದಲೂ ಅನಿಷ್ಟವನ್ನು ಎದುರಿಸಬೇಕಾಗುತ್ತದೆ. ಹದಿನಾರು ಜನ ಋತ್ವಿಜರು ಒಬ್ಬ ಯಜಮಾನ ಮತ್ತೊಬ್ಬ ನಿರೀಕ್ಷಕನಾದ ಸಭ್ಯ ಇವರೆಲ್ಲರೂ ಸ್ವವಿಹಿತವಾದ ಕರ್ಮಗಳನ್ನು ಮಾಡಿದರೇ ಮಾತ್ರ ಸಾಲದು. ಹರಿವಿಷಯಕತ್ವದ ಅರಿವು ಇವರಿಗೆಲ್ಲ ಇರಬೇಕು. ಈ ಅರಿವು ಇಲ್ಲದಿದ್ದುದರಿಂದ ಇವರು ಮಾಡುವ ಕರ್ಮ ಅಪಕೃಷ್ಟವೆನಿಸುತ್ತದೆ. ಹರಿವಿಷಯಕವಾಗದ ಈ ಕರ್ಮವೇ ಶ್ರೇಯಸ್ಸಾಧನವಾಗುತ್ತದೆ ಎಂದು ಅನುಮೋದಿಸಿದವನು ಕೂಡಾ ಜರಾಮರಣಯುಕ್ತವಾದ ಈ ಸಂಸಾರವನ್ನು ಮತ್ತೆ ಮತ್ತೆ ಹೊಂದುತ್ತಾನೆ.

## ಖಂಡಾರ್ಥ

ಸತ್ಯವಿಷಯತ್ವೇನ ಕೃತಕರ್ಮಣಾಮುಕ್ಷಯಫಲಮುಕ್ತ್ವಾ ತದವಿಷಯತ್ವೇನ ಕೃತಕರ್ಮಣಾಮನಿಷ್ಟಫಲಮಾಹ- **ಪ್ಲವಾ ಇತಿ** ॥ ಏತೇ ಭಗವದವಿಷಯತ್ವೇನ ಅನುಷ್ಠಿತಾಃ ಯಜ್ಞರೂಪಾ ಯಜ್ಞಸ್ಯ ರೂಪಮಿವ ರೂಪಂ ಯೇಷಾಂ ತೇ, ವಿಧ್ಯುಕ್ತಯಜ್ಞವದವಭಾಸಮಾನಾ ಇತಿ ಯಾವತ್, ಅದೃಢಾಃ ಪ್ಲವಾಃ, ಲುಪ್ತೋಪಮಾನಮ್ । ಯಥಾ ಅದೃಢಪ್ಲವೇನ ಮಹಾನದ್ಯಾದಿಕಂ ತರನ್ನಾಪದಮಾಪ್ನೋತಿ ತದ್ವದೇವಂವಿಧಯಜ್ಞೈರಾಪದಮೇವ ಆಪ್ನೋತಿ ನ ಶ್ರೇಯ ಇತಿ । ತದೇವಾಹ- **ಅಷ್ಟಾದಶೇತಿ** ॥ ಯೇಷು ಯಜ್ಞೇಷು ಅಷ್ಟಾದಶಾನಾಂ ಪುರುಷಾಣಾಂ ಉಕ್ತಮಷ್ಟಾದಶೋಕ್ತಂ, ಭಗವದವಿಷಯತ್ವ-ಹೇತುನಾ ಅವರಮಪಕೃಷ್ಟಮೇತತ್ಕರ್ಮ ಶ್ರೇಯಃ ಶ್ರೇಯಸ್ಸಾಧನಂ ಮತ್ವಾ ಯೇ ಮೂಢಾ ಅಭಿನಂದಂತಿ ಮೋದಂತೇ ತೇ ಜರಾಮೃತ್ಯುಂ, ದ್ವಂದ್ವೈಕವದ್ಭಾವಃ, ಪುನರೇವಾಪಿಯಂತಿ ಪ್ರಾಪ್ನುವಂತಿ । ಪೂರ್ವಂ ಜರಾಮೃತ್ಯುಮತಾಮಪಿ ಪುನಃ ಪುನಃ ತತ್ಪ್ರಾಪ್ತಿರೇವ ಭವತಿ, ನ ಕದಾಽಪಿ ತನ್ನಿವೃತ್ತಿರಿತಿ ಭಾವಃ । ಅಷ್ಟಾದಶಪುರುಷಾಸ್ತು ಷೋಡಶ ಋತ್ವಿಜಃ, ಯಜಮಾನ ಏಕಃ, ತನ್ನಿರೀಕ್ಷಕಃ ಸಭ್ಯ ಏಕ ಇತಿ ಧ್ಯೇಯಮ್ ॥೨.೭॥

ಅನುವಾದ- ಸತ್ಯನಾಮಕನಾದ ಭಗವಂತನ ಉದ್ದೇಶದಿಂದ ಮಾಡಿರುವ ಕರ್ಮಗಳಿಗೆ ಅಕ್ಷಯವಾದ ಫಲಗಳು ದೊರೆಯುತ್ತವೆ ಎಂದು ಹೇಳಿದ್ದಾಯಿತು. ಭಗವಂತನ ಉದ್ದೇಶದಿಂದ ಕರ್ಮಗಳನ್ನು ಮಾಡದೇ ಹೋದರೇ ಆಗುವ ಅನರ್ಥವೇನೆಂಬುದನ್ನು 'ಪ್ಲವಾ ಹ್ಯೇತೇ...' ಎಂಬ ಮಂತ್ರವು ವಿವರಿಸುತ್ತದೆ.

ಏತೇ=ವಿಷಯನಾದ ಭಗವಂತನನ್ನು ತಿಳಿಯದೇ ಅನುಷ್ಠಾನ ಮಾಡಿದ ಯಾಗಗಳು ಎಂದು ಅರ್ಥ. ಯಾಗಗಳ ರೂಪದಂತೆ ಇವುಗಳ ರೂಪವೂ ಇರುತ್ತದೆ ಅಂದರೇ ನೋಡಲು ವಿಧ್ಯುಕ್ತವಾದ ಯಾಗಗಳಂತೆ ತೋರುತ್ತವೆ ಆದರೇ ಭಗವಂತ ವಿಷಯನಾಗದೇ ಇದ್ದುದರಿಂದ ಯಾಗಗಳಿಗೆ ಉಕ್ತವಾದ ಅಕ್ಷಯವಾದ ಫಲಗಳು ದೊರೆಯುವುದಿಲ್ಲವೆಂದು ಭಾವ. ಅದೃಢಾಃ ಪ್ಲವಾಃ ಎಂಬುದು ಲುಪ್ತೋಪಮಾನವು. ಹೇಗೆ ದೃಢವಾಗದ ದೋಣಿಯಿಂದ ಮಹಾನದ್ಯಾದಿಗಳನ್ನು ದಾಟುವವನು ಆಪತ್ತನ್ನು ಹೊಂದುವನೋ ಹಾಗೆ ಈ ರೀತಿಯಾದ ಯಾಗಗಳಿಂದ ಆಪತ್ತನ್ನೇ ಹೊಂದುತ್ತಾರೆ. ಶ್ರೇಯಸ್ಸನ್ನು ಹೊಂದುವುದಿಲ್ಲ.

ಈ ವಿಷಯವನ್ನೇ 'ಅಷ್ಟಾದಶ...' ಎಂಬ ವಚನದಿಂದ ತಿಳಿಸುತ್ತಾರೆ. ಯಾವ ಯಜ್ಞಗಳಲ್ಲಿ ಹದಿನೆಂಟು ಪುರುಷರಿಗೆ ಉಕ್ತವಾದ ಕರ್ಮವು, ಭಗವದ್ವಿಷಯಕತ್ವೇನ ಆಚರಿಸದೇ ಇದ್ದುದರಿಂದ ಅಪಕೃಷ್ಟವಾಗಿದೆಯೋ, ಅಪಕೃಷ್ಟವಾಗಿದ್ದರೂ ಈ ಕರ್ಮವೇ ಶ್ರೇಯಃಸಾಧನವೆಂದು ತಿಳಿದು ಯಾವ ಮೂರ್ಖರು ಸಂತೋಷಪಡುತ್ತಾರೋ, ಅವರು ಮುಪ್ಪು-ಮರಣಗಳಿಂದ ಕೂಡಿದ ಇದೇ ಸಂಸಾರದಲ್ಲಿ ಪತಿತರಾಗುತ್ತಾರೆ. ಈ ಮೊದಲು ಜರಾಮೃತ್ಯುವನ್ನು ಪಡೆದಿದ್ದರೂ ಮತ್ತೆ ಮತ್ತೆ ಇದೇ ಜರಾಮೃತ್ಯುಗಳಿರುವ ಸಂಸಾರವನ್ನು ಹೊಂದುತ್ತಾರೆ. ಎಂದಿಗೂ ಈ ಸಂಸಾರದ ನಿವೃತ್ತಿಯಾಗುವುದಿಲ್ಲ.

ಜರಾ ಚ ಮೃತ್ಯುಶ್ಚ ಎಂಬುದು ದ್ವಂದ್ವಸಮಾಸ. ಈ ಸಮಾಸವನ್ನು ಮಾಡಿದಾಗ ಜರಾಮೃತ್ಯೂ ಎಂದು ಈ ಶಬ್ದ ದ್ವಿವಚನಾಂತವಾಗಬೇಕು.

ಆದರೇ ಇಲ್ಲಿ ಜರಾಮೃತ್ಯುಂ ಎಂಬುದಾಗಿ ಪ್ರಥಮಾಂತವಾಗಿಯೇ ಪ್ರಯೋಗಿಸಿದ್ದಾರೆ. ಇದು ದ್ವಂದ್ವೈಕವದ್ಭಾವ. ಆದ್ದರಿಂದ ಯಾವ ದೋಷವೂ ಇಲ್ಲವೆಂದು ತಿಳಿಯಬೇಕು.

ಅಷ್ಟಾದಶೋಕ್ತಂ ಎಂಬಲ್ಲಿ ಅಷ್ಟಾದಶ ಪುರುಷರು ಯಾರೆಂದರೇ, ಹದಿನಾರು ಜನ ಋತ್ವಿಜರು, ಒಬ್ಬ ಯಜಮಾನ, ಎಲ್ಲವನ್ನೂ ನೋಡುವ ಸಭ್ಯನು ಒಬ್ಬ. ಹೀಗೆ ಹದಿನೆಂಟು ಜನರು ಎಂದು ತಿಳಿಯಬೇಕು.॥೨.೭॥

**ಉಪನಿಷತ್**

**ಅವಿದ್ಯಾಯಾಮಂತರೇ ವೇಷ್ಟ್ಯಮಾನಾಃ**
**ಸ್ವಯಂ ಧೀರಾಃ ಪಂಡಿತಮ್ಮನ್ಯಮಾನಾಃ ।**
**ಜಂಘನ್ಯಮಾನಾಃ ಪರಿಯಂತಿ ಮೂಢಾ**
**ಅಂಧೇನೈವ ನೀಯಮಾನಾ ಯಥಾಂಧಾಃ ॥೨.೮॥**

**ಉಪನಿಷದರ್ಥ-** ಹಲವು ವ್ಯಕ್ತಿಗಳಿರುತ್ತಾರೆ. ಸ್ವಯಂ ತಾವು ಅಜ್ಞಾನದಲ್ಲಿ ಮುಳುಗಿರುತ್ತಾರೆ. ಜ್ಞಾನದ ಗಂಧವೂ ಇರುವುದಿಲ್ಲ. ಆದರೇ ತಮ್ಮನ್ನು ತಾವೇ ಪಂಡಿತರೆಂದು ತಿಳಿದಿರುತ್ತಾರೆ. ತಾವೇ ಪ್ರಜ್ಞಾವಂತರೆಂದು ಹೇಳಿಕೊಳ್ಳುತ್ತಾ ಇರುತ್ತಾರೆ. ಇವರ ತಿಳಿವು ಕುಟಿಲವಾಗಿರುತ್ತದೆ. ಹೀಗಾಗಿ ಕುಟಿಲವಾದ ಗತಿಯನ್ನೇ ಹೊಂದುತ್ತಾರೆ. ಕುರುಡರ ಬೆನ್ನು ಹತ್ತಿದ ಕುರುಡರು ಗೊತ್ತು ಗುರಿ ಇಲ್ಲದೇ ತಿರುಗುತ್ತಾ ಹೇಗೆ ದಾರಿ ತಪ್ಪುತ್ತಾರೋ ಹಾಗೆಯೇ ಇವರು ಕೂಡಾ ಸನ್ಮಾರ್ಗವನ್ನು ತಪ್ಪುತ್ತಾರೆ.

**ಖಂಡಾರ್ಥ**

ತೇಷಾಂ ಭಗವದವಿಷಯತ್ವೇನಾऽನುಷ್ಠಾನೇ ಕಿಂ ಬೀಜಮಿತ್ಯತ ಆಹ- **ಅವಿದ್ಯಾಯಾಮಿತಿ** ॥ ಅಂತರೇ ಮಧ್ಯೇ ವೇಷ್ಟ್ಯಮಾನಾ: ಪರಿತೋ ಬಧ್ಯಮಾನಾಃ, ಅತ್ಯಂತಮವಿದ್ಯಾತಿರೋಹಿತತತ್ತ್ವಜ್ಞಾನಾ ಇತ್ಯರ್ಥ: । ಸ್ವಯಂ ಧೀರಾ: ಸ್ವಾತ್ಮೋತ್ಪ್ರೇಕ್ಷಿತಪ್ರಜ್ಞಾವಂತ: । ಅಪಂಡಿತಾ: ಸಂತ: ಅಪಿ ಪಂಡಿತಮಾತ್ಮಾನಂ ಮನ್ಯಮಾನಾ: । ಜಂಘನ್ಯಮಾನಾಃ 'ಹನ ಹಿಂಸಾಗತ್ಯೋ:',

ವಕ್ರಗತಯಃ । ಅಂಧೇನ ನೀಯಮಾನಾ ಅಂಧಾ ಯಥಾ ಭಿನ್ನಮಾರ್ಗಾ ಏವಮಿತ್ಯರ್ಥಃ ॥೨.೮॥

ಅನುವಾದ- ಆ ಹದಿನೆಂಟು ಜನರೆಲ್ಲರೂ ದೇವರನ್ನು ವಿಷಯನೆಂದು ತಿಳಿಯದೇ ಯಜ್ಞ-ಯಾಗಾದಿಗಳನ್ನು ಮಾಡುತ್ತಾರೆ ಎಂದು ಹೇಳಲು ಕಾರಣವೇನು ಎಂಬ ಶಂಕೆಯನ್ನು 'ಅವಿದ್ಯಾಯಾಂ...' ಎಂಬ ಪ್ರಕೃತ ಮಂತ್ರವು ಪರಿಹರಿಸುತ್ತದೆ.

ಅಂತರೇ ಅಂದರೇ ಮಧ್ಯದಲ್ಲಿ ಎಂದು ಅರ್ಥ. ವೇಷ್ಟ್ಯಮಾನಾಃ= ಸುತ್ತಲೂ ಬಂಧನಕ್ಕೆ ಒಳಗಾದವರು, ಅವಿದ್ಯೆಯಿಂದ ಅತ್ಯಂತವಾಗಿ ತಿರೋಹಿತವಾದ ತತ್ತ್ವ ಜ್ಞಾನವಿದ್ದವರು, ಅಂದರೇ ತತ್ತ್ವ ಜ್ಞಾನವನ್ನು ಕಳೆದುಕೊಂಡವರು ಎಂದು ಅರ್ಥ. ಸ್ವಯಂ ಧೀರಾಃ=ತಮ್ಮನ್ನು ಪ್ರಜ್ಞಾವಂತರೆಂದು ಉತ್ಪ್ರೇಕ್ಷಿಸಿಕೊಂಡವರು, ಪಂಡಿತರಾಗದಿದ್ದರೂ ತಮ್ಮನ್ನು ತಾವೇ ಪಂಡಿತರೆಂದು ತಿಳಿದವರು, ಜಂಘನ್ಯಮಾನಾಃ, ಹನಹಿಂಸಾಗತ್ಯೋಃ ಎಂಬ ಧಾತುವಿನಿಂದ ನಿಷ್ಪನ್ನವಾದ ಶಬ್ದವಿದು. ವಕ್ರವಾದ ಗತಿಯುಳ್ಳವರು ಎಂದು ಅರ್ಥ. ಕುರುಡರನ್ನು ಬೆನ್ನು ಹತ್ತಿರುವ ಕುರುಡರು ದಾರಿತಪ್ಪುವಂತೆ ದೇವರು ವಿಷಯನೆಂದು ತಿಳಿಯದೇ ಯಜ್ಞವನ್ನು ಮಾಡುವವರು ಕೂಡಾ ದಾರಿ ತಪ್ಪಿ ಭ್ರಷ್ಟರಾಗುತ್ತಾರೆ.

### ಉಪನಿಷತ್

ಅವಿದ್ಯಾಯಾಂ ಬಹುಧಾ ವರ್ತಮಾನಾ
ವಯಂ ಕೃತಾರ್ಥಾ ಇತ್ಯಭಿಮನ್ಯಂತಿ ಬಾಲಾಃ ।
ಯತ್ಕರ್ಮಿಣೋ ನ ಪ್ರವೇದಯಂತಿ ರಾಗಾತ್
ತೇನಾऽತುರಾಃ ಕ್ಷೀಣಲೋಕಾಃ ಚ್ಯವಂತೇ ॥೨.೯॥

ಉಪನಿಷದರ್ಥ- ಅಜ್ಞಾನದಿಂದ ಆವೃತರಾದ ಜನರಿರುತ್ತಾರೆ. ಇವರು ಅನೇಕದೇವತೆಗಳನ್ನು ತಿಳಿದು ಅವರ ಉದ್ದೇಶದಿಂದ ಅನೇಕಕರ್ಮಗಳನ್ನು ಮಾಡುತ್ತಾರೆ. ಪರಾಧೀನರಾದರೂ ತಾವೇ ಕರ್ತೃಗಳೆಂದು ಭ್ರಮಿಸುತ್ತಾರೆ.

ನಾನೇ ಕರ್ಮವನ್ನು ಮಾಡಿದ್ದು ಎಂದು ಕರ್ತೃತ್ವಾಭಿಮಾನವನ್ನು ತಾಳುತ್ತಾರೆ. ಕೃತಾರ್ಥರು ನಾವೆಂದು ತಾವೇ ತಿಳಿಯುತ್ತಾರೆ. ಹೀಗೆ ಪ್ರಜ್ಞಾಹೀನರಾಗುತ್ತಾರೆ. ವಿಷ್ಣೂದ್ದೇಶಕವಾಗಿ ಕರ್ಮಗಳನ್ನು ಆಚರಿಸಿದಾಗ ಆ ಕರ್ಮ ಮುಕ್ತಿಗೆ ಸಹಾಯಕವಾಗುತ್ತದೆಂದು ಇವರು ತಿಳಿಯುವುದಿಲ್ಲ. ಕ್ಷಣಿಕವಾದ ಕೇವಲ ಸ್ವರ್ಗಾದಿಫಲಗಳಲ್ಲಿ ಅನುರಕ್ತರಾಗುತ್ತಾರೆ. ಹೀಗೆ ಇವರ ಚಿತ್ತವು ಏಕಾಗ್ರತೆಯನ್ನು ಕಳೆದುಕೊಳ್ಳುತ್ತದೆ. ಹರಿಯನ್ನಂತೂ ಚಿಂತಿಸುವುದೇ ಇಲ್ಲ. ಇಂಥವರು ತಾವು ಸಂಪಾದಿಸಿದ ಪುಣ್ಯವು ಕ್ಷೀಣವಾದ ಕ್ಷಣದಲ್ಲಿಯೇ ಮತ್ತೆ ಅಧಃಪತನವನ್ನು ಹೊಂದುತ್ತಾರೆ. ।।

## ಖಂಡಾರ್ಥ

ಅವಿದ್ಯಾವೇಷ್ಟನಂ ಚ ನೈಕಪ್ರಕಾರಮಿತ್ಯಾಹ- **ಅವಿದ್ಯಾಯಾಮಿತಿ ।।** ಬಾಲಾಃ ಪ್ರಜ್ಞಾಹೀನಾಃ । ಕುತಸ್ತೇಷಾಮವಿದ್ಯಾವೇಷ್ಟನೇನ ಭಗವತ್ಪ್ರಜ್ಞಾಹೀನತೇತ್ಯತ ಆಹ- **ಯತ್ಕರ್ಮಿಣ ಇತಿ ।।** ಯದ್ಯಸ್ಮಾತ್ ಸ್ವರ್ಗಾದಿಕ್ಷಯಿಷ್ಣುಫಲೇ ರಾಗಾನ್ನಿಮಿತ್ತಾತ್ ಕರ್ಮಿಣಃ ಕರ್ಮಾನುಷ್ಠಾತಾರಃ ತೇನ ಕಾರಣೇನ ನ ಪ್ರವೇದಯಂತಿ ಸಮ್ಯಕ್ ನ ಜಾನಂತಿ ಭಗವಂತಮ್ । ಸ್ವಾರ್ಥೇ ಣಿಚ್ । ಸರ್ವೇಭ್ಯೋ ರಾಜಾದಿವತ್ಕಿಂಚಿದುತ್ತಮತ್ವೇನ ವಾ, ಸರ್ವಸಮತ್ವೇನ, ಹೀನತ್ವೇನ ವಾ ಜಾನಂತೀತಿ ಪ್ರಶಬ್ದಾರ್ಥಃ । ತೇನ ಹೇತುನಾ ಆತುರಾಃ ವ್ಯಗ್ರಚಿತ್ತಾಸ್ಸಂತಃ ಕ್ಷೀಣಲೋಕಾ ಭವಂತಃ ಚ್ಯವಂತೇ ಲೋಕಚ್ಯುತಾ ಭವಂತೀತಿ ।।೨.೯।।

**ಅನುವಾದ-** ಅವಿದ್ಯಾವೃತರಾದವರು ಅನೇಕಪ್ರಕಾರರಾಗಿ ಇದ್ದಾರೆ ಎಂಬುದನ್ನು **'ಅವಿದ್ಯಾಯಾಂ...'** ಎಂಬ ಮಂತ್ರ ತಿಳಿಸುತ್ತದೆ.

ಬಾಲಾಃ=ಜ್ಞಾನವಿಲ್ಲದವರು, ಅವಿದ್ಯಾವೃತರಾದುದರಿಂದ ಭಗವಂತನ ಜ್ಞಾನ ಅವರಿಗೆ ಯಾಕೆ ಇರುವುದಿಲ್ಲವೆಂಬುದನ್ನು ಯತ್ಕರ್ಮಿಣಃ ಎಂಬ ವಚನವು ತಿಳಿಸುತ್ತದೆ. ನಾಶಶೀಲವಾದ ಸ್ವರ್ಗಾದಿಫಲದಲ್ಲಿಯೇ ಆವರು ಆಸಕ್ತರಾಗಿರುತ್ತಾರೆ ಆ ಆಸಕ್ತಿಯಿಂದಲೇ ಕರ್ಮವನ್ನು ಮಾಡುತ್ತಾರೆ ಆ ಕಾರಣದಿಂದಾಗಿ ದೇವರನ್ನು ಯಥಾರ್ಥವಾಗಿ ಅವರು ತಿಳಿಯುವುದಿಲ್ಲ. ನ

ಪ್ರವೇದಯಂತಿ ಎಂಬುದು ಣಿಚ್ ಪ್ರಯೋಗ. ಇದಕ್ಕೆ ತಿಳಿಸುವುದಿಲ್ಲ ಎಂದು ಅರ್ಥ. ಆದು ಪ್ರಕೃತ ಉಪಯುಕ್ತವಲ್ಲ. ಆದ್ದರಿಂದ ಸ್ವಾರ್ಥದಲ್ಲಿಯೇ ಣಿಚ್ ಪ್ರಯೋಗವೆಂದು ತಿಳಿಯಬೇಕು. ಹೀಗಾಗಿ ನ ಪ್ರವೇದಯಂತಿ ಎಂದರೇ ತಿಳಿಯುವುದಿಲ್ಲವೆಂದೇ ಅರ್ಥವಾಗುತ್ತದೆ. ಭಗವಂತನು ರಾಜನಂತೆ ಸ್ವಲ್ಪ ಮಾತ್ರ ಉತ್ತಮನಾಗಿದ್ದಾನೆ ಎಂದು, ಎಲ್ಲರಿಗೂ ಸಮನಾಗಿದ್ದಾನೆ ಎಂದು, ಹೀನನೆಂದು ತಿಳಿದು ಯಜ್ಞಾದಿಕರ್ಮಗಳನ್ನು ಅನುಷ್ಠಾನ ಮಾಡುತ್ತಾರೆ. ಅಂಥವರು ವ್ಯಗ್ರಚಿತ್ತರಾಗಿ ತಾವಿರುವ ಲೋಕಗಳಿಂದ ಚ್ಯುತರಾಗುತ್ತಾರೆ.

### ಉಪನಿಷತ್

**ಇಷ್ಟಾಪೂರ್ತಂ ಮನ್ಯಮಾನಾ ವರಿಷ್ಠಂ**
**ನಾನ್ಯಚ್ಛ್ರೇಯೋ ವೇದಯಂತೇ ಪ್ರಮೂಢಾಃ ।**
**ನಾಕಸ್ಯ ಪೃಷ್ಠೇ ಸುಕೃತೇ ತೇಽನುಭೂತ್ವಾ**
**ಇಮಂ ಲೋಕಂ ಹೀನತರಂ ವಾ ವಿಶಂತಿ ॥೨.೧೦॥**

ಉಪನಿಷದರ್ಥ- ಯಜ್ಞಯಾಗಾದಿಗಳು, ಅನ್ನದಾನಾದಿಕರ್ಮಗಳು ಪರಮಶ್ರೇಯಸ್ಸಿಗೆ ಸಾಧನವೆಂದು ತಿಳಿಯುತ್ತಾರೆ. ನಿಜವಾಗಿ ಶ್ರೇಯೋರೂಪನಾದ ಭಗವಂತನನ್ನು ತಿಳಿಯುವುದೇ ಇಲ್ಲ. ಇಂತಹ ಪ್ರಮೋಹಕ್ಕೆ ಇವರೆಲ್ಲ ಒಳಗಾಗುತ್ತಾರೆ. ರಾಜಾದಿಗಳು ಹೇಗೆ ನಮಗಿಂತಲೂ ಉತ್ತಮರಾಗಿರುವರೋ ಹಾಗೆಯೇ ದೇವರು ಕೂಡಾ ರಾಜನಂತೆ ಉತ್ತಮನಾಗಿದ್ದಾನೆ ಎಂದು ತಿಳಿಯುತ್ತಾರೆ. ಸರ್ವೋತ್ತಮನೆಂಬ ತತ್ತ್ವಜ್ಞಾನ ಅವರಿಗಾಗುವುದಿಲ್ಲ. ದೇವರನ್ನು ರಾಜನಂತೆ ಮಾತ್ರ ಉತ್ತಮನೆಂದು ತಿಳಿದದ್ದರಿಂದ ಅವರಿಗೆ ಸ್ವರ್ಗಾದಿ ಲೋಕಗಳು ಆಗುತ್ತವೆ. ಅಲ್ಲಿ ಪುಣ್ಯಫಲವನ್ನು ಅನುಭವಿಸಿ ಪುಣ್ಯವೆಲ್ಲ ವ್ಯಯವಾದ ಮೇಲೆ ಮತ್ತೆ ಈ ಭೂಲೋಕಕ್ಕೆ ತಿರುಗಿ ಬರುತ್ತಾರೆ.

ಪರಮಾತ್ಮನು ತಮಗೆ ಸಮಾನನಾಗಿದ್ದಾನೆ ಎಂದು, ತಮಗಿಂತಲೂ ಹೀನನಾಗಿದ್ದಾನೆ ಎಂದು ತಿಳಿದು ಯಜ್ಞ-ಯಾಗಾದಿಗಳನ್ನು ಆಚರಿಸುವವರು ತಮಸ್ಸನ್ನು ಹೊಂದುತ್ತಾರೆ.

### ಭಾಷ್ಯ

**ವಿಷ್ಣೋಃ ಸರ್ವೇಭ್ಯಃ ಕಿಂಚಿದುತ್ತಮತ್ವಂ ಜಾನಂತ ಇಮಂ ಲೋಕಮಾವಿಶಂತಿ । ಸಾಮ್ಯಂ ಹೀನತ್ವಂ ವಾ ಜಾನಂತೋ ಹೀನತರಂ ತಮ ಏವಾವಿಶಂತಿ ॥**

ಭಾಷ್ಯಾರ್ಥ- ವಿಷ್ಣುವು ಎಲ್ಲರಿಗಿಂತಲೂ ಸ್ವಲ್ಪ ಉತ್ತಮನಾಗಿದ್ದಾನೆ ಎಂದು ತಿಳಿದು ಯಜ್ಞಾದಿಗಳನ್ನು ಮಾಡಿದವರು ಸ್ವರ್ಗಾದಿಗಳಲ್ಲಿ ಸುಖವನ್ನು ಅನುಭವಿಸಿ ಮತ್ತೆ ಇದೇ ಲೋಕಕ್ಕೆ ಹಿಂದಿರುಗುತ್ತಾರೆ. ಭಗವಂತ ಎಲ್ಲರಿಗೂ ಸಮನೆಂತಾಗಲೀ, ಎಲ್ಲರಿಗಿಂತಲೂ ನೀಚ ಎಂತಾಗಲೀ ತಿಳಿದವರು ಅತಿಹೀನವಾದ ತಮಸ್ಸನ್ನೇ ಪಡೆಯುತ್ತಾರೆ.

### ಭಾಷ್ಯ

**ದೇವೇಭ್ಯ ಉತ್ತಮಂ ವಿಷ್ಣುಂ ರಾಜವದ್ಯಸ್ತು ಮನ್ಯತೇ ।**
**ಯಾಜೀ ಸ ಮಾನುಷಂ ಯಾತಿ ಸಾಮ್ಯಹೀನತ್ವವಿತ್ತಮಃ ॥ ಇತಿ ಚ ॥**

ಭಾಷ್ಯಾರ್ಥ- ಮೇಲೆ ಹೇಳಿದ ವಿಷಯದಲ್ಲಿ ಬ್ರಹ್ಮಾಂಡಪುರಾಣವು ಪ್ರಮಾಣವಾಗಿದೆ. ಭಗವಂತ ದೇವತೆಗಳಿಗೆಲ್ಲ ಉತ್ತಮನಾಗಿದ್ದಾನೆ. ಇದನ್ನು ತಿಳಿಯದೇ ರಾಜನಂತೆ ಕಿಂಚಿದುತ್ತಮ ಎಂದು ತಿಳಿದು ಯಾರು ಯಜ್ಞಗಳನ್ನು ಅನುಷ್ಠಾನ ಮಾಡುತ್ತಾರೋ ಅವರು ಮನುಷ್ಯರಾಗುತ್ತಾರೆ. ಭಗವಂತ ಜೀವರಿಗೆ ಸಮನೆಂದು, ಅಧಮನೆಂದು ಯಾರು ತಿಳಿಯುತ್ತಾರೋ ಅವರು ತಮಸ್ಸಿನಲ್ಲಿ ಬೀಳುತ್ತಾರೆ.

### ಭಾಷ್ಯ

**'ತ್ರೈವಿದ್ಯಾ ಮಾಮ್' ಇತಿ ತು 'ಯೇಽಪ್ಯನ್ಯದೇವತಾ ಭಕ್ತಾಃ' 'ತೇಽಪಿ ಮಾಮೇವ ಕೌಂತೇಯ ಯಜಂತ್ಯವಿಧಿಪೂರ್ವಕಮ್' 'ಅಹಂ ಹಿ ಸರ್ವಯಜ್ಞಾನಾಂ ಭೋಕ್ತಾ' ಇತ್ಯುಕ್ತತ್ವಾದಜ್ಞಾನಪೂರ್ವ-ಯಾಜಿನಃ ತ್ರೈವಿದ್ಯಾಃ ॥**

ಭಾಷ್ಯಾರ್ಥ- 'ತ್ರೈವಿದ್ಯಾ ಮಾಮ್' ಎಂಬ ಗೀತೆಯಲ್ಲಿಯ ತ್ರೈವಿದ್ಯ ಎಂಬ ಪದಕ್ಕೆ ದೇವರನ್ನು ಸಮ-ಹೀನ ಎಂದು ತಿಳಿದು ಯಾಗಗಳನ್ನು ಮಾಡುವವರು ಎಂದು ಅರ್ಥವನ್ನು ತಿಳಿಯಬಾರದು. ಯಾರು ಅನ್ಯದೇವತೆಗಳ ಭಕ್ತರಾದರೂ, ಅವರು ನನ್ನನ್ನೇ ವಿಧಿಗೆ ಅನುಗುಣವಾಗದೇ ಪೂಜಿಸುತ್ತಾರೋ. ನಾನೇ ಎಲ್ಲ ಯಜ್ಞಗಳ ಕರ್ತಾ ಭೋಕ್ತಾ ಎಂದು ತಿಳಿಯುವುದಿಲ್ಲವೋ ಎಂದು ಹೇಳಿದ್ದರಿಂದ ಅಜ್ಞಾನಪೂರ್ವಕವಾಗಿ ಯಜ್ಞಗಳನ್ನು ಮಾಡುವವರು ತ್ರೈವಿದ್ಯರು ಎಂದು ತಿಳಿಯಬೇಕು.

### ಖಂಡಾರ್ಥ

ಏತದೇವ ಫಲಮುಕ್ತಾನುವಾದಪೂರ್ವಂ ವ್ಯನಕ್ತಿ- **ಇಷ್ಟಾಪೂರ್ತಮಿತಿ** ॥ ಇಷ್ಟಂ ಚ ಪೂರ್ತಂ ಚ ಇಷ್ಟಾಪೂರ್ತಂ, ದ್ವಂದ್ವೈಕವದ್ಭಾವಃ, 'ಅನ್ಯೇಭ್ಯೋಽಪಿ ದೃಶ್ಯತೇ' ಇತಿ ದೀರ್ಘಃ । ಇಷ್ಟಂ ಯಜನಂ ಪೂರ್ತಂ ಅನ್ನದಾನಾದಿ । ವರಿಷ್ಠಂ ಪರಮಶ್ರೇಯಸ್ಸಾಧನಂ ಮನ್ಯಮಾನಾಃ ಅನ್ಯತ್ ಭಗವಲ್ಲಕ್ಷಣಂ ಶ್ರೇಯಃ ಪ್ರಶಸ್ತಂ ವಸ್ತು ನ ವೇದಯಂತೇ ನ ಸಮ್ಯಗ್ ಜಾನಂತೀತ್ಯರ್ಥಃ । ತೇ ಭಗವತಃ ಕಿಂಚಿದುತ್ತಮತ್ವಜ್ಞಾನಪೂರ್ವಕಂ ಕರ್ಮಾನುಷ್ಠಾತಾರಃ ಸುಕೃತೇ ಸುಕೃತಸಾಧ್ಯೇ ನಾಕಸ್ಯ ಸ್ವರ್ಗಸ್ಯ ಪೃಷ್ಠೇ ವಿಸ್ತೀರ್ಣಸ್ಥಲವಿಶೇಷೇಽನುಭೂತ್ವಾ ಕಾಮಾನನುಭೂಯ ಇಮಂ ಲೋಕಂ ಭೂಲೋಕಂ ಮಾನುಷಭಾವಮಿತಿ ಯಾವತ್ ವಿಶಂತಿ ಪ್ರಾಪ್ನುವಂತಿ । ತೇ ಹರೇಃ ಸಮತ್ವಹೀನತ್ವಜ್ಞಾನಪೂರ್ವಂ ಕರ್ಮಕೃತಸ್ತು ಹೀನತರಂ ಲೋಕಮಂಧಂತಮೋ ವಿಶಂತಿ । ವಾಶಬ್ದೋ ವ್ಯವಸ್ಥಿತವಿಕಲ್ಪಾರ್ಥಃ । ತದುಕ್ತಂ-

ದೇವೇಭ್ಯ ಉತ್ತಮಂ ವಿಷ್ಣುಂ ರಾಜವದ್ಯಸ್ತು ಮನ್ಯತೇ ।
ಯಾಜೀ ಸ ಮಾನುಷಂ ಯಾತಿ ಸಾಮ್ಯಹೀನತ್ವವಿತ್ತಮಃ ॥ ಇತಿ ।
ತಥಾ ಚೋಕ್ತಂ ಗೀತಾತಾತ್ಪರ್ಯೇ-
ಯೇ ನ ಜಾನಂತಿ ತಂ ವಿಷ್ಣುಂ ಯಾಥಾತಥ್ಯೇನ ಸಂಶಯಾತ್ ।
ಜಿಜ್ಞಾಸವಸ್ತು ನಿತರಾಂ ಶ್ರದ್ಧಾವಂತಃ ಸುಸಾಧವಃ ॥

ನಿರ್ಹೇತ್ವ್ಕಾಮಭಾವೇನ ಕೇವಲಂ ಜ್ಞಾನವರ್ಜಿತಾಃ ।
ತೇ ಯಾಜ್ಞಿಕಾಃ ಸ್ವರ್ಗಭೋಗಕ್ಷಯೇ ಯಾಂತಿ ಮನುಷ್ಯತಾಮ್ ॥ ಇತಿ

ತಥಾ-
ಯೇ ತು ಭಾಗವತಾಚಾರ್ಯೈಸ್ಸಮ್ಯಗ್ಯಜ್ಞಾದಿ ಕುರ್ವತೇ ।
ಬಹಿರ್ಮುಖಾ ಭಗವತೋ ನಿವೃತ್ತಾಶ್ಚ ವಿಕರ್ಮಣಃ ॥
ದಕ್ಷಿಣಾತರ್ಪಿತಾನಾಂ ತೇ ಆಚಾರ್ಯಾಣಾಂ ತು ತೇಜಸಾ ।
ಯಾಂತಿ ಸ್ವರ್ಗಂ ತತಃ ಕ್ಷಿಪ್ರಂ ತಮೋಽಂಧಂ ಪ್ರಾಪ್ನುವಂತಿ ಚ ॥ ಇತಿ
॥೨.೧೦॥

ಅನುವಾದ- 'ಇಷ್ಟಾಪೂರ್ತಂ...' ಎಂಬ ಮಂತ್ರದಲ್ಲಿ ಹಿಂದೆ ತಿಳಿಸಿದ ಫಲವನ್ನೇ ಅನುವಾದಪೂರ್ವಕವಾಗಿ ಅಭಿವ್ಯಕ್ತಗೊಳಿಸುತ್ತಾರೆ.

ಇಷ್ಟಂ ಚ ಪೂರ್ತಂ ಚ ಇಷ್ಟಪೂರ್ತೇ ಹ್ರಸ್ವವಾಗಿ ದ್ವಿವಚನಾಂತವಾದ ರೂಪವಾಗಬೇಕು. ಆದರೇ ದ್ವಂದ್ವೈಕವದ್ಭಾವವಾಗುತ್ತದೆ ಆದ್ದರಿಂದ ಏಕವಚನವೇ ಉಳಿದುಕೊಳ್ಳುತ್ತದೆ. ಮತ್ತು 'ಅನ್ಯೇಭ್ಯೋಽಪಿ ದೃಶ್ಯತೇ' ಎಂಬ ನಿಯಮಕ್ಕೆ ಅನುಗುಣವಾಗಿ ದೀರ್ಘವಾಗುತ್ತದೆ.

ಇಷ್ಟವೆಂದರೇ ಯಜ್ಞ-ಯಾಗಾದಿಗಳು, ಪೂರ್ತ ಎಂದರೇ ಅನ್ನದಾನಾದಿಗಳು, ಇವುಗಳೇ ಪರಮಶ್ರೇಯೋರೂಪವಾದ ಮುಕ್ತಿಗೆ ಸಾಧನವೆಂದು ತಿಳಿಯುತ್ತಾರೆ. ಭಗವಂತನೇ ನಿಜವಾಗಿ ಪ್ರಶಸ್ತವಾದ ಶ್ರೇಯಸ್ಸೆಂದು, ಶ್ರೇಯಸ್ಸಾಧನನೂ ಎಂದು ತಿಳಿಯುವುದಿಲ್ಲ.

ಭಗವಂತನನ್ನು ಸರಿಯಾಗಿ ತಿಳಿಯದೇ ಕರ್ಮವನ್ನು ಮಾಡುವವರು ಸ್ವರ್ಗಲೋಕದಲ್ಲಿ ಸುಖವನ್ನು ಅನುಭವಿಸಿ ನಂತರ ಮತ್ತೆ ಮನುಷ್ಯರಾಗುತ್ತಾರೆ. ಅಥವಾ ತಮಸ್ಸನ್ನು ಪಡೆಯುತ್ತಾರೆ ಎಂದು ವಾ ಶಬ್ದದಿಂದ ವಿಕಲ್ಪವನ್ನು ಮಾಡಿದ ಹಾಗೆ ತೋರುತ್ತದೆ. ಇದು ಸರಿಯಲ್ಲ. ಆದ್ದರಿಂದ ಇಲ್ಲಿ ಈ ರೀತಿಯಾಗಿ ವ್ಯವಸ್ಥಿತವಿಕಲ್ಪವನ್ನು ಮಾಡಿಕೊಳ್ಳಬೇಕು.

ಭಗವಂತ ರಾಜಾದಿಗಳಂತೆ ಕಿಂಚಿದುತ್ತಮ ಎಂದು ತಿಳಿದು ಕರ್ಮಗಳನ್ನು ಮಾಡುವವರು ಪುಣ್ಯಸಾಧ್ಯವಾದ ಸ್ವರ್ಗದ ಅತಿವಿಸ್ತೃತವಾದ ಸ್ಥಲವಿಶೇಷದಲ್ಲಿ ವಿಷಯಗಳನ್ನು ಅನುಭವಿಸಿ ಈ ಭೂಲೋಕದಲ್ಲಿ ಮನುಷ್ಯರಾಗಿ ಮತ್ತೆ ಹುಟ್ಟುತ್ತಾರೆ.

ಭಗವಂತ ಎಲ್ಲರಿಗೂ ಸಮನೆಂದು, ಹೀನನೆಂದು ತಿಳಿದು ಕರ್ಮಗಳನ್ನು ಮಾಡುವವರು ಇದಕ್ಕಿಂತಲೂ ಹೀನವಾದ ಅಂಧಂತಮಸ್ಸನ್ನು ಪ್ರವೇಶಿಸುತ್ತಾರೆ. ಹೀಗೆ ವ್ಯವಸ್ಥಿತವಾದ ವಿಕಲ್ಪವೆಂದು ತಿಳಿಯಬೇಕು.

ಈ ವಿಷಯದಲ್ಲಿ ಪ್ರಮಾಣಗಳು ಹೀಗಿವೆ-

ಸರ್ವದೇವೋತ್ತಮನಾದ ಪರಮಾತ್ಮನನ್ನು ರಾಜನಂತೆ ಉತ್ತಮ ಎಂದು ತಿಳಿದು ಕರ್ಮವನ್ನು ಮಾಡುವವರು ಮನುಷ್ಯರಾಗುತ್ತಾರೆ.

ಗೀತಾತಾತ್ಪರ್ಯದಲ್ಲಿಯೂ ಹೀಗೆ ಹೇಳಿದ್ದಾರೆ-

ಕೆಲವರು ದೇವರನ್ನು ಯಥಾರ್ಥವಾಗಿ ತಿಳಿಯುವುದಿಲ್ಲ. ಸ್ವಯಂ ಜಿಜ್ಞಾಸುಗಳಾಗಿರುತ್ತಾರೆ. ಶ್ರದ್ಧಾವಂತರೂ ಆಗಿರುತ್ತಾರೆ. ಸಾಧುಗಳಾಗಿರುತ್ತಾರೆ. ಆದರೇ ವಾದಿಗಳ ವಿರುದ್ಧವಾದ ವಾದಗಳಿಂದ ಅವರಿಗೆ ಸಂದೇಹವೇ ಇರುತ್ತದೆ. ಇಂತಹ ಸಂದರ್ಭದಲ್ಲಿ ಅವರಿಗೆ ನಿರ್ಧಾರಪೂರ್ವಕವಾಗಿ ತತ್ತ್ವವನ್ನು ತಿಳಿಸುವವರು ದೊರೆಯುವುದೇ ಇಲ್ಲ. ಹೀಗಾಗಿ ದೇವರನ್ನು ಸರಿಯಾಗಿ ತಿಳಿಯಲು ಆಗುವುದಿಲ್ಲ. ಆದರೂ ಶ್ರದ್ಧಾಪೂರ್ವಕವಾಗಿ ಯಜ್ಞಾದಿ ಕರ್ಮಗಳನ್ನು ಅನುಷ್ಠಾನ ಮಾಡುತ್ತಾರೆ. ಆದ್ದರಿಂದ ಸ್ವರ್ಗಲೋಕದಲ್ಲಿ ಸುಖವನ್ನು ಅನುಭವಿಸುತ್ತಾರೆ. ಪುಣ್ಯವು ಕ್ಷೀಣವಾದ ಮೇಲೆ ಭೂಲೋಕದಲ್ಲಿ ಮನುಷ್ಯರಾಗಿ ಜನಿಸುತ್ತಾರೆ.

ಕೆಲವರು ತಮ್ಮ ಆಚಾರ್ಯರು, ಪುರೋಹಿತರು ಹೇಳಿದ್ದಾರೆಂದು ಯಜ್ಞಗಳನ್ನು ವಿಧ್ಯುಕ್ತಪ್ರಕಾರ ಅನುಷ್ಠಾನ ಮಾಡುತ್ತಾರೆ. ಆದರೇ ಸ್ವಯಂ ಹರಿವಿಮುಖರಾಗಿರುತ್ತಾರೆ. ನಿಷಿದ್ಧವಾದ ಕರ್ಮಗಳಲ್ಲಿ ಆಸಕ್ತರೇ

ಆಗಿರುತ್ತಾರೆ. ಇಂಥವರು ಯಜ್ಞಗಳನ್ನು ಮಾಡಿ ತಮ್ಮ ಆಚಾರ್ಯರಿಗೆ ವಿಶಿಷ್ಟವಾದ ರೀತಿಯಲ್ಲಿ ದಕ್ಷಿಣೆಯನ್ನು ಕೊಟ್ಟಿರುತ್ತಾರೆ. ಇದರಿಂದ ತೃಪ್ತರಾದ ಆಚಾರ್ಯರ ಪ್ರಭಾವದಿಂದ ಅವರು ಸ್ವರ್ಗವನ್ನು ಅನುಭವಿಸುತ್ತಾರೆ. ನಂತರ ಹರಿದ್ವೇಷಿಗಳಾದದ್ದರಿಂದ ಶೀಘ್ರದಲ್ಲಿಯೇ ತಮಸ್ಸಿನಲ್ಲಿ ಬೀಳುತ್ತಾರೆ. ಹೀಗೆ ಗೀತಾತಾತ್ಪರ್ಯದಲ್ಲಿ ಉಕ್ತವಾಗಿದೆ. ॥೨.೧೦॥

### ಉಪನಿಷತ್

**ತಪಃಶ್ರದ್ಧೇ ಯೇऽಭ್ಯುಪವಸಂತ್ಯರಣ್ಯೇ**
**ಶಾಂತಾ ವಿದ್ವಾಂಸೋ ಭೈಕ್ಷಚರ್ಯಾಂ ಚರಂತಃ ।**
**ಸೂರ್ಯದ್ವಾರೇಣ ತೇ ವಿರಜಾಃ ಪ್ರಯಾಂತಿ**
**ಯತ್ರಾऽಮೃತಃ ಸ ಪುರುಷೋ ಹ್ಯವ್ಯಯಾತ್ಮಾ ॥೨.೧೧॥**

**ಉಪನಿಷದರ್ಥ-** ಭಗವಂತನ ಸನ್ನಿಧಾನದಿಂದ ಪರಮಪಾವನವಾದ ಅರಣ್ಯಗಳಲ್ಲಿ ಶ್ರದ್ಧಾಪೂರ್ವಕವಾಗಿ ಆಸ್ತಿಕ್ಯಬುದ್ಧಿಪೂರ್ವಕವಾಗಿ ಕೃಚ್ಛ್ರ-ಚಾಂದ್ರಾಯಣಾದಿರೂಪವಾದ ತಪಸ್ಸನ್ನು ಅಥವಾ ಶ್ರವಣ-ಮನನ-ಧ್ಯಾನಾದಿರೂಪವಾದ ತಪಸ್ಸನ್ನು, ಯಜ್ಞ-ಯಾಗಾದಿಗಳನ್ನು ಅನುಷ್ಠಾನ ಮಾಡುತ್ತಾ ಇರುತ್ತಾರೋ, ಇವರು ತಮ್ಮ ಬುದ್ಧಿಯನ್ನು ದೇವರಲ್ಲೇ ನೆಲೆಗೊಳಿಸಿ, ಬ್ರಹ್ಮಜ್ಞಾನಸಂಪನ್ನರಾಗಿ, ಪ್ರಾರಬ್ಧಕರ್ಮ ಮುಗಿಯುವ ತನಕ ದೇಹಧಾರಣೆಗಾಗಿ ಭಿಕ್ಷಾವೃತ್ತಿಯನ್ನು ಅವಲಂಬಿಸುತ್ತಾರೋ ಅವರು ಸೂರ್ಯಮಂಡಲವನ್ನು ಹೊಂದಿ, ಪ್ರಾರಬ್ಧಕರ್ಮದಿಂದ ಮುಕ್ತರಾಗಿ ನಾಶರಹಿತವಾದ ಸ್ವರೂಪ ಉಳ್ಳ ಅಮೃತಸ್ವರೂಪನಾದ, ಅಮೃತತ್ವವನ್ನು ನೀಡುವ, ಪೂರ್ಣಷಡ್ಗುಣನಾದ ಪರಮಾತ್ಮನು ಇರುವಲ್ಲಿಗೆ ಹೋಗುತ್ತಾರೆ. ಮುಕ್ತರಾಗುತ್ತಾರೆ ಎಂದು ತಾತ್ಪರ್ಯ.

### ಖಂಡಾರ್ಥ

ಏವಂ ಸತ್ಯಜ್ಞಾನಕಾಮನಯಾ ಕರ್ಮಣ್ಯಾಚರಥೇತ್ಯುಕ್ತೌ ಕುತ್ರ ಕಥಮಿತ್ಯಾಶಂಕಾಯಾಂ ಯದೇತ್ಯಾದಿ ಮಂತ್ರಪಂಚಕೇನ ಕರ್ಮಾನುಷ್ಠಾನ-

ಸ್ಥಲಮಿತಿಕರ್ತವ್ಯತಾಂ ಫಲಂ ಚೋಕ್ತ್ವಾ ಪ್ಲವಾ ಇತ್ಯಾದಿನಾ ಮಂತ್ರಚತುಷ್ಟಯೇನ ಉಕ್ತವೈಪರೀತ್ಯೇನ ಕರ್ಮಾನುಷ್ಠಾನೇऽನರ್ಥಂ ಚೋಕ್ತ್ವಾ ऽದುನಾ 'ತಾನ್ಯಾಚರಥ ಸತ್ಯಕಾಮಾಃ' ಇತ್ಯತ್ರ ಕರ್ಮದೇವತಾಜ್ಞಾನಂ ತದನುಷ್ಠಾನೇನಾಂತಃಕರಣಶುದ್ಧಿದ್ವಾರಾ ಜ್ಞಾನಹೇತುಶ್ರವಣಾದ್ಯಂಗಂ ಸತ್ ಬ್ರಹ್ಮಜ್ಞಾನಮುತ್ಪಾದ್ಯ ಪರಮಪುಮರ್ಥಾಯ ಭವತೀತಿ ಯದುಕ್ತಂ ತತ್ರ ಸರ್ವಥಾऽವಧಾನೇನ ಭಾವ್ಯಮಿತಿ ಭಾವೇನ ಕರ್ಮಾಚಾರಾದೇರುಕ್ತರೀತ್ಯಾ ಬ್ರಹ್ಮಜ್ಞಾನಾರ್ಥತ್ವಂ ಫಲೋಕ್ತ್ಯಾ ಉಪಸಂಹರತಿ- **ತಪಃಶ್ರದ್ಧೇ ಇತಿ** ॥ ಯೇ ಭಗವಜ್ಜ್ಞಾನಕಾಮಾಃ ಅರಣ್ಯೇ ಪುಣ್ಯದೇಶೇ ಸ್ಥಿತ್ವಾ ತಪಃ ಕೃಚ್ಛ್ರ-ಚಾಂದ್ರಾಯಣಾದಿರೂಪಂ, ಶ್ರವಣಮನನಾಲೋಚನರೂಪಂ ವಾ, ಶ್ರದ್ಧಾಸ್ತಿಕ್ಯಾದಿಬುದ್ಧಿಪೂರ್ವಕಂ ಯಾಗಾದಿಕಮಭ್ಯುಪವಸಂತಿ, ಆಚರಂತ ಇತಿ ಶೇಷಃ । ಶಾಂತಾಃ ಭಗವನ್ನಿಷ್ಠಾವಂತಃ ತೇ ತಪಆದಿನಾ ಪೂರ್ವೋಕ್ತಪ್ರಣಾಡ್ಯಾ ವಿದ್ವಾಂಸಃ ಭಗವಜ್ಜ್ಞಾನಿನೋ ಭೂತ್ವಾ ಯಾವತ್ಪ್ರಾರಬ್ಧಂ ದೇಹರಕ್ಷಣಾರ್ಥಂ ಭೈಕ್ಷಚರ್ಯಾಂ ಭೈಕ್ಷಂ ಕರ್ಮ ಚರಂತಃ ಕುರ್ವಂತಃ ಸೂರ್ಯದ್ವಾರೇಣ ಸೂರ್ಯಮಂಡಲಂ ಪ್ರಾಪ್ಯ ತದ್ದ್ವಾರೇಣ ವಿರಜಾಃ ವಿಗತಪ್ರಾರಬ್ಧಕರ್ಮಾಣಃ ತೇಜಸಿ ಸೂರ್ಯೇ ಸಂಪನ್ನಃ 'ಪಾಪ್ಮನಾ ವಿನಿರ್ಮುಕ್ತಃ' ಇತಿ ಶ್ರುತ್ಯಂತರೋಕ್ತೇಃ, 'ಆದೇಹಂ ಕರ್ಮ ಚಾऽಚರೇತ್' ಇತಿ ಸ್ಮೃತೇಶ್ಚ ಪ್ರಯಾಂತಿ ಪ್ರಕರ್ಷೇಣ ಯಾಂತಿ । ಕುತ್ರೇತ್ಯತ ಆಹ- **ಯತ್ರಾऽಮೃತ ಇತಿ** ॥ ಅಮೃತಃ ದೇಹತೋऽಪ್ಯವಿನಾಶೀ ಪುರುಷಃ ಪೂರ್ಣಷಡ್ಗುಣಃ ಸ ಪ್ರಸಿದ್ಧಃ ಅವ್ಯಯಾತ್ಮಾ ಶಶ್ವದೇಕಪ್ರಕಾರಃ ಸ್ವಾಮೀ ಯತ್ರ ವರ್ತತೇ ತತ್ರ ಪ್ರಯಾಂತೀತ್ಯರ್ಥಃ ॥ ೨.೧೧ ॥

**ಅನುವಾದ-** ಈ ವಿಧವಾಗಿ ಸತ್ಯನಾಮಕನಾದ ಭಗವಂತನ ಜ್ಞಾನವನ್ನು ಬಯಸಿಯೇ ಕರ್ಮಗಳನ್ನು ಮಾಡಿರಿ ಎಂದು ಹೇಳಿದಾಗ ಆ ಕರ್ಮಗಳನ್ನು ಎಲ್ಲಿ ಮಾಡಬೇಕು ಎಂಬ ಶಂಕೆಯು ಪ್ರಾಪ್ತವಾಗಲು 'ಯದಾ ಲೇಲಾಯತೇ' ಎಂಬ ಮಂತ್ರದಿಂದ ಮೊದಲು ಮಾಡಿ 'ಏಹ್ಯೇಹಿ' ಎಂಬ ಮಂತ್ರದ ವರೆಗೆ, ಕರ್ಮಗಳನ್ನು ಅನುಷ್ಠಾನ ಮಾಡಬೇಕಾದ ಸ್ಥಳವನ್ನು, ಇತಿಕರ್ತವ್ಯವನ್ನು, ಫಲವನ್ನು ಹೇಳಿದರು. 'ಪ್ಲವಾ ಹ್ಯೇತೇ' ಎಂಬ

ಮಂತ್ರದಿಂದ ಮೊದಲು ಮಾಡಿ 'ಇಷ್ಟಾಪೂರ್ತಂ' ಎಂಬ ನಾಲ್ಕು ಮಂತ್ರಗಳಲ್ಲಿ ಹಿಂದೆ ಹೇಳಿದ ರೀತಿಯಲ್ಲಿ ಅಲ್ಲದೇ ವಿಪರೀತವಾಗಿ ಕರ್ಮಗಳನ್ನು ಮಾಡುವವರಿಗೆ ಅನರ್ಥವನ್ನು ಹೇಳಿದರು. ಪ್ರಸ್ತುತ 'ತಾನ್ಯಾಚರಥ ಸತ್ಯಕಾಮಾಃ' ಎಂಬಲ್ಲಿ ಕರ್ಮದೇವತಾಜ್ಞಾನವನ್ನು ಮಾಡಿಕೊಂಡು ಕರ್ಮಗಳನ್ನು ಅನುಷ್ಠಾನ ಮಾಡುವುದರಿಂದ ಅಂತಃಕರಣವು ಶುದ್ಧವಾಗಿ, ತದ್ವಾರಾ ಅಪರೋಕ್ಷಕ್ಕೆ ಕಾರಣವಾದ ಶ್ರವಣಾದಿಗಳಿಗೆ ಅಂಗವಾಗಿ ಬ್ರಹ್ಮಜ್ಞಾನವನ್ನು ಹುಟ್ಟಿಸಿ, ಪರಮಪುರುಷಾರ್ಥವಾದ ಮುಕ್ತಿಗೆ ಕಾರಣವಾಗುತ್ತದೆ ಎಂದು ಏನು ಹೇಳಿದ್ದಾರೋ, ಆ ವಿಷಯದಲ್ಲಿ ಸಾಧಕರು ಎಚ್ಚರದಿಂದ ಇರಬೇಕು ಎಂಬ ಭಾವನೆಯಿಂದ ಕರ್ಮಗಳ ಆಚರಣೆ ಮೊದಲಾದವುಗಳು ಹಿಂದೆ ತಿಳಿಸಿದಂತೆ ಬ್ರಹ್ಮಜ್ಞಾನ ಜನಕವಾಗಿವೆ ಎಂಬುದನ್ನು, ಫಲವನ್ನು ಹೇಳುವ ಮುಖಾಂತರ 'ತಪಃಶ್ರದ್ಧೇ' ಎಂಬ ಮಂತ್ರದಿಂದ ಉಪಸಂಹಾರ ಮಾಡುತ್ತಿದ್ದಾರೆ.

ಯಾರು ಭಗವಂತನ ಜ್ಞಾನವನ್ನು ಬಯಸಿದವರಾಗಿ ಅರಣ್ಯವೇ ಮೊದಲಾದ ಪುಣ್ಯದೇಶಗಳಲ್ಲಿ ಇದ್ದು ಕೃಚ್ಛ್ರ-ಚಾಂದ್ರಾಯಣಾದಿರೂಪವಾದ ಅಥವಾ ಶ್ರವಣ-ಮನನರೂಪವಾದ ತಪಸ್ಸನ್ನು ಆಸ್ತಿಕ್ಯಬುದ್ಧಿಪೂರ್ವಕವಾಗಿ ಆಚರಿಸುತ್ತಾ ಭಗವಂತನಲ್ಲಿ ನಿಷ್ಠರಾಗಿದ್ದಾರೋ ಅವರು, ಅಪರೋಕ್ಷವನ್ನು ಪಡೆದು, ಪ್ರಾರಬ್ಧ ಮುಗಿಯುವ ತನಕ ತಮ್ಮ ದೇಹಧಾರಣೆಗಾಗಿ ಭಿಕ್ಷೆಯನ್ನು ಬೇಡುತ್ತಾ, ಸೂರ್ಯನ ಅನುಗ್ರಹದಿಂದ ಸೂರ್ಯನ ಮುಖಾಂತರ ಸೂರ್ಯಮಂಡಲವನ್ನು ಹೊಂದಿ, ಅಲ್ಲಿ ಪ್ರಾರಬ್ಧಗಳನ್ನು ಕಳೆದುಕೊಳ್ಳುತ್ತಾರೆ. 'ತೇಜಸಿ ಸೂರ್ಯೇ ಸಂಪನ್ನಃ ಪಾಪ್ಮನಾ ವಿನಿರ್ಮುಕ್ತಃ' 'ತೇಜೋಮಯನಾದ ಸೂರ್ಯನನ್ನು ಹೊಂದಿ ಪಾಪಗಳಿಂದ ಮುಕ್ತರಾಗುತ್ತಾರೆ' ಎಂಬ ಶ್ರುತಿವಚನದಿಂದ ಈ ವಿಷಯವು ಸಿದ್ಧವಾಗಿದೆ. 'ಆದೇಹಂ ಕರ್ಮ ಚಾऽಚರೇತ್' ದೇಹವಿರುವ ತನಕ ಕರ್ಮಗಳನ್ನು ಮಾಡಬೇಕು ಎಂದು ಸ್ಮೃತಿಯಲ್ಲಿ ಹೇಳಿದ್ದರಿಂದ ದೇಹವಿರುವ ತನಕ ಕರ್ಮಗಳನ್ನು ಮಾಡಬೇಕು ಎಂಬ ವಿಷಯವು ಸಿದ್ಧವಾಗುತ್ತದೆ.

**ಹೀಗೆ ಪ್ರಾರಬ್ಧಕರ್ಮವನ್ನು ಕಳೆದುಕೊಂಡ ಮೇಲೆ, ದೇಹದಿಂದಲೂ ನಾಶರಹಿತನಾದ, ಪೂರ್ಣಷಡ್ಗುಣನಾದ, ಶಶ್ವದೇಕಪ್ರಕಾರನಾದ, ಸ್ವಾಮಿಯು ಎಲ್ಲ ಇರುವನೋ ಆ ಸ್ಥಳಕ್ಕೆ ಹೋಗುತ್ತಾರೆ. ಮುಕ್ತರಾಗುತ್ತಾರೆ ಎಂದು ಅರ್ಥ.॥೨.೧೧॥**

**ಉಪನಿಷತ್**

**ಪರೀಕ್ಷ್ಯ ಲೋಕಾನ್ ಕರ್ಮಚಿತಾನ್ ಬ್ರಾಹ್ಮಣೋ**
**ನಿರ್ವೇದಮಾಯಾನ್ನಾಸ್ತ್ಯಕೃತಃ ಕೃತೇನ ।**
**ತದ್ವಿಜ್ಞಾನಾರ್ಥಂ ಸ ಗುರುಮೇವಾಭಿಗಚ್ಛೇತ್**
**ಸಮಿತ್ಪಾಣಿಃ ಶ್ರೋತ್ರಿಯಂ ಬ್ರಹ್ಮನಿಷ್ಠಮ್ ॥೨.೧೨॥**

**ಉಪನಿಷದರ್ಥ-** ಕೇವಲ ಕಾಮ್ಯಕರ್ಮಗಳನ್ನು ಮಾಡಿದವರು ಸುಖಪ್ರದವಾದ ಲೋಕಗಳನ್ನು ಪಡೆಯುತ್ತಾರೆ. ಆದರೇ ಅವುಗಳು ವಿಷ್ಣುಲೋಕಗಳಲ್ಲ. ವಿಷ್ಣಿತ್ತರವಾದ ಲೋಕಗಳವು. ಈ ಲೋಕಗಳು ಅನಿತ್ಯ. ಇಲ್ಲಿಯ ಸುಖ ಅಸಾರ. ಪರೀಕ್ಷಾಪೂರ್ವಕವಾಗಿ ಈ ವಿಷಯವನ್ನು ಸಾಧಕನಾದವನು ನಿಶ್ಚಯಿಸಿಕೊಳ್ಳಬೇಕು. ನಿತ್ಯವಾಗಿರುವ, ಸಾರಭೂತವಾಗಿರುವ ವಿಷ್ಣುಲೋಕವಿದು ಕಾಮ್ಯಕರ್ಮಗಳ ಕಲಾಪಗಳಿಂದ ಪಡೆಯಲು ಸಾಧ್ಯವೇ ಇಲ್ಲ. ಅದು ಬ್ರಹ್ಮಜ್ಞಾನದಿಂದಲೇ ದೊರೆಯುವುದು. ಆದ್ದರಿಂದ ಸಾಧಕನಾದವನು ವಿಷಯಗಳಲ್ಲಿ ವಿರಕ್ತನಾಗಬೇಕು. ಬ್ರಹ್ಮಜ್ಞಾನವನ್ನು ಪಡೆಯುವುದಕ್ಕಾಗಿ ಸ್ವಯಂ ತಾನು ಸಮಿತ್ಪಾಣಿಯಾಗಿ ವೇದಜ್ಞಾನಸಂಪನ್ನರಾದ, ಬ್ರಹ್ಮೈಕನಿಷ್ಠರಾದ ಗುರುಗಳನ್ನು ಸೇರಿ ಅವರನ್ನು ಸೇವಿಸಬೇಕು. ತತ್ತ್ವಜ್ಞಾನವನ್ನು ಪಡೆದುಕೊಳ್ಳಬೇಕು.

**ಖಂಡಾರ್ಥ**

ಏವಂ ಕರ್ಮಾದಿಜ್ಞಾನಂ 'ಉತ್ತಮಿಷ್ಟತ ಏವಂಭಾವಾದಿತ್ಯೌಡುಲೋಮಿಃ' ಇತಿ ಸೂತ್ರೋಕ್ತದಿಶಾ ಪ್ರಾಗುಕ್ತಪ್ರಣಾಡ್ಯಾ ಬ್ರಹ್ಮಜ್ಞಾನಾರ್ಥಂ ಸತ್ ಪರಮಪುಮರ್ಥಹೇತುಃ । ಕರ್ಮಾದಿಬೋಧಕಋುಗಾದಿವಿದ್ಯಾ ಚ ತಥಾ

ಪರವಿದ್ಯಾ ಭವತೀತ್ಯುಕ್ತಮ್ । ಇದಾನೀಂ ತು 'ಪ್ರತಿಜ್ಞಾಸಿದ್ಧೇಃ ಲಿಂಗಮಾಶ್ಮರಥ್ಯಃ' ಇತಿ ಸೂತ್ರೋಕ್ತದಿಶಾ ಕಾಮ್ಯಕರ್ಮತತ್ಫಲಾದೌ ವೈರಾಗ್ಯಜನನದ್ವಾರಾ ಬ್ರಹ್ಮಜ್ಞಾನಸಂಪಾದನೇಚ್ಛಾಜನನೇನ ಬ್ರಹ್ಮಜ್ಞಾನಾರ್ಥಂ ಭವತ್ ಪರಮಪುರುಷಾರ್ಥ ಹೇತುಃ ಭವತೀತಿ ತದ್ಬೋಧಕಋಗಾದಿ-ವಿದ್ಯಾಫಲಾಸ್ಥಿರಫಲಾದಿಬೋಧನೇನ ತತ್ರ ಅಧಿಕಾರಿಣೋ ವೈರಾಗ್ಯಜನನದ್ವಾರಾ ನಿತ್ಯಾನಲ್ಪಫಲಕಬ್ರಹ್ಮಜ್ಞಾನಕಾಮೋತ್ಪಾದನೇನ ಬ್ರಹ್ಮಜ್ಞಾನೋಪಯೋಗಿನೀತಿ ಪರವಿದ್ಯಾ ಚ ಭವತೀತಿ ಭಾವೇನಾಽಹ- **ಪರೀಕ್ಷ್ಯೇತಿ** ॥ ಲೋಕಾನ್ ವಿಪ್ಲುಲೋಕೇತರಾನ್ ಕರ್ಮಚಿತಾನ್ ಕಾಮ್ಯಕರ್ಮಾರ್ಜಿತಾನ್ ಪರೀಕ್ಷ್ಯ ಅಸಾರಾನಿತ್ಯತಯಾ ವಿಚಾರ್ಯ ಬ್ರಾಹ್ಮಣೋ ಬ್ರಹ್ಮಾಣನರೂಪಬ್ರಹ್ಮಜ್ಞಾನಯೋಗ್ಯಃ ನಿರ್ವೇದಂ ಕಾಮ್ಯಕರ್ಮಣಿ ತತ್ಫಲೇ ಚ ವೈರಾಗ್ಯಮಾಯಾತ್ ಪ್ರಾಪ್ನುಯಾತ್ । ಯತಃ ಅಕೃತೋ ಮೋಕ್ಷಃ ಕೃತೇನ ಕರ್ಮಣಾ ನಾಽಸ್ತಿ ತತ್ ತಸ್ಮಾತ್ ನ ಚ ಮೋಕ್ಷಾದಿತರತ್ರ ನಿರ್ವಿಣ್ಣೋ ವಿಜ್ಞಾನಾರ್ಥಂ ಮೋಕ್ಷಫಲಕಬ್ರಹ್ಮಜ್ಞಾನಾರ್ಥಂ ಗುರುಮೇವಾಽಭಿಗಚ್ಛೇತ್ । ಗುರುಮುಪಗಂತಾರಂ ಚ ವಿಶಿನಷ್ಟಿ- **ಸಮಿತ್ಪಾಣಿರಿತಿ** ॥ ಶ್ರೋತ್ರಿಯಂ ಛಂದೋಽಧ್ಯೇತಾರಂ ಬ್ರಹ್ಮನಿಷ್ಠಂ ಭಗವದ್ಭಕ್ತಂ ಗುರುಮಿತ್ಯನ್ವಯಃ ॥೨.೧೨॥

ಅನುವಾದ- 'ಉತ್ಕ್ರಮಿಷ್ಯತ ಏವಂ ಭಾವಾದಿತ್ಯೌಡುಲೋಮಿಃ' (ಬ್ರ.ಸೂ೧.೪.೨೨) 'ಸಂಸಾರಬಂಧವನ್ನು ತೊರೆಯುವ ಇಚ್ಛೆ ಇರುವ ಮೋಕ್ಷಾಪೇಕ್ಷಿಗಳು, ಮೋಕ್ಷಕ್ಕೆ ಸಾಧನವಾದ ಅಪರೋಕ್ಷಜ್ಞಾನಕ್ಕೆ ಸಾಧನವಾಗಿರುವ ಕರ್ಮವನ್ನು ಮಾಡಲೇಬೇಕು. ಆದ್ದರಿಂದ ವೇದವು ಕರ್ಮವನ್ನು ವಿಧಾನ ಮಾಡುತ್ತದೆ. ಎಂದು ಔಡುಲೋಮಿಗಳು ಅಭಿಪ್ರಾಯಪಡುತ್ತಾರೆ' ಎಂಬ ಸೂತ್ರದಲ್ಲಿ ಹೇಳಿದಂತೆ ಮತ್ತು ಹಿಂದೆ ನಿರೂಪಿಸಿದಂತೆ ಕರ್ಮದೇವತಾಜ್ಞಾನವು ಬ್ರಹ್ಮಜ್ಞಾನಕ್ಕೆ ಕಾರಣವಾಗಿ ಪರಮಪುರುಷಾರ್ಥವಾದ ಮುಕ್ತಿಗೆ ಕಾರಣವಾಗುತ್ತದೆ. ಹೀಗಾಗಿ ಕರ್ಮಾದಿಬೋಧಕವಾದ ಋಗಾದಿವಿದ್ಯೆಗಳೂ ಕೂಡಾ ಪರವಿದ್ಯೆಯಾಗುತ್ತವೆ. ಎಂದು ಇಲ್ಲಿವರೆಗೆ ನಿರೂಪಿತವಾಯಿತು. ಈಗ 'ಪ್ರತಿಜ್ಞಾಸಿದ್ಧೇರ್ಲಿಂಗ-ಮಾಶ್ಮರಥ್ಯಃ'(ಬ್ರ.ಸೂ.೧.೪.೨೧) 'ನಾಽನ್ಯಃ ಪಂಥಾ ಎಂಬಲ್ಲಿ

ಪ್ರತಿಜ್ಞಾತವಾದ ಬ್ರಹ್ಮಜ್ಞಾನವೇ ಮೋಕ್ಷಸಾಧನ ಮತ್ತೊಂದಲ್ಲ ಎಂಬ ವಿಷಯದ ಸಿದ್ಧಿಗಾಗಿ ಲಿಂಗತ್ವೇನ ಕರ್ಮದೇವತಾದಿಗಳನ್ನು ವೇದವು ಪ್ರತಿಪಾದಿಸುತ್ತದೆ ಎಂದು ಆಶ್ಮರಥ್ಯರು ಹೇಳುತ್ತಾರೆ.'ಎಂಬ ಸೂತ್ರದಲ್ಲಿ ತಿಳಿಸಿದಂತೆ ಕಾಮ್ಯಕರ್ಮ ಮತ್ತು ಕಾಮ್ಯಕರ್ಮಗಳಿಂದ ಲಭ್ಯವಾದ ಫಲಗಳಲ್ಲಿ ವೈರಾಗ್ಯವನ್ನು ಹುಟ್ಟಿಸುವ ಮುಖಾಂತರ ಬ್ರಹ್ಮಜ್ಞಾನವನ್ನು ಸಂಪಾದನೆ ಮಾಡಬೇಕೆನ್ನುವ ಇಚ್ಛೆಯನ್ನು ಹುಟ್ಟಿಸಿ, ಬ್ರಹ್ಮಜ್ಞಾನಕ್ಕೆ ಕಾರಣವಾಗಿ, ಪರಮಪುರುಷಾರ್ಥವಾದ ಮುಕ್ತಿಗೆ ಕಾರಣವಾಗುತ್ತದೆ. ಆದ್ದರಿಂದ ಅದನ್ನು ಬೋಧಿಸುವ ಋಗಾದಿ ವಿದ್ಯೆಗಳು ಅಲ್ಪವಾದ ಅಸ್ಥಿರವಾದ ಫಲಾದಿಗಳನ್ನು ಬೋಧಿಸಿ ಅಧಿಕಾರಿಗಳಿಗೆ ವೈರಾಗ್ಯವನ್ನು ಹುಟ್ಟಿಸಿ ನಿತ್ಯವಾದ ಶಾಶ್ವತವಾದ ಬ್ರಹ್ಮಜ್ಞಾನದ ಬಯಕೆಯನ್ನು ಹುಟ್ಟಿಸಿ ಬ್ರಹ್ಮಜ್ಞಾನಕ್ಕೆ ಕಾರಣವಾಗುವುದರಿಂದ ಪರವಿದ್ಯೆ ಎಂದು 'ಪರೀಕ್ಷ್ಯ' ಎಂಬ ಮಂತ್ರದಲ್ಲಿ ನಿರೂಪಿಸುತ್ತಾರೆ.

ಕಾಮ್ಯಕರ್ಮಗಳಿಂದ ಸಂಪಾದಿತವಾದ ಲೋಕಗಳು ವಿಷ್ಣುಲೋಕಗಳಿಗಿಂತ ಭಿನ್ನವಾಗಿವೆ. ಈ ಲೋಕಗಳು ಅಸಾರ-ಅನಿತ್ಯ ಎಂದು ವಿಚಾರಿಸಿ, ಬ್ರಹ್ಮಜ್ಞಾನಕ್ಕೆ ಯೋಗ್ಯರಾದವರಾಗಿ ಕಾಮ್ಯಕರ್ಮದಲ್ಲಿ ಅವುಗಳಿಂದ ಲಭ್ಯವಾಗುವ ಫಲದಲ್ಲಿ ವೈರಾಗ್ಯವನ್ನು ಹೊಂದಬೇಕು. ಮುಕ್ತಿ ಇದು ಅಕೃತ ಎಂದರೇ ಕರ್ಮಗಳಿಂದ ಪಡೆಯಲು ಸಾಧ್ಯವಿಲ್ಲ. ಆದ್ದರಿಂದ ಮೋಕ್ಷೇತರವಾದ ಫಲಗಳಲ್ಲಿ ವಿರಕ್ತನಾಗಿ, ಮೋಕ್ಷಫಲಕ್ಕೆ ಕಾರಣವಾದ ಬ್ರಹ್ಮಜ್ಞಾನವನ್ನು ಸಂಪಾದಿಸಲು ಶಾಸ್ತ್ರಗಳನ್ನು ಸರಿಯಾಗಿ ಅಧ್ಯಯನ ಮಾಡಿದ ವಿಷ್ಣುಭಕ್ತರಾದ ಗುರುಗಳ ಉಪಸತ್ತಿಯನ್ನು ಮಾಡಬೇಕು. ಗುರುಗಳನ್ನು ಸೇರುವ ಕ್ರಮವನ್ನು 'ಸಮಿತ್ಪಾಣಿಂ' ಎಂಬ ಮಾತಿನಿಂದ ತಿಳಿಸುತ್ತಾರೆ. ॥೨.೧೨॥

ಉಪನಿಷತ್

ತಸ್ಮೈ ಸ ವಿದ್ವಾನುಪಸನ್ನಾಯ ಸಮ್ಯಕ್ ಪ್ರಶಾಂತಚಿತ್ತಾಯ ಶಮಾನ್ವಿತಾಯ । ಯೇನಾಽಕ್ಷರಂ ಪುರುಷಂ ವೇದ ಸತ್ಯಂ ಪ್ರೋವಾಚ ತಾಂ ತತ್ತ್ವತೋ ಬ್ರಹ್ಮವಿದ್ಯಾಮ್ ॥೨.೧೩॥

**ಉಪನಿಷದರ್ಥ-** ಶ್ರುತಿ-ಸ್ಮೃತಿಗಳು ತಿಳಿಸಿದಂತೆ ಗುರುಗಳಾದ ಅಂಗಿರರ ಸೇವೆಯನ್ನು ಮಾಡಿದ, ಸ್ವಯಂ ಬ್ರಹ್ಮಜ್ಞಾನಿಗಳಾದ, ಇಂದ್ರಿಯಗಳನ್ನು ನಿಗ್ರಹಿಸಿದ, ವಿಷಯಗಳಲ್ಲಿ ವಿರಕ್ತರಾದ ಶೌನಕರಿಗೆ ಅಂಗಿರರು ನಾಶರಹಿತನಾದ, ಪೂರ್ಣವಾದ ಷಡ್ಗುಣಗಳುಳ್ಳ ಸರ್ವಸತ್ತಾಪ್ರದನಾದ ಪರಮಾತ್ಮನನ್ನು ತಿಳಿಸುವ ಋಗಾದಿರೂಪವಾದ ಪರವಿದ್ಯೆಯನ್ನು ಯಥಾರ್ಥವಾಗಿ ಉಪದೇಶಿಸಿದರು. ಆಗಲೇ ಕರ್ಮಪರವಾಗಿ ತಿಳಿದಿದ್ದ ವೇದಗಳನ್ನು ಗುರುಗಳ ಉಪದೇಶದಿಂದ ಭಗವತ್ಪರವಾಗಿ ತಿಳಿದು ಕೊಂಡರು. ಸಂತುಷ್ಟರಾದರು.

## ಖಂಡಾರ್ಥ

**ಗುರೂಪಸತ್ತಿಂ ಕುರ್ಯಾದಿತ್ಯುಕ್ತ್ವಾ ಅಂಗಿರಾಃ ಕಿಮಕರೋದಿತ್ಯತಃ ಶೌನಕಾಯ ತತ್ತ್ವಮುಪದಿದೇಶೇತ್ಯಾಹ ವೇದಪುರುಷಃ- ತಸ್ಮಾ ಇತ್ಯಾದಿನಾ ॥ ಉಪಸನ್ನಾಯೋಪಸತ್ತಿಂ ಪ್ರಾಪ್ತಾಯ ಸಮ್ಯಕ್ ಪ್ರಶಾಂತಚಿತ್ತಾಯ ವಿಷಯೇಷ್ವಲಂಬುದ್ಧಿಮತೇ, ವಿರಕ್ತಾಯೇತಿ ಯಾವತ್ । ಶಮಾನ್ವಿತಾಯ ಭಗವನ್ನಿಷ್ಠಾಯುಕ್ತಾಯ ತಸ್ಮೈ ಶೌನಕಾಯ ಸಃ ವಿದ್ವಾನಂಗಿರಾಃ ಯೇನ ಯಯಾ ವಿದ್ಯಯಾ, ವ್ಯತ್ಯಯಾತ್ ಯೇನ ಋಗಾದಿಶಾಸ್ತ್ರೇಣೇತಿ ವಾ, ಸತ್ಯಮನನ್ತಾದೀನಸ್ವರೂಪಂ ಪುರುಷಮಕ್ಷರಂ ವೇದ ಜಾನಾತಿ ತಾಮೃಗಾದಿಶಾಸ್ತ್ರರೂಪಾಂ ಬ್ರಹ್ಮವಿದ್ಯಾಂ ತತ್ತ್ವತೋ ಯಾಥಾತಥ್ಯೇನ ಪ್ರೋವಾಚ । ಕರ್ಮದೇವತಾದಿಬೋಧಕತಯಾ ಶೌನಕೇನ ಅವಗತಾಂ ಋಗಾದಿವಿದ್ಯಾಂ ಪರಮಮುಖ್ಯವೃತ್ತಿಮಹಾತಾತ್ಪರ್ಯಾಭ್ಯಾಂ ಬ್ರಹ್ಮಜ್ಞಪ್ತಿಹೇತುತ್ವೇನ ಪರವಿದ್ಯಾ ಯಥಾ ಭವತಿ ತಥಾ ವ್ಯಾಚಖ್ಯಾವಿತಿ ಭಾವಃ । ಅತ ಏವ ತತ್ತ್ವತ ಇತ್ಯುಕ್ತಿಃ ॥೨.೧೩॥**

ಅನುವಾದ- ಗುರೂಪಸತ್ತಿಯನ್ನು ಮಾಡಬೇಕೆಂದು ಹೇಳಿದ ಅಂಗಿರರು ಪುನಃ ಶೌನಕರಿಗೆ ತತ್ತ್ವವನ್ನು ಉಪದೇಶಿಸಿದರು. ಹೀಗೆಂದು ವೇದಪುರುಷ 'ತಸ್ಮೈ ಸ ವಿದ್ವಾನ್...' ಎಂಬ ಮಂತ್ರದಿಂದ ಹೇಳುತ್ತಾನೆ.

ಸಮಿತ್ಪಾಣಿಗಳಾಗಿ ತನ್ನ ಸನಿಹ ಸೇರಿದ, ವಿಷಯಗಳಲ್ಲಿ ಅಲಂಬುದ್ಧಿ ಇರುವ, ವಿರಕ್ತರಾದ ಭಗವಂತನಲ್ಲಿ ನಿಷ್ಠೆಯನ್ನು ಪಡೆದಿರುವ ಶೌನಕರಿಗೆ ಅಂಗಿರರು, ಯಾವ ಋಗಾದಿಶಾಸ್ತ್ರಗಳಿಂದ ಸ್ವತಂತ್ರನಾದ, ಅವಿನಾಶಿಯಾದ ಪರಮಾತ್ಮನನ್ನು ತಿಳಿಯಲು ಸಾಧ್ಯವೋ ಅಂತಹ ಋಗಾದಿಶಾಸ್ತ್ರಗಳನ್ನು ಯಥಾರ್ಥವಾಗಿ ಉಪದೇಶಿಸಿದರು. ಕರ್ಮದೇವತಾದಿಬೋಧಕವಾಗಿದೆ ಎಂದು ಈಗಾಗಲೇ ತಿಳಿದಿರುವ ಋಗಾದಿವೇದಗಳನ್ನು ಪರಮಮುಖ್ಯವೃತ್ತಿ ಮತ್ತು ಮಹಾತಾತ್ಪರ್ಯಗಳಿಂದ ಬ್ರಹ್ಮಜ್ಞಾನಕ್ಕೆ ಕಾರಣವಾಗಿ ಪರವಿದ್ಯೆ ಎಂದು ಹೇಗೆ ಆಗುತ್ತವೋ ಹಾಗೆ ಉಪದೇಶಿಸಿದರು. ಆದ್ದರಿಂದಲೇ ತತ್ತ್ವತ: ಎಂಬ ಪದವನ್ನು ಉಪನಿಷತ್ತು ಪ್ರಯೋಗಿಸಿದೆ.

॥ ಇತಿ ದ್ವಿತೀಯಖಂಡಮಂತ್ರಾರ್ಥ: ॥

## ॥ ಅಥ ತೃತೀಯಃ ಖಂಡಃ ॥

### ಉಪನಿಷತ್

**ತದೇತತ್ಸತ್ಯಮ್ ।**
**ಯಥಾ ಸುದೀಪ್ತಾತ್ ಪಾವಕಾದ್ ವಿಸ್ಫುಲಿಂಗಾಃ**
**ಸಹಸ್ರಶಃ ಪ್ರಭವಂತೇ ಸರೂಪಾಃ ।**
**ತಥಾಽಕ್ಷರಾದ್ವಿವಿಧಾಃ ಸೋಮ್ಯ ಭಾವಾಃ**
**ಪ್ರಜಾಯಂತೇ ತತ್ರ ಚೈವಾಪಿಯಂತಿ** ॥೩.೧॥

**ಉಪನಿಷದರ್ಥ-** ಭಗವಂತ ಪರವಿದ್ಯಾವಿಷಯನಾಗಿದ್ದಾನೆ, ಮತ್ತು ಅದೃಶ್ಯತ್ವಾದಿಗುಣಗಳಿಂದ ಯುಕ್ತನಾಗಿದ್ದಾನೆ ಎಂಬ ಪೂರ್ವೋಕ್ತ ಪ್ರಮೇಯವು, ವಿಶ್ವಸ್ರಷ್ಟೃತ್ವಾದಿಗುಣಗಳಿಂದ ಯುಕ್ತನಾಗಿದ್ದಾನೆ ಎಂಬ ಪ್ರಮೇಯವೂ ತ್ರಿಕಾಲಾಬಾಧಿತವಾಗಿದೆ.

ಹೇ ಶೌನಕ ! ಯಜ್ಞದಲ್ಲಿ ಹಿಂಡಿರುವ ಸೋಮರಸವನ್ನು ಪಾನಮಾಡುವವನೇ, ಅತಿಶಯವಾಗಿ ಪ್ರಕಾಶಮಾನವಾದ ಅಗ್ನಿಯಿಂದ ಲೆಕ್ಕವಿಲ್ಲದಷ್ಟು ಕಿಡಿಗಳು ಹೊರಬರುತ್ತವೆ. ನೋಡಲು ಅಗ್ನಿಯಂತೆಯೇ ಇರುತ್ತವೆ. ಹಾಗೆಯೇ ನಾಶರಹಿತನಾದ ಪರಮಾತ್ಮನಿಂದ ನಾನಾವಿಧವಾದ ಲೆಕ್ಕವಿಲ್ಲದ ಪದಾರ್ಥಗಳು ಜನಿಸುತ್ತವೆ. ಪುನಃ ಪ್ರಲಯಕಾಲದಲ್ಲಿ ಆ ಪರಮಾತ್ಮನಲ್ಲಿಯೇ ಲೀನವಾಗುತ್ತವೆ.

### ಖಂಡಾರ್ಥ

ಋಗಾದಿಶಾಸ್ತ್ರಸ್ಯ ಪರವಿದ್ಯಾತ್ವಾಪಾದಕೋ ಮುಖ್ಯೋಽರ್ಥಃ ಕಃ? ಯದರ್ಥತಯಾ ಋಗಾದಿಶಾಸ್ತ್ರಂ ಬ್ರಹ್ಮವಿದ್ಯಾತ್ವೇನ ಪ್ರೋವಾಚ ಇತ್ಯತಃ ಋಗಾದಿಶಾಸ್ತ್ರಮುಖ್ಯಾರ್ಥೋ ವಿಶ್ವಸ್ರಷ್ಟೃತ್ವಾದಿಗುಣವಿಶಿಷ್ಟೋ ಹರಿರಿತಿ ಭಾವೇನಾಹ- **ತದೇತದಿತಿ** ॥ ವಕ್ಷ್ಯಮಾಣಂ ಪ್ರಮೇಯಂ ಸತ್ಯಂ ನ ಮಿಥ್ಯೇತ್ಯರ್ಥಃ । ವಿಸ್ಫುಲಿಂಗಾಃ ಅಗ್ನಿಕಣಾಃ ಪ್ರಭವಂತೇ ಪ್ರಭವಂತಿ ।

ಸರೂಪಾಃ ಪ್ರಕಾಶೇನ ಸದೃಶಾಃ ವಿವಿಧಾಃ ದೇವದಾನವಮಾನವಾದಿಭೇದೇನ ನಾನಾವಿಧಾಃ ಭಾವಾಃ ಪದಾರ್ಥಾಃ, ಸೋಮ್ಯ ಸೋಮಪಾನಾರ್ಹೇತಿ ಶೌನಕಸ್ಯ ಸಂಬೋಧನಮ್ । ತತ್ರೈವ ಚಾಽಕ್ಷರೇ ಅಪಿಯಂತಿ ಪ್ರಲಯೇ ತದುದರೇ ಲೀಯಂತೇ । 'ಅಕ್ಷರಾತ್ಸಂಭವತೀಹ ವಿಶ್ವಮ್' ಇತಿ ಪ್ರಾಗುಕ್ತಸ್ಯ ಪ್ರಪಂಚನಾದಪೌನರುಕ್ತ್ಯಮ್ ॥೩.೧॥

ಅನುವಾದ- ಋಗಾದಿಶಾಸ್ತ್ರಗಳು ಮುಖ್ಯಾರ್ಥವನ್ನು ತಿಳಿಸುತ್ತಿರುವಾಗ ಪರವಿದ್ಯಾ ಆಗುತ್ತದೆ ಎಂದು ತಿಳಿಸಿಯಾಯಿತು. ಆ ಮುಖ್ಯಾರ್ಥ ಯಾವುದು? ಯಾವ ಪ್ರಯೋಜನಕ್ಕಾಗಿ ಋಗಾದಿಶಾಸ್ತ್ರಗಳನ್ನು ಬ್ರಹ್ಮವಿದ್ಯಾರೂಪವಾಗಿವೆ ಎಂದು ನಿರೂಪಿಸಿದರು? ಎಂದರೇ ಋಗಾದಿಶಾಸ್ತ್ರಗಳಿಗೆ ಮುಖ್ಯಾರ್ಥನಾದವನು ವಿಶ್ವಸ್ರಷ್ಟೃತ್ವಾದಿಗುಣಗಳಿಂದ ಯುಕ್ತನಾದ ವಿಷ್ಣುವೇ ಎಂಬುದಾಗಿ 'ತದೇತತ್ ಸತ್ಯಂ' 'ಯಥಾ ಸುದೀಪ್ತಾತ್...' ಎಂಬ ಮಂತ್ರ ತಿಳಿಸುತ್ತಿದೆ.

ಮುಂದೆ ಹೇಳುವ ಪ್ರಮೇಯಗಳೆಲ್ಲವೂ ಸತ್ಯವಾಗಿವೆ ಸುಳ್ಳಲ್ಲ ಎಂದು ಅಭಿಪ್ರಾಯ. ವಿಷ್ಫುಲಿಂಗಾಃ=ಅಗ್ನಿಯ ಕಣಗಳು, ಪ್ರಭವಂತೇ=ಹುಟ್ಟುತ್ತವೆ. ಸರೂಪಾಃ=ಪ್ರಕಾಶಕ್ಕೆ ಸದೃಶವಾದ, ವಿವಿಧಾಃ=ದೇವ-ದಾನವ-ಮಾನವಾದಿಭೇದದಿಂದ ನಾನಾವಿಧವಾದ, ಭಾವಾಃ=ಪದಾರ್ಥಗಳು, ಸೋಮ್ಯ=ಯಜ್ಞದಲ್ಲಿ ಹಿಂಡಿರುವ ಯಜ್ಞಾವಶಿಷ್ಟವಾದ ಸೋಮರಸವನ್ನು ಪಾನಮಾಡುವವನೇ, ಎಂದು ಶೌನಕರನ್ನು ಸಂಬೋಧಿಸುತ್ತಿದ್ದಾರೆ. ಪ್ರಲಯಕಾಲದಲ್ಲಿ ಆ ಅಕ್ಷರನಾಮಕನಾದ ಪರಮಾತ್ಮನ ಉದರದಲ್ಲಿಯೇ ಲೀನರಾಗುತ್ತಾರೆ. 'ಅಕ್ಷರಾತ್ಸಂಭವತೀಹ ವಿಶ್ವಂ' ಎಂಬುದಾಗಿ ಈ ಮೊದಲೇ ಹೇಳಿರುವ ವಿಷಯವನ್ನು ಇಲ್ಲಿ ವಿಸ್ತಾರವಾಗಿ ತಿಳಿಸಿದ್ದರಿಂದ ಪುನರುಕ್ತಿಯು ಇದ್ದರೂ ಅದು ದೋಷಾಪಾದಕವಾಗುವುದಿಲ್ಲ.

## ಉಪನಿಷತ್

ದಿವ್ಯೋ ಹ್ಯಮೂರ್ತಃ ಪುರುಷಃ ಸ ಬಾಹ್ಯಾಭ್ಯಂತರೋ ಹ್ಯಜಃ ।
ಅಪ್ರಾಣೋ ಹ್ಯಮನಾಃ ಶುಭ್ರೋ ಹ್ಯಕ್ಷರಾತ್ಪರತಃ ಪರಃ ॥೩.೨ ॥

**ಉಪನಿಷದರ್ಥ-** ಭಗವಂತ ಅತ್ಯದ್ಭುತನಾಗಿದ್ದಾನೆ. ಲೋಕವಿಲಕ್ಷಣನಾಗಿದ್ದಾನೆ. ಪ್ರಾಕೃತವಾದ ದೇಹ ಅವನಿಗಿರುವುದಿಲ್ಲ. ಷಡ್ಗುಣಗಳಿಂದ ಪರಿಪೂರ್ಣನಾಗಿದ್ದಾನೆ. ಎಲ್ಲದರ ಹೊರಗೂ ಒಳಗೂ ವ್ಯಾಪ್ತನಾಗಿದ್ದಾನೆ. ಜನನ ರಹಿತನಾಗಿದ್ದಾನೆ. ಷೋಡಶಕಲಾರಹಿತನಾಗಿದ್ದಾನೆ. ಪರಿಶುದ್ಧನಾಗಿದ್ದಾನೆ. ಅಕ್ಷರನಾಮಕವಾದ ಜಡಪ್ರಕೃತಿಗೆ ನಿಯಾಮಕಳಾದ ಅಂತೆಯೇ ಅದಕ್ಕಿಂತಲೂ ಉತ್ತಮಳಾದ, ಅಕ್ಷರಶಬ್ದವಾಚ್ಯಳಾದ, ಚೇತನಪ್ರಕೃತಿಯಾದ ಲಕ್ಷ್ಮೀದೇವಿಗಿಂತಲೂ ಉತ್ತಮನಾಗಿದ್ದಾನೆ.

## ಭಾಷ್ಯ

**ಅಪರಂ ತ್ವಕ್ಷರಂ ಯಾ ಸಾ ಪ್ರಕೃತಿರ್ಜಡರೂಪಿಕಾ ।**
**ಅಕ್ಷರಂ ಪರಮಂ ಶ್ರೀಸ್ತು ಪರತಃ ಪರಮಕ್ಷರಮ್ ॥**
**ವಾಸುದೇವಃ ಪರಾನಂದ ಇತಿ ತ್ರಿವಿಧಮಕ್ಷರಮ್ ॥ ಇತಿ ಚ ॥**

**ಭಾಷ್ಯಾರ್ಥ-** ಅಪರಾಕ್ಷರ, ಪರಾಕ್ಷರ, ಪರತಃಪರಾಕ್ಷರವೆಂದು ಅಕ್ಷರತತ್ತ್ವವು ಮೂರು ವಿಧವಾಗಿದೆ. ಜಡವಾದ ಪ್ರಕೃತಿಯು ಅಪರವಾದ ಅಕ್ಷರವಾಗಿದೆ. ಲಕ್ಷ್ಮೀದೇವಿಯು ಪರಮಾಕ್ಷರಳಾಗಿದ್ದಾಳೆ. ಉತ್ಕೃಷ್ಟವಾದ ಆನಂದವಿರುವ ವಾಸುದೇವನು ಮಾತ್ರ ಪರತಃಪರ ಅಕ್ಷರನಾಗಿದ್ದಾನೆ.

## ಖಂಡಾರ್ಥ

ಅಕ್ಷರಸ್ಯ ಸೃಷ್ಟ್ಯುಪಯುಕ್ತಗುಣಾನ್ ವದನ್ ಜಗತ ಇವ ನ ತಸ್ಯ ಜನ್ಮಾದೀತ್ಯಾಹ- **ದಿವ್ಯ ಇತಿ** ॥ ದಿವ್ಯಃ ಅತ್ಯದ್ಭುತಃ । ಅಮೂರ್ತಃ ನಿಯತಪರಿಚ್ಛಿನ್ನಪರಿಮಾಣರಹಿತಃ । ಕಿಂತು ಬಾಹ್ಯೋಽಭ್ಯಂತರಶ್ಚ । 'ಅಪ್ರಾಣೋ ಹ್ಯಮನಾ' ಇತಿ ಷೋಡಶಕಲಾರಾಹಿತ್ಯಮುಚ್ಯತೇ । ಶುಭ್ರಃ ಶುದ್ಧಃ ಅಕ್ಷರಾಜ್ಜಡಪ್ರಕೃತೇಃ, ಪರತಃ ಶ್ರೀತತ್ತ್ವಾತ್ ಪರ ಉತ್ತಮಃ ॥೨.೨॥

**ಅನುವಾದ-** ಸೃಷ್ಟಿಗೆ ಉಪಯುಕ್ತವಾದ ಗುಣಗಳನ್ನು ಅಕ್ಷರನಾಮಕನಾದ ಪರಮಾತ್ಮನಿಗೆ ಹೇಳುತ್ತಾ, ಜಗತ್ತಿನಂತೆ ದೇವರಿಗೆ ಜನ್ಮಾದಿಗಳು ಇಲ್ಲವೆಂದು 'ದಿವ್ಯಃ...' ಎಂಬ ಮಂತ್ರವು ತಿಳಿಸುತ್ತದೆ.

## ಭಾಷ್ಯ

ವಿಷ್ಣ್ವಂಗಾನಾಂ ಹಿ ನಾಮಾನಿ ದ್ಯುಭ್ವಾದೀನಿ ತು ಸರ್ವಶಃ ।
ಕ್ರೀಡಾದಿಶಕ್ತಿರೂಪತ್ವಾತ್ ತಜ್ಜತ್ವಾದನ್ಯವಸ್ತುಷು ॥ ಇತಿ ಚ ॥

ಭಾಷ್ಯಾರ್ಥ- ಕ್ರೀಡಾದಿಶಕ್ತಿರೂಪನಾದುದರಿಂದ ದ್ಯು,ಭೂ ಮೊದಲಾದ ಶಬ್ದಗಳು ಭಗವಂತನ ಅಂಗಗಳಿಗೆ ವಾಚಕವಾಗಿವೆ. ಪ್ರಕೃತ ದ್ಯು ಎಂಬ ಶಬ್ದವು ಭಗವಂತನ ಮೂರ್ಧಾವಾಚಕವಾಗಿದೆ. ದಿವು ಎಂಬ ಧಾತುವಿಗೆ ಕ್ರೀಡಾ ಎಂಬ ಅರ್ಥವಿರುವುದರಿಂದ ದ್ಯೌಃ ಎಂದರೇ ಭಗವಂತನ ಮೂರ್ಧಾ ಶಿರಸ್ಸು ಕ್ರೀಡಾದಿಶಕ್ತಿಸ್ವರೂಪವಾಗಿದೆ ಎಂದು ಅರ್ಥ. ಮತ್ತು ದ್ಯುಲೋಕವು ದೇವರ ಶಿರಸ್ಸಿನಿಂದ ಜನಿಸಿದೆ. ಶಿರಸ್ಸನ್ನೇ ಆಶ್ರಯಿಸಿದೆ. ಆದ್ದರಿಂದ ಅಭೇದವ್ಯವಹಾರ-ವನ್ನು ಉಪನಿಷತ್ತು ಮಾಡಿದೆ. ಹೀಗೆಯೇ ಆಯಾ ಲೋಕಗಳು ಆಯಾ ಅವಯವಗಳಿಂದ ಜನಿಸಿದ್ದರಿಂದ ಆ ಅವಯವವನ್ನೇ ಆಶ್ರಯಿಸಿಕೊಂಡಿರುವುದರಿಂದ ಭೂ ಮೊದಲಾದ ನಾಮಗಳು ಯುಕ್ತವಾಗಿವೆ.

ದ್ಯೌರ್ಮೂರ್ಧಾ ಎಂದು ಶಾಖಾಂತರವಚನವಿದೆ. ಅದಕ್ಕೆ ಅನುಗುಣವಾದ ಪ್ರಮಾಣವಿದಾಗಿದೆ. ಈ ಪ್ರಮಾಣದಿಂದ ಪ್ರಕೃತ ಮಂತ್ರಕ್ಕೂ ಅರ್ಥವನ್ನು ತಿಳಿಯಬೇಕು.

## ಖಂಡಾರ್ಥ

'ಏತಸ್ಮಾಜ್ಜಾಯತೇ ಪ್ರಾಣಃ' ಇತ್ಯಾದಿನಾ ಸಾಮಾನ್ಯತ ಉಕ್ತಮ್ । ತತ್ಕಿಮ್? ಕಸ್ಮಾದಂಗಾತ್ ಜಾತಮಿತ್ಯತ ಆಹ- ಅಗ್ನಿರ್ಮೂರ್ಧೇತಿ ॥ ಅಸ್ಯ ಪ್ರಕೃತಾಽಕ್ಷರಸ್ಯ ಭಗವತೋ ಮೂರ್ಧಾ ಅಗ್ನಿಃ, ಅತ್ರತ್ಯನಿಮಿತ್ತೇನಾಗ್ನಿನಾಮಾ ಅಗ್ನಿಜನಕಶ್ಚ । ಅಗ್ನ್ಯಾಖ್ಯಮೂರ್ಧಜತ್ವಾತ್ ಅಗ್ನೇಃ ಅಗ್ನಿನಾಮ । ಕಾರ್ಯಕಾರಣಯೋಃ 'ಗೋಭಿಃ ಶ್ರೀಣೀತ ಮತ್ಸರಮ್' ಇತ್ಯಾದಾವಿವಾಽಭೇದೋಪಚಾರೇಣಾಽಯಂ ನಿರ್ದೇಶಃ । ಏವಮುತ್ತರತ್ರಾಽಪಿ । 'ಚಕ್ಷುಷೀ ಚಂದ್ರಸೂರ್ಯೌ' ಆಹ್ಲಾದಕತ್ವಾದಿಹೇತುನಾ ಚಂದ್ರಸೂರ್ಯನಾಮಕೇ ಚಂದ್ರಸೂರ್ಯಜನಕೇ ಚ । ಶ್ರೋತ್ರೇ ದಿಶಃ । ದಿಶಂತ್ಯಭೀಪ್ಸಮಿತಿ ದಿಕ್

ನಾಮಕೇ ದಿಶಾಂ ಜನಕೇ ಚ । ವಾಕ್ ಭಗವತೋ ವಾಕ್ ವಿವೃತವೇದನಾಮಿಕಾ ವಿವೃತಶಬ್ದಿತವಿಸ್ತೀರ್ಣವೇದಜನಿಕಾ, ವಿವೃತಾ ಅಭಿವ್ಯಕ್ತಾ ವಾ । ಭಗವತಃ ಪ್ರಾಣೋ ವಾಯುಃ ವಾಯುನಾಮಾ ವಾಯುಜನಕಃ । ವಿಶ್ವಮಿತಿ ಕಾಚಿದ್ದೇವತಾ । ಹೃದಯಂ ವಿಶ್ವನಾಮಕಂ ವಿಶ್ವಜನಕಂ ಚ । ಪದ್ಭ್ಯಾಂ ಪೃಥಿವೀತ್ಯಂತೇ ಶ್ರವಣಾತ್ಪೂರ್ವತ್ರಾಽಪಿ ಜನ್ಯಜನಕಭಾವೇನ ಅಗ್ನಿರ್ಮೂರ್ಧೇತ್ಯಾದಿನಿರ್ದೇಶ ಇತಿ ಜ್ಞಾಯತೇ । ಹಿಶಬ್ದಃ ಪದ್ಭ್ಯಾಂ ಭೂಮಿರಿತ್ಯಾದಿಶ್ರುತ್ಯಂತರಪ್ರಸಿದ್ಧಿದ್ಯೋತಕಃ । ನ ಕೇವಲಂ ಸೃಷ್ಟಿಸಂಹಾರಕರ್ತಾ ನಿಯಮನಕರ್ತಾ ಚೇತ್ಯಾಹ- ಏಷ ಸರ್ವಭೂತಾಂತರಾತ್ಮಾ ॥ ಅಂತಃ ಸ್ಥಿತ್ವಾ ಆದಾನಾದಿಕರ್ತೃತ್ವಾದಂತರಾತ್ಮಾ । ತಸ್ಮಾದಗ್ನಿಃ ಸಮಿಧಶ್ಚ ಪೃಥಿವ್ಯಾಂ ಜಾಯಂತೇ ಇತಿ ಶೇಷಃ । ಯಶ್ಚ ಸೂರ್ಯಃ ತಸ್ಮಾತ್ಸೂರ್ಯಾತ್ಸೋಮಾಚ್ಚ ಪರ್ಜನ್ಯಃ ವೃಷ್ಟಿಃ, ಪರ್ಜನ್ಯಾತ್ ಪೃಥಿವ್ಯಾಮೋಷದಯಶ್ಚ ಜಾಯಂತೇ ಇತ್ಯರ್ಥಃ ॥೨.೪॥

**ಅನುವಾದ-** 'ಏತಸ್ಮಾತ್ ಜಾಯತೇ ಪ್ರಾಣಃ' ಇತ್ಯಾದಿವಾಕ್ಯದಿಂದ ಪರಮಾತ್ಮನಿಂದ ಎಲ್ಲವೂ ಉತ್ಪನ್ನವಾಗುತ್ತದೆಂದು ಸಾಮಾನ್ಯವಾಗಿ ತಿಳಿಸಿದ್ದಾರೆ. ಹೀಗೆ ಹೇಳಿದಾಗ ಯಾರು ಯಾವ ಅಂಗದಿಂದ ಉತ್ಪನ್ನರಾದರು ಎಂದು ಪ್ರಶ್ನೆ ಬರುತ್ತದೆ. ಇದಕ್ಕೆ **'ಅಗ್ನಿರ್ಮೂರ್ಧಾ...'** ಎಂಬ ಮಂತ್ರದಿಂದ ಉತ್ತರವನ್ನು ಹೇಳುತ್ತಿದ್ದಾರೆ.

ಅಸ್ಯ=ಪ್ರಕೃತನಾಗಿರುವ ಪರಮಾತ್ಮನ, ಮೂರ್ಧಾ=ತಲೆಯು, ಎಲ್ಲವನ್ನೂ ಅದನ ಮಾಡುತ್ತದೆ ಆದ್ದರಿಂದಾಗಿ ಅಗ್ನಿನಾಮಕವಾಗಿದೆ ಮತ್ತು ಅಗ್ನಿಗೆ ಜನಕವಾಗಿದೆ. ಅಗ್ನಿನಾಮಕವಾದ ತಲೆಯಿಂದ ಜನಿಸಿದ್ದರಿಂದ ಅಗ್ನಿಗೆ ಅಗ್ನಿ ಎಂಬ ನಾಮವು ಬಂದಿದೆ. ಭಗವಂತನ ಮುಖವು ಕಾರಣವಾಗಿದೆ. ಅಗ್ನಿಯು ಕಾರ್ಯವಾಗಿದೆ. ಆದ್ದರಿಂದ ಕಾರ್ಯಕಾರಣಗಳಲ್ಲಿ ಅಭೇದವ್ಯವಹಾರವನ್ನು ಮಾಡಿದ್ದಾರೆ. ಕಾರ್ಯಕಾರಣಗಳಲ್ಲಿ ಅಭೇದವ್ಯವಹಾರವು 'ಗೋಭಿಃ ಶ್ರೀಣೀತ ಮತ್ಸರಂ' ಇತ್ಯಾದಿಗಳಲ್ಲಿ ಕಂಡುಬಂದಿದೆ. (ಮತ್ಸರಂ=ಸಂತೋಷಕ್ಕೆ ಕಾರಣವಾದ ಸೋಮರಸವನ್ನು,

ದಿವ್ಯಃ=ಅತ್ಯದ್ಭುತನಾದವನು, ಅಮೂರ್ತಃ=ನಿಯತವಾದ ಅಲ್ಪವಾದ ಪರಿಮಾಣವಿಲ್ಲದವನು, ಕಿಂತು ಹೊರಗೆ ಒಳಗೆ ವ್ಯಾಪ್ತನಾದವನು, ಅಪ್ರಾಣೋ ಹ್ಯಮನಾಃ ಎಂಬ ಮಾತಿನಿಂದ ಷೋಡಶಕಲಾರಹಿತನಾಗಿದ್ದಾನೆ ಎಂದು ಹೇಳುತ್ತಿದ್ದಾರೆ. ಶುಭ್ರಃ=ಶುದ್ಧನಾದವನು, ಅಕ್ಷರಾತ್=ಜಡಪ್ರಕೃತಿ-ಯಿಂದ, ಪರತಃ=ಉತ್ತಮವಾದ ಶ್ರೀತತ್ತ್ವಕ್ಕಿಂತಲೂ, ಪರಃ=ಉತ್ತಮನಾದವನು.

### ಉಪನಿಷತ್

**ಏತಸ್ಮಾಜ್ಜಾಯತೇ ಪ್ರಾಣೋ ಮನಸ್ಸರ್ವೇಂದ್ರಿಯಾಣಿ ಚ ।**
**ಖಂ ವಾಯುರ್ಜ್ಯೋತಿರಾಪಃ ಪೃಥಿವೀ ವಿಶ್ವಸ್ಯ ಧಾರಿಣೀ ॥೩.೩॥**

**ಉಪನಿಷದರ್ಥ-** ಈ ಪರಮಾತ್ಮನಿಂದ ಪ್ರಾಣವು, ಪ್ರಾಣಕ್ಕೆ ಅಭಿಮಾನಿಗಳಾದ ಮುಖ್ಯಪ್ರಾಣದೇವರು, ಮನಸ್ಸು ತದಭಿಮಾನಿಗಳಾದ ರುದ್ರದೇವರು, ಎಲ್ಲ ಇಂದ್ರಿಯಗಳು, ಇಂದ್ರಿಯಾಭಿಮಾನಿಗಳಾದ ದೇವತೆಗಳು, ಆಕಾಶವು, ತದಭಿಮಾನಿಯಾದ ಗಣಪತಿಯು, ಭೂತವಾಯು, ತದಭಿಮಾನಿಯಾದ ದೇವತೆಯು, ಅಗ್ನಿಯು ಅಗ್ನ್ಯಭಿಮಾನಿಯಾದ ಅಗ್ನಿದೇವರು, ಜಲವು ಜಲಾಭಿಮಾನಿಗಳಾದ ವರುಣದೇವರು, ಎಲ್ಲ ಜಗತ್ತನ್ನು ಧರಿಸುವ ಪೃಥಿವಿಯು ತದಭಿಮಾನಿಯಾದ ಧರಾದೇವಿಯು ಜನಿಸಿದ್ದಾರೆ.

### ಖಂಡಾರ್ಥ

ಏತಸ್ಮಾತ್ ಪರಾಽಕ್ಷರಾತ್ ಪ್ರಾಣೋ ಮುಖ್ಯವಾಯುಃ । ವಿಶ್ವಸ್ಯ ಧಾರಿಣೀ ಪೃಥಿವೀತ್ಯನ್ವಯಃ । ಅತ್ರ ಜಡತದಭಿಮಾನಿನಾಮುಭಯೇಷಾಂ ಗ್ರಹಣಮ್ ॥೩.೩॥

**ಅನುವಾದ-** ಏತಸ್ಮಾತ್=ಸರ್ವೋತ್ತಮನಾದ ಅಕ್ಷರನಾಮಕನಾದ ಪರಮಾತ್ಮನಿಂದ, ಪ್ರಾಣಃ=ಮುಖ್ಯಪ್ರಾಣದೇವರು, ವಿಶ್ವಸ್ಯಧಾರಿಣೀ (ವಿಶ್ವವನ್ನು ಧರಿಸುವ) ಈ ಶಬ್ದವನ್ನು ಪೃಥಿವೀ ಶಬ್ದದ ಜೊತೆ ಅನ್ವಯ ಮಾಡಿಕೊಳ್ಳಬೇಕು. ಇಲ್ಲಿ ಜಡ ಮತ್ತು ಅವುಗಳಿಗೆ ಅಭಿಮಾನಿಗಳಾದ ದೇವತೆಗಳನ್ನು ಸ್ವೀಕರಿಸಬೇಕು.॥೩.೩.॥

### ಉಪನಿಷತ್

**ಅಗ್ನಿರ್ಮೂರ್ಧಾ ಚಕ್ಷುಷೀ ಚಂದ್ರಸೂರ್ಯೌ**
**ದಿಶಃ ಶ್ರೋತ್ರೇ ವಾಗ್ ವಿವೃತಾಶ್ಚ ವೇದಾಃ ।**
**ವಾಯುಃ ಪ್ರಾಣೋ ಹೃದಯಂ ವಿಶ್ವ-**
**ಮಸ್ಯ ಪದ್ಭ್ಯಾಂ ಪೃಥಿವೀ ಹ್ಯೇಷ ಸರ್ವಭೂತಾಂತರಾತ್ಮಾ**
**ತಸ್ಮಾದಗ್ನಿಃ ಸಮಿಧೋ ಯಸ್ಯ ಸೂರ್ಯಃ**
**ಸೋಮಾತ್ ಪರ್ಜನ್ಯೌಷಧಯಃ ಪೃಥಿವ್ಯಾಮ್ ।।೩.೪।।**

**ಉಪನಿಷದರ್ಥ-** ಪರಮಾತ್ಮನ ಶಿರಸ್ಸು ಅಗ್ನಿನಾಮಕವಾಗಿದೆ. ಮತ್ತು ದೇವರ ಶಿರಸ್ಸಿನಿಂದಲೇ ಅಗ್ನಿಯು ಜನಿಸಿದೆ. ಭಗವಂತನ ಎರಡು ಕಣ್ಣುಗಳು ಆಹ್ಲಾದಜನಕವಾದುದರಿಂದ, ಜ್ಞಾನಿಪ್ರಾಪ್ಯವಾದುದರಿಂದ ಚಂದ್ರಸೂರ್ಯ-ನಾಮಕವಾಗಿವೆ. ಮತ್ತು ಚಂದ್ರಸೂರ್ಯರ ಉತ್ಪತ್ತಿಗೆ ಕಾರಣವಾಗಿವೆ. ಭಗವಂತನ ಶ್ರೋತ್ರ ಎಲ್ಲ ಕಡೆಗೆ ಇರುವುದರಿಂದ ಭಕ್ತರ ಅಭೀಷ್ಟಗಳನ್ನು ನೀಡುವುದರಿಂದ ದಿಕ್ ನಾಮಕವಾಗಿವೆ. ಮತ್ತು ದಿಕ್ಕುಗಳಿಗೆ, ದಿಗಭಿಮಾನಿಗಳಿಗೆ ಕಾರಣವಾಗಿವೆ. ಭಗವಂತನ ಮಾತು ವೇದನಾಮಕವಾಗಿದೆ. ಶಿಕ್ಷಾದಿಷಡಂಗಗಳಿಂದ, ಇತಿಹಾಸಪುರಾಣಗಳಿಂದ ಸಹಿತವಾದ ವೇದಗಳ ಅಭಿವ್ಯಕ್ತಿಗೆ ಸ್ಥಾನವಾಗಿದೆ. ಭಗವಂತನ ಪ್ರಾಣವು ಎಲ್ಲ ಚೇಷ್ಟೆಗಳಿಗೆ ಪ್ರೇರಕವಾದುದರಿಂದ ಪ್ರಾಣನಾಮಕವಾಗಿದೆ. ಈ ಪ್ರಾಣವು ಜಡವಾದ ಪ್ರಾಣಕ್ಕೆ ಅದಕ್ಕೆ ಅಭಿಮಾನಿಗಳಾದ ಮುಖ್ಯಪ್ರಾಣದೇವರಿಗೆ ಜನಕವಾಗಿದೆ. ವ್ಯಾಪ್ತವಾದುದರಿಂದ ವಿಶ್ವನಾಮಕವಾದ ದೇವರ ಹೃದಯವು ವಿಶ್ವನಾಮಕನಾದ ಒಬ್ಬ ದೇವತೆಯ ಉಪ್ಪತ್ತಿಗೆ ಕಾರಣವಾಗಿದೆ. ಪಾದಗಳಿಂದ ಭೂಮಿಯು ತದಭಿಮಾನಿಯು ಜನಿಸಿದೆ. ಹೀಗೆ ಎಲ್ಲ ಜಗತ್ತಿಗೆ ಪರಮಾತ್ಮನೇ ಜನಕನಾಗಿದ್ದಾನೆ. ತನ್ನಿಂದ ಉತ್ಪನ್ನವಾದ ಈ ಎಲ್ಲ ವಿಶ್ವವನ್ನು ಸಂರಕ್ಷಿಸಲು ಆ ವಿಶ್ವದ ಹೊರಗೆ ಒಳಗೆ ವ್ಯಾಪಿಸಿಕೊಂಡು ಪರಮಾತ್ಮ ಇದ್ದಾನೆ.

ಈ ಪರಮಾತ್ಮನಿಂದಲೇ ಅಗ್ನಿ-ಸೂರ್ಯ-ಚಂದ್ರ ಹಾಗೂ ಯಜ್ಞಕ್ಕೆ ಅಂಗವಾಗಿರುವ ಸಮಿತ್ತುಗಳು ಜನಿಸಿವೆ. ಇವನಿಂದಲೇ ಮಳೆಯು ಬೆಳೆಯು ಉಂಟಾಗುತ್ತದೆ.

## ಭಾಷ್ಯ

ವಿಷ್ಣ್ವಂಗಾನಾಂ ಹಿ ನಾಮಾನಿ ದ್ಯುಭ್ವಾದೀನಿ ತು ಸರ್ವಶಃ ।
ಕ್ರೀಡಾದಿಶಕ್ತಿರೂಪತ್ವಾತ್ ತಜ್ಜತ್ವಾದನ್ಯವಸ್ತುಷು ॥ ಇತಿ ಚ ॥

ಭಾಷ್ಯಾರ್ಥ- ಕ್ರೀಡಾದಿಶಕ್ತಿರೂಪನಾದುದರಿಂದ ದ್ಯು,ಭೂ ಮೊದಲಾದ ಶಬ್ದಗಳು ಭಗವಂತನ ಅಂಗಗಳಿಗೆ ವಾಚಕವಾಗಿವೆ. ಪ್ರಕೃತ ದ್ಯು ಎಂಬ ಶಬ್ದವು ಭಗವಂತನ ಮೂರ್ಧಾವಾಚಕವಾಗಿದೆ. ದಿವು ಎಂಬ ಧಾತುವಿಗೆ ಕ್ರೀಡಾ ಎಂಬ ಅರ್ಥವಿರುವುದರಿಂದ ದ್ಯೌಃ ಎಂದರೇ ಭಗವಂತನ ಮೂರ್ಧಾ ಶಿರಸ್ಸು ಕ್ರೀಡಾದಿಶಕ್ತಿಸ್ವರೂಪವಾಗಿದೆ ಎಂದು ಅರ್ಥ. ಮತ್ತು ದ್ಯುಲೋಕವು ದೇವರ ಶಿರಸ್ಸಿನಿಂದ ಜನಿಸಿದೆ. ಶಿರಸ್ಸನ್ನೇ ಆಶ್ರಯಿಸಿದೆ. ಆದ್ದರಿಂದ ಅಭೇದವ್ಯವಹಾರ- ವನ್ನು ಉಪನಿಷತ್ತು ಮಾಡಿದೆ. ಹೀಗೆಯೇ ಆಯಾ ಲೋಕಗಳು ಆಯಾ ಅವಯವಗಳಿಂದ ಜನಿಸಿದ್ದರಿಂದ ಆ ಅವಯವವನ್ನೇ ಆಶ್ರಯಿಸಿಕೊಂಡಿರುವುದರಿಂದ ಭೂ ಮೊದಲಾದ ನಾಮಗಳು ಯುಕ್ತವಾಗಿವೆ.

ದ್ಯೌರ್ಮೂರ್ಧಾ ಎಂದು ಶಾಖಾಂತರವಚನವಿದೆ. ಅದಕ್ಕೆ ಅನುಗುಣವಾದ ಪ್ರಮಾಣವಿದಾಗಿದೆ. ಈ ಪ್ರಮಾಣದಿಂದ ಪ್ರಕೃತ ಮಂತ್ರಕ್ಕೂ ಅರ್ಥವನ್ನು ತಿಳಿಯಬೇಕು.

## ಖಂಡಾರ್ಥ

'ಏತಸ್ಮಾಜ್ಜಾಯತೇ ಪ್ರಾಣಃ' ಇತ್ಯಾದಿನಾ ನಾಮಾನ್ಯತ್ರ ಉಕ್ತಮ್ । ತತ್ಕಿಮ್? ಕಸ್ಮಾದಂಗಾತ್ ಜಾತಮಿತ್ಯತ ಆಹ- **ಅಗ್ನಿರ್ಮೂರ್ಧೇತಿ** ॥ ಅಸ್ಯ ಪ್ರಕೃತಾಽಕ್ಷರಸ್ಯ ಭಗವತೋ ಮೂರ್ಧಾ ಅಗ್ನಿಃ, ಅತ್ರತ್ಯನಿಮಿತ್ತೇನಾಗ್ನಿನಾಮಾ ಅಗ್ನಿಜನಕಶ್ಚ । ಅಗ್ನ್ಯಾಖ್ಯಮೂರ್ಧಜತ್ವಾತ್ ಅಗ್ನೇಃ ಅಗ್ನಿನಾಮ । ಕಾರ್ಯಕಾರಣಯೋಃ 'ಗೋಭಿಃ ಶ್ರೀಣೀತ ಮತ್ಸರಮ್' ಇತ್ಯಾದಾವಿವಾಽಭೇದೋಪಚಾರೇಣಾಽಯಂ ನಿರ್ದೇಶಃ । ಏವಮುತ್ತರತ್ರಾಽಪಿ । 'ಚಕ್ಷುಷೀ ಚಂದ್ರಸೂರ್ಯೌ' ಆಹ್ಲಾದಕತ್ವಾದಿಹೇತುನಾ ಚಂದ್ರಸೂರ್ಯನಾಮಕೇ ಚಂದ್ರಸೂರ್ಯಜನಕೇ ಚ । ಶ್ರೋತ್ರೇ ದಿಶಃ । ದಿಶಂತ್ಯಭೀಷ್ಟಮಿತಿ ದಿಕ್

ನಾಮಕೇ ದಿಶಾಂ ಜನಕೇ ಚ । ವಾಕ್ ಭಗವತೋ ವಾಕ್ ವಿವೃತವೇದನಾಮಿಕಾ ವಿವೃತಶಬ್ದಿತವಿಸ್ತೀರ್ಣವೇದಜನಿಕಾ, ವಿವೃತಾ ಅಭಿವ್ಯಕ್ತಾ ವಾ । ಭಗವತಃ ಪ್ರಾಣೋ ವಾಯುಃ ವಾಯುನಾಮಾ ವಾಯುಜನಕಃ । ವಿಶ್ವಮಿತಿ ಕಾಚಿದ್ದೇವತಾ । ಹೃದಯಂ ವಿಶ್ವನಾಮಕಂ ವಿಶ್ವಜನಕಂ ಚ । ಪದ್ಭ್ಯಾಂ ಪೃಥಿವೀತ್ಯಂತೇ ಶ್ರವಣಾತ್ಪೂರ್ವತ್ರಾಽಪಿ ಜನ್ಯಜನಕಭಾವೇನ ಅಗ್ನಿರ್ಮೂರ್ಧೇತ್ಯಾದಿನಿರ್ದೇಶ ಇತಿ ಜ್ಞಾಯತೇ । ಹಿಶಬ್ದಃ ಪದ್ಭ್ಯಾಂ ಭೂಮಿರಿತ್ಯಾದಿಶ್ರುತ್ಯಂತರಪ್ರಸಿದ್ಧಿದ್ಯೋತಕಃ । ನ ಕೇವಲಂ ಸೃಷ್ಟಿಸಂಹಾರಕರ್ತಾ ನಿಯಮನಕರ್ತಾ ಚೇತ್ಯಾಹ- **ಏಷ ಸರ್ವಭೂತಾಂತರಾತ್ಮಾ** ॥ ಅಂತಃ ಸ್ಥಿತ್ವಾ ಆದಾನಾದಿಕರ್ತೃತ್ವಾದಂತರಾತ್ಮಾ । ತಸ್ಮಾದಗ್ನಿಃ ಸಮಿದಶ್ಚ ಪೃಥಿವ್ಯಾಂ ಜಾಯಂತೇ ಇತಿ ಶೇಷಃ । ಯಶ್ಚ ಸೂರ್ಯಃ ತಸ್ಮಾತ್ಸೂರ್ಯಾತ್ಸೋಮಾಚ್ಚ ಪರ್ಜನ್ಯಃ ವೃಷ್ಟಿಃ, ಪರ್ಜನ್ಯಾತ್ ಪೃಥಿವ್ಯಾಮೋಷಧಯಶ್ಚ ಜಾಯಂತೇ ಇತ್ಯರ್ಥಃ ॥೨.೪॥

**ಅನುವಾದ**- 'ಏತಸ್ಮಾತ್ ಜಾಯತೇ ಪ್ರಾಣಃ' ಇತ್ಯಾದಿವಾಕ್ಯದಿಂದ ಪರಮಾತ್ಮನಿಂದ ಎಲ್ಲವೂ ಉತ್ಪನ್ನವಾಗುತ್ತದೆಂದು ಸಾಮಾನ್ಯವಾಗಿ ತಿಳಿಸಿದ್ದಾರೆ. ಹೀಗೆ ಹೇಳಿದಾಗ ಯಾರು ಯಾವ ಅಂಗದಿಂದ ಉತ್ಪನ್ನರಾದರು ಎಂದು ಪ್ರಶ್ನೆ ಬರುತ್ತದೆ. ಇದಕ್ಕೆ '**ಅಗ್ನಿರ್ಮೂರ್ಧಾ...**' ಎಂಬ ಮಂತ್ರದಿಂದ ಉತ್ತರವನ್ನು ಹೇಳುತ್ತಿದ್ದಾರೆ.

ಅಸ್ಯ=ಪ್ರಕೃತನಾಗಿರುವ ಪರಮಾತ್ಮನ, ಮೂರ್ಧಾ=ತಲೆಯು, ಎಲ್ಲವನ್ನೂ ಅದನ ಮಾಡುತ್ತದೆ ಆದ್ದರಿಂದಾಗಿ ಅಗ್ನಿನಾಮಕವಾಗಿದೆ ಮತ್ತು ಅಗ್ನಿಗೆ ಜನಕವಾಗಿದೆ. ಅಗ್ನಿನಾಮಕವಾದ ತಲೆಯಿಂದ ಜನಿಸಿದ್ದರಿಂದ ಅಗ್ನಿಗೆ ಅಗ್ನಿ ಎಂಬ ನಾಮವು ಬಂದಿದೆ. ಭಗವಂತನ ಮುಖವು ಕಾರಣವಾಗಿದೆ. ಅಗ್ನಿಯು ಕಾರ್ಯವಾಗಿದೆ. ಆದ್ದರಿಂದ ಕಾರ್ಯಕಾರಣಗಳಲ್ಲಿ ಅಭೇದವ್ಯವಹಾರವನ್ನು ಮಾಡಿದ್ದಾರೆ. ಕಾರ್ಯಕಾರಣಗಳಲ್ಲಿ ಅಭೇದವ್ಯವಹಾರವು 'ಗೋಭಿಃ ಶ್ರೀಣೀತ ಮತ್ಸರಂ' ಇತ್ಯಾದಿಗಳಲ್ಲಿ ಕಂಡುಬಂದಿದೆ. (ಮತ್ಸರಂ=ಸಂತೋಷಕ್ಕೆ ಕಾರಣವಾದ ಸೋಮರಸವನ್ನು,

ಗೋಭಿಃ=ಹಾಲಿನಿಂದ, ಶ್ರೀಣೀತ= ಮಿಶ್ರಣಮಾಡಿ ಸಂಸ್ಕಾರಗೊಳಿಸಿರಿ. ಪ್ರಕೃತ ಗೋಭಿಃ ಎಂಬ ಶಬ್ದಕ್ಕೆ ಆಕಳುಗಳಿಂದ ಎಂದು ಅರ್ಥವನ್ನು ಹೇಳಬೇಕು. ಆದರೇ ಈ ಅರ್ಥವು ಬಾಧಿತವಾಗುತ್ತದೆ. ಆದ್ದರಿಂದ ಹಸುವಿನ ಕಾರ್ಯವಾದ ಹಾಲು ಎಂಬ ಅರ್ಥವನ್ನು ಸ್ವೀಕರಿಸಬೇಕು. ಇದು ನಿರುಕ್ತದಲ್ಲಿ ಪ್ರತಿಪಾದಿತವಾಗಿದೆ.) ಇದೇ ರೀತಿಯಾಗಿ ಮುಂದೆ ಎಲ್ಲ ಕಡೆಗೂ ತಿಳಿಯಬೇಕು. ಕಣ್ಣುಗಳು ಚಂದ್ರ-ಸೂರ್ಯರಿಂದ ಜನಿಸಿವೆ. ಆಹ್ಲಾದಕತ್ವ ಮತ್ತು ಸೂರಿಪ್ರಾಪ್ಯತ್ವ ಎಂಬ ನಿಮಿತ್ತಗಳಿಂದಾಗಿ ಚಂದ್ರ-ಸೂರ್ಯನಾಮಕವಾಗಿವೆ ದೇವರ ಕಣ್ಣುಗಳು, ಚಂದ್ರ-ಸೂರ್ಯರಿಗೆ ಜನಕವೂ ಆಗಿವೆ. ದೇವರ ಶ್ರೋತ್ರಗಳು 'ದಿಶಂತಿ ಅಭೀಷ್ಟಂ' ಅಭೀಷ್ಟಗಳನ್ನು ಪೂರೈಸುತ್ತವೆ ಆದ್ದರಿಂದ ದಿಕ್ ನಾಮಕವಾಗಿವೆ. ದಿಕ್ಕುಗಳಿಗೆ ಜನಕವಾಗಿವೆ. ವಾಕ್ ಭಗವಂತನ ಮಾತು, ವಿವೃತವಾದ ವಿಸ್ತಾರವಾದ ವೇದಗಳಿಗೆ ಜನಕವಾಗಿದೆ, ವೇದಗಳು ವಿವೃತಾಃ=ದೇವರ ಮಾತುಗಳಿಂದ ಅಭಿವ್ಯಕ್ತವಾಗಿವೆ. ಭಗವಂತನ ಪ್ರಾಣವು ಅಂದರೇ ಶ್ವಾಸವು ವಾಯುನಾಮಕವಾಗಿದೆ ವಾಯುವಿಗೆ ಜನಕವಾಗಿದೆ. ವಿಶ್ವ ಎಂಬ ಒಂದು ದೇವತೆ ಇದೆ. ದೇವರ ಹೃದಯವು ವಿಶ್ವನಾಮಕವಾಗಿದೆ. ವಿಶ್ವದೇವತೆಗೆ ಜನಕವಾಗಿದೆ. 'ಪದ್ಭ್ಯಾಂ ಪೃಥಿವೀ' (ಪಾದಗಳಿಂದ ಪೃಥಿವಿಯು ಹುಟ್ಟಿದೆ) ಎಂದು ಕೊನೆಯಲ್ಲಿ ಶ್ರುತವಾಗಿದೆಯಾದ್ದರಿಂದ ಅಗ್ನಿ: ಮೂರ್ಧಾ ಇತ್ಯಾದಿಗಳಲ್ಲಿಯೂ ಜನ್ಯಜನಕಭಾವದಿಂದಲೇ ಅಭೇದನಿರ್ದೇಶವೆಂದು ತಿಳಿಯಬೇಕು. ಪಾದಗಳಿಂದ ಪೃಥಿವಿಯು ಜನಕವಾಗಿದೆ ಎಂಬ ವಿಷಯವು ಪದ್ಭ್ಯಾಂ ಭೂಮಿಃ ಇತ್ಯಾದಿಯಾಗಿ ಶಾಖಾಂತರಗಳಲ್ಲಿ ಪ್ರಸಿದ್ಧವಾಗಿದೆ ಎಂಬುದನ್ನು ಹಿ ಶಬ್ದವು ತಿಳಿಸುತ್ತದೆ. ಭಗವಂತ ಸೃಷ್ಟಿಯನ್ನು ಸಂಹಾರವನ್ನು ಮಾತ್ರ ಮಾಡುವನೆಂದಲ್ಲ ಕಿಂತು ನಿಯಮನವನ್ನೂ ದೇವರೇ ಮಾಡುತ್ತಾನೆ ಎಂಬುದನ್ನು 'ಏಷ ಸರ್ವಭೂತಾಂತರಾತ್ಮಾ' ಎಂಬ ವಚನವು ತಿಳಿಸುತ್ತದೆ. ಎಲ್ಲದರ ಒಳಗೆ ಇದ್ದು ಆದಾನಾದಿಗಳನ್ನು (ಸ್ವೀಕಾರವೇ ಮೊದಲಾದ ಕಾರ್ಯಗಳು) ಮಾಡುತ್ತಾನೆ ಆದ್ದರಿಂದ ಅಂತರಾತ್ಮನೆನಿಸಿದ್ದಾನೆ.

ಆ ಪರಮಾತ್ಮನಿಂದಲೇ ಅಗ್ನಿಯು ಮತ್ತು ಸಮಿತ್ತುಗಳು ಪೃಥಿವಿಯಲ್ಲಿ ಜನಿಸಿವೆ. ಸೂರ್ಯ-ಚಂದ್ರರಿಂದ ಮಳೆಯು ಮತ್ತು ಓಷಧಿಗಳು ಉತ್ಪನ್ನವಾಗಿವೆ.

**ಉಪನಿಷತ್**

**ಪುಮಾನ್ ರೇತಃ ಸಿಂಚತಿ ಯೋಷಿತಾಯಾಂ**
**ಬಹ್ವೀಃ ಪ್ರಜಾಃ ಪುರುಷಾತ್ಸಂಪ್ರಸೂತಾಃ ॥೩.೫॥**

**ಉಪನಿಷದರ್ಥ-** ಪರಿಪೂರ್ಣನಾದ ಪರಮಾತ್ಮನು ಪೂರ್ಣನಾದುದರಿಂದ ಪುರುಷನಾಮಕನಾದ ಪರಮಾತ್ಮನು ಲಕ್ಷ್ಮೀದೇವಿಯೊಳಗೆ ರೇತಸ್ಸನ್ನು ಸೇಚನಮಾಡಿದನು. ಹೀಗೆ ಪರಮಾತ್ಮನಿಂದ ಬ್ರಹ್ಮದೇವರೇ ಮೊದಲಾದ ಜೀವ ಸಮುದಾಯವು ಉತ್ಪನ್ನವಾಯಿತು.

**ಭಾಷ್ಯ**

**ವಾಸುದೇವಃ ಪುಮಾನ್ನಾಮಾ ಪೂರ್ಣತ್ವಾತ್ ಸಃ ಸ್ವಯೋಷಿತಿ ।**
**ರಮಾಯಾಂ ಗರ್ಭಮದಧಾತ್ ಪ್ರಜಾಸ್ತಸ್ಮಾತ್ ಪ್ರಜಜ್ಞಿರೇ ॥ಇತಿ ಚ॥**

**ಭಾಷ್ಯಾರ್ಥ-** ಷಡ್ಗುಣಗಳಿಂದ ಪೂರ್ಣನಾದುದರಿಂದ ಪುರುಷನಾಮಕ- ನಾಗಿದ್ದಾನೆ ಪರಮಾತ್ಮ. ಈ ಪರಮಾತ್ಮ ಪ್ರಲಯದಲ್ಲಿ ತನ್ನ ಉದರದಲ್ಲಿರಿಸಿಕೊಂಡಿರುವ ವಿಶ್ವವನ್ನು ತನ್ನ ಪತ್ನಿಯಾದ ರಮಾದೇವಿಯ ಗರ್ಭದಲ್ಲಿ ರೇತಸ್ಸಿನಂತೆ ಇರಿಸಿದನು. ಆದರಿಂದ ಬ್ರಹ್ಮಾದಿದೇವತೆಗಳನ್ನು ಮೊದಲು ಮಾಡಿ ಸಮಸ್ತವಿಶ್ವವು ಜನಿಸಿತು.

**ಖಂಡಾರ್ಥ**

ಏವಮಂಗೇಭ್ಯ ಉತ್ಪತ್ತಿಮುಕ್ತ್ವಾ ಸ್ತ್ರಿಯಾಮುತ್ಪತ್ತಿಮಾಹ- **ಪುಮಾನಿತ್ಯಾದಿನಾ ॥** ಪೂರ್ಣತ್ವೇನ ಹೇತುನಾ ಪುಮಾನ್ನಾಮಾ ವಾಸುದೇವೋ ಯೋಷಿತಾಯಾಂ ಯೋಷಿತಿ, ಹಲಂತಾದ್ವಾ ಇತಿ ಟಾಪ್, ರಮಾಯಾಂ ರೇತಃ ಸಿಂಚತಿ । ಪ್ರಲಯೇ ಸ್ವೋದರೇ ನಿವೇಶಿತಂ ಜಗದ್ರೇತೋವದ್ರಮಾಯಾಂ

ನಿದಧಾತೀತ್ಯರ್ಥ: । ತತೋ ಬಹ್ವೀ: ಬಹ್ವ್ಯ: ಪ್ರಜಾ: ಪುರುಪಾತ್ ಪೂರ್ಣಗುಣಾದ್ವಾಸುದೇವಾತ್ಸಂಪ್ರಸೂತಾ: ॥೩.೫॥

**ಅನುವಾದ-** ಈ ರೀತಿಯಾಗಿ ಅಂಗಗಳಿಂದ ಆಗುವ ಉತ್ಪತ್ತಿಯ ಪ್ರಕಾರವನ್ನು ಹೇಳಿ ಸ್ತ್ರೀಯಲ್ಲಿ ಆಗುವ ಉತ್ಪತ್ತಿಯನ್ನು 'ಪುಮಾನ್' ಇತ್ಯಾದಿ ಮಂತ್ರದಿಂದ ಹೇಳುತ್ತಿದ್ದಾರೆ.

ಪೂರ್ಣತ್ವನಿಮಿತ್ತದಿಂದ ಪುರುಷನಾಮಕನಾಗಿರುವ ವಾಸುದೇವನು ತನ್ನ ಪತ್ನಿಯಾದ ರಮಾದೇವಿಯಲ್ಲಿ ರೇತಸ್ಸೇಚನವನ್ನು ಮಾಡುತ್ತಾನೆ. ಪ್ರಲಯದಲ್ಲಿ ತನ್ನ ಉದರದಲ್ಲಿ ಹಾಕಿಕೊಂಡಿರುವ ಜಗತ್ತನ್ನು ರೇತಸ್ಸಿನಂತೆ ರಮಾದೇವಿಯ ಉದರದಲ್ಲಿ ಇಡುತ್ತಾನೆ ಎಂದು ಅರ್ಥ. ಆಮೇಲೆ ಪೂರ್ಣಗುಣ ಉಳ್ಳವನಾದುದರಿಂದ ಪುರುಷನಾಮಕನಾದ ವಾಸುದೇವನಿಂದ ಬಹುವಿಧವಾದ ಪ್ರಜರ ಉತ್ಪತ್ತಿಯಾಗುತ್ತದೆ. ಯೋಷಿತ್ ಶಬ್ದಕ್ಕೆ 'ಹಲಂತಾದ್ವಾ' ಎಂಬ ಸೂತ್ರದಿಂದ ಟಾಪ್ ಪ್ರತ್ಯಯ ಬಂದು ಯೋಷಿತಾ ಎಂಬ ಶಬ್ದವು ಸಿದ್ಧವಾಗುತ್ತದೆ. ॥೩.೫॥

**ಉಪನಿಷತ್**

**ತಸ್ಮಾದೃಚ: ಸಾಮ ಯಜೂಂಷಿ ದೀಕ್ಷಾ**
**ಯಜ್ಞಾಶ್ಚ ಸರ್ವೇ ಕ್ರತವೋ ದಕ್ಷಿಣಾಶ್ಚ ।**
**ಸಂವತ್ಸರಶ್ಚ ಯಜಮಾನಶ್ಚ ಲೋಕಾ:**
**ಸೋಮೋ ಯತ್ರ ಪವತೇ ಯತ್ರ ಸೂರ್ಯ:॥೩.೬॥**

**ಉಪನಿಷದರ್ಥ-** ಋಗ್ವೇದ, ಯಜುರ್ವೇದ, ಸಾಮವೇದ, ಅಗ್ನಿಹೋತ್ರವೇ ಮೊದಲಾದ ಯಜ್ಞಗಳು, ಸೋಮಯಾಗವೇ ಮೊದಲಾದ ಕ್ರತುಗಳು, ದೀಕ್ಷಾ, ದಕ್ಷಿಣಾ, ಸಂವತ್ಸರ, ಯಜಮಾನ, ಮತ್ತು ಸೂರ್ಯಚಂದ್ರರ ಸಂಚಾರಕ್ಕೆ ಯೋಗ್ಯವಾದ ಲೋಕಗಳು ಇವುಗಳಿಗೆ ಅಭಿಮಾನಿಗಳಾದ ದೇವತೆಗಳು ಜನಿಸಿವೆ.

## ಖಂಡಾರ್ಥ

ನ ಕೇವಲಂ ಪ್ರಜಾಃ ಅನ್ಯದಪೀತ್ಯಾಹ- **ತಸ್ಮಾದಿತಿ** ॥ ಪುರುಷಾದಿತ್ಯರ್ಥಃ । ಋಚ ಇತ್ಯಾದೌ ಸಂಪ್ರಸೂತಪದಾನುಷಂಗೋ ಯಥಾಯೋಗಂ ಧ್ಯೇಯಃ । ತತ್ರ ಪ್ರಸವೋಽಭಿವ್ಯಕ್ತಿಃ । ಯಜ್ಞಾ ಅಗ್ನಿಹೋತ್ರಾದಯಃ । ಸರ್ವೇ ಕ್ರತವಃ ಸೋಮಯಾಗಾಃ ಪಶುಸಂಬದ್ಧಾಃ । ಅತ್ರ ಋಗಾದಿಶಬ್ದೈಃ ತದಭಿಮಾನಿನಶ್ಚ ಗ್ರಾಹ್ಯಾಃ । ಯಜಮಾನಃ ಯಜ್ಞಕ್ರತೂನಾಮನುಷ್ಠಾತಾ ಸಂಪ್ರಸೂತ ಇತ್ಯರ್ಥಃ । ಲೋಕಾ ಇತ್ಯುಕ್ತಂ, ತೇ ಕೇ ಲೋಕಾ ಇತ್ಯತ ಆಹ- ಸೋಮಃ ಚಂದ್ರಃ ಯತ್ರ ಪವತೇ ಚರತಿ, ಸೂರ್ಯೋ ಯತ್ರ ಪವತೇ ತೇ ಲೋಕಾ ಇತ್ಯರ್ಥಃ ॥೨.೬॥

ಅನುವಾದ- ಪ್ರಜರು ಮಾತ್ರವಲ್ಲ ಬೇರೆಯ ಪದಾರ್ಥಗಳೂ ಉತ್ಪನ್ನವಾಗುತ್ತವೆ ಎಂದು 'ತಸ್ಮಾತ್...' ಎಂಬ ಮಂತ್ರದಿಂದ ಹೇಳುತ್ತಿದ್ದಾರೆ.

ಪುರುಷನಾಮಕನಾದ ಶ್ರೀಹರಿಯಿಂದ ಎಂದು ಅರ್ಥ. ಋಚಃ ಇತ್ಯಾದಿ ಪದಗಳ ಮುಂದೆ ಸಂಪ್ರಸೂತ ಎಂಬ ಪದವನ್ನು ಆಯಾ ವಚನ ಮತ್ತು ಲಿಂಗಗಳಿಗೆ ಅನುಗುಣವಾಗಿ ಅನ್ವಯಕ್ಕಾಗಿ ಇಟ್ಟುಕೊಳ್ಳಬೇಕು. ವೇದಗಳು ಹುಟ್ಟುವುದೆಂದರೇ ಅಭಿವ್ಯಕ್ತವಾಗುತ್ತವೆ ಎಂದು ಅರ್ಥ. ಯಜ್ಞಾಃ= ಅಗ್ನಿಹೋತ್ರಾದಿಗಳು, ಸರ್ವೇ ಕ್ರತವಃ=ಸೋಮಯಾಗಗಳು ಪಶುಸಂಬದ್ಧವಾದ ಯಾಗಗಳು, ಇಲ್ಲಿ ಋಗಾದಿಶಬ್ದಗಳಿಂದ ತದಭಿಮಾನಿಗಳಾದ ದೇವತೆಗಳನ್ನೂ ಸ್ವೀಕರಿಸಬೇಕು. ಯಜಮಾನಃ=ಯಜ್ಞಗಳನ್ನು ಅನುಷ್ಠಾನಮಾಡುವವನು ಹುಟ್ಟಿದನು ಎಂದು ಅರ್ಥ. ಚಂದ್ರ-ಸೂರ್ಯರು ಯಾವ ಲೋಕಗಳಲ್ಲಿ ಸಂಚರಿಸುವರೋ ಅಂತಹ ಲೋಕಗಳು ಹುಟ್ಟಿದವು ಎಂದು ಅರ್ಥ.॥೨.೬॥

## ಉಪನಿಷತ್

ತಸ್ಮಾಚ್ಚ ದೇವಾ ಬಹುಧಾ ಸಂಪ್ರಸೂತಾಃ
ಸಾಧ್ಯಾ ಮನುಷ್ಯಾಃ ಪಶವೋ ವಯಾಂಸಿ ।
ಪ್ರಾಣಾಪಾನೌ ವ್ರೀಹಿಯವೌ ತಪಶ್ಚ
ಶ್ರದ್ಧಾ ಸತ್ಯಂ ಬ್ರಹ್ಮಚರ್ಯಂ ವಿಧಿಶ್ಚ ॥೨.೭॥

ಉಪನಿಷದರ್ಥ- ಆ ಭಗವಂತನಿಂದ ಬ್ರಹ್ಮಾಂಡದ ಹೊರಗೆ ಉತ್ಪನ್ನರಾದ ಬ್ರಹ್ಮಾದಿದೇವತೆಗಳು ಬ್ರಹ್ಮಾಂಡದ ಒಳಗೆ ಬಹುವಿಧರಾಗಿ ಅಂಶಗಳಿಂದ ಯುಕ್ತರಾಗಿ ಜನಿಸಿದ್ದಾರೆ. ಭೂಮಿಯಲ್ಲಿ ಮನುಷ್ಯರೇ ಮೊದಲಾದವರು ಕೂಡಾ ಈ ಪರಮಾತ್ಮನಿಂದಲೇ ಜನಿಸಿದ್ದಾರೆ. ಪಶುಗಳು, ಪಕ್ಷಿಗಳು, ಪ್ರಾಣಾಪಾನರು, ಭತ್ತ-ಅಕ್ಕಿ ಮೊದಲಾದ ಧಾನ್ಯಗಳು, ಕೃಚ್ಛ್ರಚಾಂದ್ರಾಯಣಾದಿ ವ್ರತರೂಪವಾದ ತಪಸ್ಸು, ಆಸ್ತಿಕ್ಯಬುದ್ಧಿಯು, ಯಥಾರ್ಥವಚನರೂಪವಾದ ಸತ್ಯವು, ಬ್ರಹ್ಮಚರ್ಯವು, ಮತ್ತು ವಿಧಾನಗಳೆಲ್ಲವೂ ಜನಿಸಿವೆ.

### ಖಂಡಾರ್ಥ

ತಸ್ಮಾತ್ಪುರುಷಾತ್ ಯೋಷಿದ್ದ್ವಾರಾ ದೇವಾ ಬಹುಧಾ ಸಂಪ್ರಸೂತಾಃ । ತಥಾ ಸಾಧ್ಯಾದಯೋऽಪಿ ಸಂಪ್ರಸೂತಾಃ । ವಯಾಂಸಿ ಪಕ್ಷಿಣಃ ತಪಶ್ಚ ಕೃಚ್ಛ್ರಚಾಂದ್ರಾಯಣಾದಿ ಶ್ರದ್ಧಾ ಆಸ್ತಿಕ್ಯಬುದ್ಧಿಃ ಸತ್ಯಂ ಯಥಾರ್ಥವಚನಮ್ । ಸಂಪ್ರಸೂತಪದಸ್ಯ ಯಥಾಯೋಗಮನುಷಂಗಃ ಸರ್ವತ್ರ ಜ್ಞೇಯಃ ॥೩.೭॥

ಅನುವಾದ- ಆ ಪುರುಷನಿಂದ ರಮಾದೇವಿಯರ ದ್ವಾರಾ ದೇವತೆಗಳು ಬಹುವಿಧರಾಗಿ ಜನಿಸಿದರು ಮತ್ತು ಸಾಧ್ಯರೇ ಮೊದಲಾದವರು ಜನಿಸಿದರು. ಪಶುಗಳು, ಪಕ್ಷಿಗಳು, ಕೃಚ್ಛ್ರ-ಚಾಂದ್ರಾಯಣಾದಿವ್ರತರೂಪವಾದ ತಪಸ್ಸುಗಳು, ಆಸ್ತಿಕ್ಯಬುದ್ಧಿಯು, ಯಥಾರ್ಥವಚನವು ಇವೆಲ್ಲವೂ ಜನಿಸಿದವು. ಎಲ್ಲ ಕಡೆಗೆ ಯಥಾಯೋಗ್ಯವಾಗಿ ಹಿಂದೆ ತಿಳಿಸಿದಂತೆ ಸಂಪ್ರಸೂತ ಎಂಬ ಪದದ ಅಧ್ಯಾಹಾರವನ್ನು ಮಾಡಿಕೊಳ್ಳಬೇಕು.॥೩.೭॥

### ಉಪನಿಷತ್

ಸಪ್ತ ಪ್ರಾಣಾಃ ಪ್ರಭವಂತಿ ತಸ್ಮಾ-
ತ್ಸಪ್ತಾರ್ಚಿಷಃ ಸಮಿಧಃ ಸಪ್ತ ಹೋಮಾಃ ।
ಇಮೇ ಲೋಕಾ ಯೇಷು ಚರಂತಿ ಪ್ರಾಣಾ
ಗುಹಾಶಯಾಂ ನಿಹಿತಾಸ್ಸಪ್ತ ಸಪ್ತ ॥೩.೮॥

**ಉಪನಿಷದರ್ಥ-** ಮೂಗು, ನಾಲಿಗೆ, ಕಣ್ಣು, ಕಿವಿ, ಚರ್ಮ, ಮನಸ್ಸು ಮತ್ತು ಬುದ್ಧಿ ಎಂಬ ಏಳು ಇಂದ್ರಿಯಗಳು, ಭಗವಂತನಿಂದಲೇ ಜನಿಸುತ್ತವೆ. ಏಳು ಇಂದ್ರಿಯವೃತ್ತಿಗಳು ಮತ್ತು ಗಂಧ, ರಸ, ರೂಪ, ಶಬ್ದ, ಸ್ಪರ್ಶ ಮೊದಲಾದ ಏಳು ವಿಷಯಗಳು, ವಿಷಯೇಂದ್ರಿಯಸಂಬಂಧಗಳು, ಚೇತನರಿಗೆ ಜ್ಞಾನವನ್ನುಂಟುಮಾಡಲು ಪ್ರತಿಶರೀರದಲ್ಲಿಯೂ ಏಳರಂತೆ ಇರುವ ಜ್ಞಾನೇಂದ್ರಿಯಗಳಿಗೆ ಆಶ್ರಯವಾದ ಏಳು ಗೋಲಕಗಳು ಕೂಡಾ ಈ ಭಗವಂತನಿಂದಲೇ ಜನಿಸುತ್ತವೆ.

## ಭಾಷ್ಯ

**ಸಪ್ತರ್ಚಿಷೋ ವೃತ್ತಯಃ । ಹೋಮಾಃ ಸಂಬಂಧಾಃ । ಲೋಕಾಃ ಗೋಲಕಾಃ । ಗುಹಾಶಯಾಂ ಬುದ್ಧೌ । 'ಲೋಪಃ ಸಮಾನೇ' ಇತಿ ಸೂತ್ರಾದೇಕಯಕಾರಲೋಪಃ । ಪ್ರತಿಪುರುಷಂ ಸಪ್ತ ಸಪ್ತ ॥**

**ಭಾಷ್ಯಾರ್ಥ-** ಉಪನಿಷತ್ತಿನಲ್ಲಿಯ ಸಪ್ತಾರ್ಚಿಷಃ ಎಂಬ ಪದದಲ್ಲಿಯ ಅರ್ಚಿ ಎಂಬ ಪದಕ್ಕೆ ಪ್ರಸಿದ್ಧವಾದ ಜ್ವಾಲಾ ಎಂಬ ಅರ್ಥವನ್ನು ಹೇಳುವುದು ಪ್ರಕೃತ ಅನುಪಯುಕ್ತವಾಗಿದೆ. ಆದ್ದರಿಂದ ಅರ್ಚಿ ಎಂದರೇ ಜ್ಞಾನ ಎಂಬ ಅರ್ಥವನ್ನು ತಿಳಿಯಬೇಕು. ಹೋಮ ಎಂಬ ಶಬ್ದಕ್ಕೆ ಸಂಬಂಧ ಎಂದು ಅರ್ಥ. ಏಳು ಇಂದ್ರಿಯಗಳಿಗೆ ಏಳು ವಿಷಯಗಳೊಡನೆ ಇರುವ ಸನ್ನಿಕರ್ಷವೆಂದು ಅರ್ಥ. ಲೋಕಾಃ ಎಂದರೇ ಇಂದ್ರಿಯಗಳಿಗೆ ಅಧಿಷ್ಠಾನವಾಗಿರುವ ಗೋಲಕಗಳು ಎಂದು ಅರ್ಥ.

ಗುಹಾಶಯಾಂ ಎಂದರೇ ಬುದ್ಧಿಯಲ್ಲಿ ಎಂದು ಅರ್ಥ. ಗುಹಾಶಯಾಯಾಂ ಎಂದು ಆಗಬೇಕಾಗಿತ್ತು. ಆದರೇ 'ಲೋಪಃ ಸಮಾನೇ' (ಸಮಾನವಾದ ವರ್ಣವು ಮುಂದಿರುವಾಗ ಪೂರ್ವದಲ್ಲಿಯ ವರ್ಣವು ಕೆಲವು ಬಾರಿ ಲುಪ್ತವಾಗುತ್ತದೆ. ಈ ನಿಯಮ ಸಾರ್ವತ್ರಿಕವಲ್ಲ. 'ಗುಹಾಶಯಾಯ್ಯೈವ ನ ದೇಹಮಾನಿನೇ' ಎಂಬಲ್ಲಿ ಲೋಪವಾಗಿಲ್ಲ.) ಎಂಬ ಸೂತ್ರದಿಂದ ಪೂರ್ವದಲ್ಲಿಯ ಯಾ ಎಂಬುದು ಲುಪ್ತವಾಗಿ ಗುಹಾಶಯಾಯಾಂ ಎಂದಾಗದೇ ಗುಹಾಶಯಾಂ ಎಂದು ಆಗುತ್ತದೆ.

ಪ್ರತಿಯೊಬ್ಬನ ದೇಹದಲ್ಲಿ ಏಳು ಇಂದ್ರಿಯಗಳು ಇರುತ್ತವೆ ಎಂಬುದನ್ನು ತಿಳಿಸುವುದಕ್ಕಾಗಿ ಸಪ್ತ ಸಪ್ತ ಎಂದು ಹೇಳಿದ್ದಾರೆ.

**ಖಂಡಾರ್ಥ**

ಸಪ್ತ ಪ್ರಾಣಾಃ ಘ್ರಾಣರಸನಚಕ್ಷುಃಶ್ರೋತ್ರತ್ವಙ್ಮನೋಬುದ್ಧಿರೂಪಾಣಿ ಸಪ್ತೇಂದ್ರಿಯಾಣಿ ಪ್ರಭವಂತಿ ತಸ್ಮಾತ್ಪುರುಷಾತ್ ಯೋಷಿದ್ದ್ವಾರೇತಿ ಭಾವಃ। ತೇನ 'ಏತಸ್ಮಾಜ್ಜಾಯತೇ ಪ್ರಾಣೋ ಮನಃ' ಇತ್ಯಾದಿನಾ ಪೂರ್ವತ್ರೇಂದ್ರಿಯಾಣಾಂ ಸೃಷ್ಟ್ಯುಕ್ತಾವಪೀಹ ಯೋಷಿದ್ದ್ವಾರಕಸೃಷ್ಟ್ಯುಕ್ತೇನ ಪುನರುಕ್ತಿರಿತಿ ಜ್ಞೇಯಮ್। ಸಪ್ತಾರ್ಚಿಷಃ ಸಪ್ತೇಂದ್ರಿಯವೃತ್ತಯಃ। ಸಮಿಧಃ ಗಂಧಾದಿವಿಷಯಾಃ। ಹೋಮಾ ಇಂದ್ರಿಯಾಣಾಂ ವಿಷಯೈಃ ಸಂಬಂಧಾಃ ಸಪ್ತೇತ್ಯರ್ಥಃ। ಇಮೇ ಲೋಕಾಃ ಸಪ್ತ, ತೇ ಕೇ ಲೋಕಾಃ ಇತ್ಯತ ಆಹ- ಯೇಷು ಸ್ಥಿತ್ವಾ ಪ್ರಾಣಾಃ ಸಪ್ತ ಚರಂತಿ। ವಿಷಯೈಸ್ಸಹ ಸಂಬದ್ಧಾ ಭವಂತೀತ್ಯರ್ಥಃ। ಇಂದ್ರಿಯಗೋಲಕಾ ಇತಿ ಯಾವತ್। ಕಿಮರ್ಥಂ ಸೃಷ್ಟಾಃ ಪ್ರಾಣಾ ಇತ್ಯತ ಆಹ- ಗುಹಾಶಯಾಂ ಗುಹಾಶಯಾಯಾಂ, ಗುಹಾ ಹೃದಯಮಾಶಯಃ ಸ್ಥಾನಂ ಯಸ್ಯಾಃ ತಸ್ಯಾಂ ಬುದ್ಧೌ ನಿಮಿತ್ತಸಪ್ತಮೀ। ಪ್ರಾಣಿನಾಂ ಜ್ಞಾನೋತ್ಪತ್ತ್ಯರ್ಥಂ ಪ್ರತಿಶರೀರಂ ಸಪ್ತ ಸಪ್ತ ಪ್ರಾಣಾ ನಿಹಿತಾಃ ಸಂತಃ ಯೇಷು ಚರಂತಿ ತೇ ಲೋಕಾ ಇತ್ಯನ್ವಯಃ। ತಥಾ ಚ ಸೂತ್ರಂ 'ಸಪ್ತ ಗತೇರ್ವಿಶೇಷಿತತ್ವಾಚ್ಚ' ಇತಿ ॥೨.೮॥

ಅನುವಾದ- ಪುರುಷನಾಮಕನಾದ ಪರಮಾತ್ಮನಿಂದ ರಮಾದೇವಿಯ ದ್ವಾರಾ ಮೂಗು, ನಾಲಿಗೆ, ಕಣ್ಣು, ಕಿವಿ, ಚರ್ಮ, ಮನಸ್ಸು, ಬುದ್ಧಿ ಎಂಬ ಏಳು ಇಂದ್ರಿಯಗಳು ಹುಟ್ಟಿದವು. 'ಏತಸ್ಮಾಜ್ಜಾಯತೇ ಪ್ರಾಣೋ ಮನಃ' ಇತ್ಯಾದಿವಾಕ್ಯಗಳಿಂದ ಈ ಮೊದಲೇ ಇಂದ್ರಿಯಗಳ ಸೃಷ್ಟಿಯನ್ನು ಹೇಳಿದ್ದರೂ ಕೂಡಾ ಇಲ್ಲಿ ಸ್ತ್ರೀದ್ವಾರಾ ಸೃಷ್ಟಿಯನ್ನು ಹೇಳುತ್ತಿದ್ದಾರಾದ್ದರಿಂದ ಪುನರುಕ್ತಿಯು ದೋಷಾಪಾದಕವಲ್ಲ ಎಂದು ತಿಳಿಯಬೇಕು. ಸಪ್ತಾರ್ಚಿಷಃ=ಏಳು ಇಂದ್ರಿಯವೃತ್ತಿಗಳು, ಸಮಿಧಃ=ಗಂಧ-ರಸಮೊದಲಾದ ವಿಷಯಗಳು, ಹೋಮಾಃ=ಇಂದ್ರಿಯ ಮತ್ತು ವಿಷಯಗಳಿಗಿರುವ ಏಳು ಸಂಬಂಧಗಳು ಹುಟ್ಟಿದವು. ಎಲ್ಲಿ ಇದ್ದುಕೊಂಡು ಏಳು ಇಂದ್ರಿಯಗಳು ಸಂಚರಿಸುತ್ತವೋ

ಅಂತಹ ಏಳು ಗೋಲಕಗಳು ಜನಿಸಿದವು. ಹೃದಯವೇ ಸ್ಥಾನವಾಗಿರುವ ಬುದ್ಧಿಯಲ್ಲಿ ಪ್ರಾಣಿಗಳಿಗೆಲ್ಲ ಜ್ಞಾನವು ಉತ್ಪನ್ನವಾಗುವುದಕ್ಕಾಗಿ ಪ್ರತಿಶರೀರದಲ್ಲಿಯೂ ಏಳು ಏಳು ಇಂದ್ರಿಯಗಳು ಇರುತ್ತವೆ. 'ಸಪ್ತ ಗತೇರ್ವಿಶೇಷಿತತ್ವಾತ್' (ಬ್ರ.ಸೂ.೨.೪.೬)'ಗುಹಾಶಯಾಂ ನಿಹಿತಾಃ ಸಪ್ತ ಸಪ್ತ ಎಂಬ ಶ್ರುತಿಯಲ್ಲಿ ಜ್ಞಾನಾರ್ಥತ್ವವೆಂಬ ವಿಶೇಷಣವನ್ನು ಇಂದ್ರಿಯಗಳಿಗೆ ಹೇಳಿದ್ದಾರೆ ಆದ್ದರಿಂದ ಜ್ಞಾನಸಾಧನವಾದ ಇಂದ್ರಿಯಗಳು ಏಳು ಸಂಖ್ಯಾಕವಾಗಿವೆ. ' ಎಂಬ ಸೂತ್ರದಲ್ಲಿ ಇದೇ ವಿಷಯವನ್ನು ತಿಳಿಸಿದ್ದಾರೆ.

### ಉಪನಿಷತ್

**ಅತಃ ಸಮುದ್ರಾ ಗಿರಯಶ್ಚ ಸರ್ವೇ**
**ಅಸ್ಮಾತ್ಸ್ಯಂದಂತೇ ಸಿಂಧವಃ ಸರ್ವರೂಪಾಃ ।**
**ಅತಶ್ಚ ಸರ್ವಾ ಓಷಧಯೋ ರಸಾಶ್ಚ**
**ಯೇನೈಷ ಭೂತೈಸ್ತಿಷ್ಠತೇ ಹ್ಯಂತರಾತ್ಮಾ ॥೩. ೯॥**

**ಉಪನಿಷದರ್ಥ-** ಈ ಪರಮಾತ್ಮನಿಂದಲೇ ಎಲ್ಲ ಸಮುದ್ರಗಳು ನದಿಗಳು, ಪರ್ವತಗಳು ಜನಿಸುತ್ತವೆ. ಈ ಪರಮಾತ್ಮನ ಪ್ರೇರಣೆಯಿಂದಲೇ ಗಂಗಾದಿನದಿಗಳು ಎಲ್ಲದಿಕ್ಕುಗಳಿಗೆ ಹರಿಯುತ್ತವೆ. ಎಲ್ಲವಿಧವಾದ ಧಾನ್ಯಗಳು ಮತ್ತು ರಸಗಳು ಪರಮಾತ್ಮನಿಂದಲೇ ಜನಿಸುತ್ತವೆ. ಈ ಪರಮಾತ್ಮನೇ ಜಗತ್ತಿಗೆ ಕಾರಣರಾದ ಬ್ರಹ್ಮಾದಿದೇವತೆಗಳಲ್ಲಿ ಮತ್ತು ಎಲ್ಲ ವಸ್ತುಗಳಲ್ಲಿ ಅಂತರ್ಯಾಮಿಯಾಗಿದ್ದು ಆ ಕಾರಣಗಳಿಗೆ ಕಾರಣತ್ವವನ್ನು ಕೊಡುತ್ತಾನೆ ಆದ್ದರಿಂದ ದೇವರು ಎಲ್ಲ ಜಗತ್ತಿಗೂ ಕಾರಣನೆನ್ನುವುದು ಸೂಕ್ತವೇ ಆಗಿದೆ.

### ಖಂಡಾರ್ಥ

ಅತಃ ಅಸ್ಮಾತ್ಪುರುಷಾತ್ ಪ್ರಭವಂತೀತ್ಯನುಷಂಗಃ । ಸರ್ವರೂಪಾಃ ಸರ್ವದಿಙ್ಮುಖಾಃ ಸಿಂಧವೋ ನದ್ಯಃ, ಅಸ್ಮಾತ್ಪುರುಷಾತ್ ಸ್ಯಂದಂತೇ ಪ್ರವಹಂತಿ, ರಸಾಶ್ಚ ಪ್ರಭವಂತೀತಿ ಯೋಜ್ಯಮ್ । ಯೇನ ಪುರುಷೇಣ ಯೋಷಿದ್ದ್ವಾರಾ ಸೃಷ್ಟೈಃ ಭೂತೈಃ ಸಹ ಅಂತರಾತ್ಮಾ ಅಂತರ್ಯಾಮಿರೂಪೀ ತಿಷ್ಠತೇ ತಿಷ್ಠತಿ ನ ಪುಮಾನ್ ಏತತ್ಸರ್ವಂ ನನರ್ಜೇತ್ಯರ್ಥಃ ॥೩.೯॥

ಅನುವಾದ- ಅತಃ=ಈ ಪುರುಷನಾಮಕನಾದ ಪರಮಾತ್ಮನಿಂದಲೇ, ಇಲ್ಲಿ ಪ್ರಭವಂತಿ ಎಂಬ ಪದವನ್ನು ಇಟ್ಟುಕೊಳ್ಳಬೇಕು. ಸರ್ವರೂಪಾಃ=ಎಲ್ಲ ದಿಕ್ಕುಗಳಿಗೆ ಮುಖಮಾಡಿದ, ಸಿಂಧವಃ=ನದಿಗಳು, ಈ ಪುರುಷನಿಂದಲೇ ಪ್ರವಹಿಸುತ್ತವೆ. ರಸಗಳು ಕೂಡಾ ಉದ್ಭವಿಸುತ್ತವೆ ಎಂದು ತಿಳಿಯಬೇಕು. ರಮಾದೇವಿಯ ದ್ವಾರಾ ಪುರುಷನಾಮಕನಾದ ಪರಮಾತ್ಮನು ಯಾವ ಭೂತಗಳನ್ನು ಸೃಷ್ಟಿಸಿದ್ದಾನೋ ಆ ಭೂತಗಳಿಗೆ ಅಂತರ್ಯಾಮಿಯಾಗಿ ಅವುಗಳೊಡನೆ ಭಗವಂತ ಇರುತ್ತಾನೆ. ಭಗವಂತನೇ ಈ ಎಲ್ಲ ಪ್ರಪಂಚವನ್ನು ಸೃಷ್ಟಿಸಿದ್ದಾನೆ.

**ಉಪನಿಷತ್**

**ಪುರುಷ ಏವೇದಂ ವಿಶ್ವಂ ಕರ್ಮ ತಪೋ ಬ್ರಹ್ಮ ಪರಾಮೃತಮ್ ।**
**ಏತದ್ ಯೋ ವೇದ ನಿಹಿತಂ ಗುಹಾಯಾಂ**
**ಸೋಽವಿದ್ಯಾಗ್ರಂಥಿಂ ವಿಕಿರತಿ ಹ ಸೋಮ್ಯ ॥೨.೧೦॥**

**॥ ಇತಿ ತೃತೀಯಃ ಖಂಡಃ ॥**

ಉಪನಿಷದರ್ಥ- ದೇವರು ಮಾಡುವ ಜಗತ್ಸರ್ಜನಾದಿರೂಪವಾದ ಕ್ರಿಯೆಗಳು, ದೇವರ ಜ್ಞಾನಾನಂದವೇ ಮೊದಲಾದ ಗುಣಗಳೆಲ್ಲವೂ ಮುಕ್ತನಿಯಾಮಕನಾದ, ದೇಹನಾಶಾದಿಗಳಿಂದ ರಹಿತನಾದ, ಗುಣಗಳಿಂದ ಪರಿಪೂರ್ಣನಾದ ಪರಮಾತ್ಮನಿಂದ ಅಭಿನ್ನವೇ ಆಗಿರುತ್ತವೆ. ಹೀಗೆ ಗುಣಗಳಿಂದ, ಧರ್ಮಗಳಿಂದ, ಕ್ರಿಯೆಗಳಿಂದ ಅತ್ಯಂತ ಅಭಿನ್ನನಾದ ಪರಮಾತ್ಮನನ್ನು ಯಾರು ತಮ್ಮ ಹೃದಯಗುಹಾದಲ್ಲಿ ಅಪರೋಕ್ಷತಃ ನೋಡುತ್ತಾರೋ ಅವರು ಲಿಂಗಶರೀರವನ್ನು ಪರಿತ್ಯಜಿಸಿ ಮುಕ್ತರಾಗುತ್ತಾರೆ. ಈ ವಿಷಯವು 'ಭಿದ್ಯತೇ ಹೃದಯಗ್ರಂಥಿಃ' ಎಂಬ ಪ್ರಮಾಣಗಳಿಂದ ಸಿದ್ಧವಾಗಿದೆ.

## ಭಾಷ್ಯ

**ಭಗವತಃ ಕರ್ಮ ಚೇಷ್ಟಾ ತಪೋ ಜ್ಞಾನಂ ಚ ಪರಾಮೃತಬ್ರಹ್ಮಾಖ್ಯ**
**ಪುರುಷೋ ಭಗವಾನೇವ ।**
**ಯ್ರೈಷಾ ಚೇಷ್ಟಾ ಭಗವತೋ ಯಚ್ಚ ಜ್ಞಾನಂ ಪರಾತ್ಮನಃ ।**
**ತತ್ಸರ್ವಂ ಭಗವಾನೇವ ಯೇ ಚ ಧರ್ಮಾಃ ಬಲಾದಯಃ ॥ ಇತಿ ಚ ॥**
**'ಸ್ವಾಭಾವಿಕೀ ಜ್ಞಾನಬಲಕ್ರಿಯಾ ಚ' ಇತಿ ಶ್ರುತಿಃ ।**

**ಭಾಷ್ಯಾರ್ಥ-** ಸರ್ವೋತ್ತಮನಾದ ಭಗವಂತನ ಕ್ರಿಯಾ, ಜ್ಞಾನ, ಧರ್ಮಗಳು, ಬಲ ಮೊದಲಾದವುಗಳು ಭಗವಂತನಿಂದ ಅಭಿನ್ನವೇ ಆಗಿವೆ. ಎಂದು ಸ್ಮೃತಿಯು ತಿಳಿಸುತ್ತದೆ.

ಭಗವಂತನ ಜ್ಞಾನ, ಬಲ, ಕ್ರಿಯಾ ಇವುಗಳು ದೇವರ ಸ್ವರೂಪವೇ ಆಗಿವೆ ಎಂದು ಶ್ರುತಿಯೂ ತಿಳಿಸುತ್ತದೆ.

## ಖಂಡಾರ್ಥ

ತಪಸಾ ಜ್ಞಾನೇನ ಚೇಯತೇ ಸಂಬದ್ಧ್ಯತ ಇತ್ಯತ್ರ ಬ್ರಹ್ಮಣೋ ಜ್ಞಾನಸ್ಯ ಚ ಭೇದಃ ಪ್ರತೀಯತೇ । 'ಅಕ್ಷರಾತ್ಸಂಭವತೀಹ ವಿಶ್ವಮ್' ಇತ್ಯನೇನೋಕ್ತ-ಸೃಷ್ಟಿಕ್ರಿಯಯಾ ತದಾಕ್ಷಿಪ್ತಬಲಾದಿನಾ ಚ ಲೋಕ ಇವ ಭೇದಃ ಪ್ರತೀಯತೇ । ತಾಂ ಭೇದಪ್ರತೀತಿಂ ನಿವಾರಯನ್ ಭಗವದಭೇದಂ ಜ್ಞಾನಾದೇರಾಹ-**ಪುರುಷ ಏವೇತ್ಯಾದಿನಾ ॥** ಕರ್ಮ ಸೃಷ್ಟಿಕ್ರಿಯಾ । ತಪೋ ಜ್ಞಾನಮ್ । ಉಪಲಕ್ಷಣಮೇತತ್ ದ್ಯುತಿಬಲಾದೇರ್ಧರ್ಮಜಾತಸ್ಯ । ತದಾ ಚ ಕರ್ಮತಪಃಪ್ರಭೃತೀದಂ ವಿಶ್ವಂ ಸರ್ವಂ ಧರ್ಮಜಾತಂ ಪರಾಽಮೃತಂ ಪರಾಽಮೃತಾಖ್ಯೋ ಬ್ರಹ್ಮಶಬ್ದಿತಃ ಪುರುಷ ಏವ ಭಗವಾನೇವ, ನತು ಧರ್ಮಧರ್ಮಿಣೋಃ ಭೇದೋ ಭಗವತಿ ಮಂತವ್ಯ ಇತಿ । ತದಾಽಹ ಸೂತ್ರಂ 'ಪ್ರತಿಷೇಧಾಚ್ಚ' ಇತಿ । 'ಏಕಮೇವಾಽದ್ವಿತೀಯಂ' 'ನೇಹ ನಾನಾಽಸ್ತಿ ಕಿಂಚನ' ಇತಿ ಭೇದಸ್ಯ ನಿಷೇಧಾದಿತ್ಯರ್ಥಃ । ಏತಜ್ಜ್ಞಾನಿನಃ ಫಲಮಾಹ-**ಏತದ್ಯೋ ವೇದೇತಿ ॥** ಏತತ್ ಸ್ವಸ್ಯ ತ್ಯಾದಿಗುಣೈಃ ಸವಿಶೇಷಾಽಭಿನ್ನತಯಾ ವಿಶಿಷ್ಟಂ, ಸರ್ವಪ್ರಾಣಿಹೃದಯಗುಹಾಯಾಂ ನಿಹಿತಂ ಬ್ರಹ್ಮ ಯೋಽಧಿಕಾರೀ

ವೇದ ಸಃ ಅವಿದ್ಯಾಗ್ರಂಥಿಂ ಪ್ರಕೃತಿಬಂಧಂ ವಿಕಿರತಿ ಕ್ಷಿಪತೇ, ವಿಕ್ಷಿಪತಿ ನಿರಸ್ಯತಿ, ಮುಕ್ತೋ ಭವತೀತ್ಯರ್ಥ: । ಸೋಮ್ಯ ಸೋಮಪಾನಾರ್ಹೇತಿ ಶೌನಕಸಂಬೋಧನಮ್ । ಹೇತಿ ಹರ್ಷೇ ॥೨.೧೦॥

## ॥ ಇತಿ ತೃತೀಯಖಂಡಭಾಷ್ಯಾರ್ಥ: ॥

**ಅನುವಾದ-** ಭಗವಂತ ಜ್ಞಾನದಿಂದ ಸಂಬದ್ಧನಾಗುತ್ತಾನೆ ಎಂದು ಹೇಳಿದಾಗ ಭಗವಂತನೂ ಅವನ ಜ್ಞಾನವೂ ಭಿನ್ನವೆಂದು ತೋರುತ್ತದೆ. 'ಅಕ್ಷಾತ್ ಸಂಭವತೀಹ ವಿಶ್ವಂ' ಎಂಬ ಮಾತಿನಿಂದ ದೇವರಿಗೂ ದೇವರ ಸೃಷ್ಟಿಕ್ರಿಯಾಕ್ಕೂ ಆ ಕ್ರಿಯಾದಿಂದ ಆಕ್ಷಿಪ್ತವಾದ ಬಲಕ್ಕೂ ಭೇದವಿದೆ ಎಂದು ತೋರುತ್ತದೆ. ಈ ಭೇದಪ್ರತೀತಿಯನ್ನು ನಿವಾರಿಸುತ್ತಾ ಜ್ಞಾನಾದಿಗಳು ಭಗವಂತನಿಂದ ಅಭಿನ್ನವೆಂಬುದನ್ನು 'ಪುರುಷ ಏವ...' ಎಂಬ ಮಂತ್ರವು ತಿಳಿಸುತ್ತದೆ.

ಕರ್ಮ=ಸೃಷ್ಟಿಕ್ರಿಯೆಯು, ತಪಃ=ಜ್ಞಾನವು, ದ್ಯುತಿ-ಬಲ ಮೊದಲಾದ ಗುಣಗಳನ್ನು ಉಪಲಕ್ಷಣಯಾ ತೆಗೆದುಕೊಳ್ಳಬೇಕು. ಕರ್ಮ ತಪಸ್ಸು ಮೊದಲಾದ ಈ ಎಲ್ಲ ಧರ್ಮಗಳು ಪರಾಮೃತನಾಮಕವಾದ ಬ್ರಹ್ಮವೇ ಆಗಿದೆ. ಭಗವಂತನಲ್ಲಿ ಧರ್ಮಧರ್ಮಿಭೇದವನ್ನು ಸರ್ವಥಾ ತಿಳಿಯಬಾರದು. 'ಪ್ರತಿಷೇಧಾಚ್ಚ'(ಬ್ರ.ಸೂ.೩.೨.೩೧)**'ನೇಹ ನಾನಾಽಸ್ತಿ ಕಿಂಚನ ಮೊದಲಾದ ಶ್ರುತಿಗಳಲ್ಲಿ ಪರಬ್ರಹ್ಮನಿಗೂ ಅವನ ಗುಣಗಳಿಗೂ ಭೇದವನ್ನು ನಿರಾಕರಿಸಿದ್ದಾರೆ. ಆದ್ದರಿಂದ ಗುಣಗುಣಿಗಳಲ್ಲಿ ಭೇದವಿಲ್ಲ. ಅಭೇದವೇ ಇದೆ'** ಎಂಬ ಸೂತ್ರವು ಇದೇ ವಿಷಯವನ್ನು ತಿಳಿಸುತ್ತದೆ. 'ಏಕಮೇವಾಽದ್ವಿತೀಯಂ' 'ನೇಹ ನಾನಾಽಸ್ತಿ ಕಿಂಚನ' ಎಂಬ ಶ್ರುತಿಗಳು ಭಗವಂತನ ಧರ್ಮಗಳಿಗೂ ದೇವರಿಗೂ ಭೇದವನ್ನು ನಿಷೇಧಿಸುತ್ತವೆ. ಹೀಗೆ ತಿಳಿದವರಿಗೆ ಆಗುವ ಫಲವನ್ನು 'ಏತದ್ಯೋ ವೇತ್ತಿ' ಎಂಬ ವಚನವು ತಿಳಿಸುತ್ತದೆ. ಸ್ರಷ್ಟೃತ್ವಾದಿಗುಣಗಳಿಂದ ಸವಿಶೇಷಾಭಿನ್ನನಾದ ಭಗವಂತ ಎಲ್ಲ ಪ್ರಾಣಿಗಳ ಹೃದಯಗುಹಾದಲ್ಲಿ ನಿಹಿತನಾಗಿದ್ದಾನೆ ಎಂದು ಯಾವ ಅಧಿಕಾರಿಯು ತಿಳಿಯುತ್ತಾನೋ ಅವನು ಪ್ರಕೃತಿಬಂಧದಿಂದ ಮುಕ್ತನಾಗುತ್ತಾನೆ. ಸೋಮ್ಯ ಸೋಮಪಾನಾರ್ಹನೇ ಎಂದು ಶೌನಕರನ್ನು ಸಂಬೋಧಿಸುತ್ತಿದ್ದಾರೆ. ಹ ಎಂಬ ಶಬ್ದವು ಹರ್ಷವನ್ನು ಸೂಚಿಸುತ್ತದೆ.

# ॥ ಅಥ ಚತುರ್ಥಃ ಖಂಡಃ ॥

## ಉಪನಿಷತ್

**ಆವಿಃ ಸನ್ನಿಹಿತಂ ಗುಹಾಚರಂ ನಾಮ ಮಹತ್ ಪದಮ್ ।**
**ಅತ್ರೈತತ್ ಸರ್ವಮರ್ಪಿತಮೇಜತ್ ಪ್ರಾಣನ್ನಿಮಿಷಚ್ಚ ಯತ್ ॥೪.೧॥**

**ಉಪನಿಷದರ್ಥ-** ಪರಮಾತ್ಮನು ನಿತ್ಯಾಭಿವ್ಯಕ್ತಸ್ವರೂಪನಾಗಿದ್ದಾನೆ. ವ್ಯಾಪ್ತನಾಗಿರುವುದರಿಂದ ಎಲ್ಲಕಡೆಗೂ ಸನ್ನಿಹಿತನಾಗಿದ್ದಾನೆ. ಸಾಧಕರಾದ ಬ್ರಹ್ಮಾದಿಗಳ ಹೃದಯಗುಹಾದಲ್ಲಿ ಸ್ವೇಚ್ಛೆಯಿಂದಲೇ ಇರುತ್ತಾನೆ. ಪಡೆಯಬೇಕಾದವುಗಳಲ್ಲಿ ಭಗವಂತನೇ ಅತ್ಯುತ್ತಮನಾಗಿದ್ದಾನೆ. ಸಾಮಾನ್ಯವಾದ ಚೇಷ್ಟೆಯುಳ್ಳ, ವಿಶೇಷವಾಗಿ ವ್ಯಾಪಾರಮಾಡುವ, ಕಣ್ಣು ಮುಚ್ಚಿರುವ, ಜಾಗ್ರತ್-ಸ್ವಪ್ನ-ಸುಷುಪ್ತ್ಯವಸ್ಥೆಯಲ್ಲಿರು ಎಲ್ಲ ಪ್ರಪಂಚವೂ ಈ ಪರಮಾತ್ಮನನ್ನೇ ಆಶ್ರಯಿಸಿಕೊಂಡಿವೆ. ಎಲ್ಲ ಪ್ರಪಂಚಕ್ಕೂ ದೇವರೇ ಆಧಾರನಾಗಿದ್ದಾನೆ. ಈ ಪ್ರಮೇಯಗಳೆಲ್ಲವೂ ಪ್ರಮಾಣಪ್ರಸಿದ್ಧವಾಗಿವೆ. ॥

## ಖಂಡಾರ್ಥ-

ಪುನರ್ಭಗವತೋ ಮಹಿಮಾಂತರಮುಪದಿಷ್ಟವಾನಂಗಿರಾಃ ಶೌನಕಂ ಪ್ರತೀತ್ಯಾಹ ವೇದಪುರುಷಃ- **ಆವಿರಿತ್ಯಾದಿನಾ ॥ ಆವಿಃ** ನಿತ್ಯಾಭಿವ್ಯಕ್ತಸ್ವರೂಪಮ್ । ವ್ಯಾಪ್ತತ್ವಾತ್ಸರ್ವಸನ್ನಿಹಿತಮ್ । ಗುಹಾಚರಂ ಹೃದಯಗುಹಾಯಾಂ ಚರತೀತಿ ಗುಹಾಚರಮ್ । ಪದ್ಯತೇ ಪ್ರಾಪ್ಯತ ಇತಿ ಪದಮ್ । ಮಹದುತ್ತಮಂ ಪ್ರಾಪ್ಯಂ ನಾಮ ಪ್ರಸಿದ್ಧಮ್, ಉಕ್ತಗುಣತ್ವೇನ ಪ್ರಸಿದ್ಧಮಿತ್ಯರ್ಥಃ । ಅತ್ರ ಆವಿರಾದಿಗುಣಯುಕ್ತೇ ಭಗವತಿ ಏತತ್ಸರ್ವಮರ್ಪಿತಂ ಆಶ್ರಿತಮ್ । ತತ್ಸರ್ವಂ ಕಿಮಿತ್ಯತ ಆಹ- **ಏಜದಿತಿ ॥** ಏಜೃ ಕಂಪನೇ, ನಾಮಾನ್ಯ-ಚೇಷ್ಟೋಪೇತಮ್ । ಪ್ರಾಣತ್ ವಿಶೇಷಚೇಷ್ಟಾಯುಕ್ತಮ್ । ನಿಮಿಷತ್ ಚಕ್ಷುಷೀ ನಿಮೀಲ್ಯ ಸ್ಥಿತಮ್, ಜಾಗ್ರತ್ಸ್ವಪ್ನಸುಷುಪ್ತ್ಯಾದ್ಯವಸ್ಥೋಪೇತಂ, ಯದೇತತ್ ಜಗತ್ ಜಾನಥ ಜಾನಾಸಿ ತತ್ತತ್ಸರ್ವಮತ್ರಾರ್ಪಿತಮಿತ್ಯರ್ಥಃ ॥೪.೧॥

ಅನುವಾದ- ಅಂಗಿರರು ಶೌನಕರಿಗೆ ಭಗವಂತನ ಮಹಿಮೆಯನ್ನು 'ಆವಿಃ...' ಇತ್ಯಾದಿ ಮಂತ್ರಗಳಿಂದ ಪುನಃ ಉಪದೇಶಿಸಿದರು. ಅದನ್ನು ವೇದಪುರುಷನು ಹೇಳುತ್ತಿದ್ದಾನೆ.

ಆವಿಃ=ನಿತ್ಯವೂ ಅಭಿವ್ಯಕ್ತನಾದ, ಪರಮಾತ್ಮನು ವ್ಯಾಪ್ತನಾಗಿದ್ದಾನೆ ಆದ್ದರಿಂದ ಎಲ್ಲರಲ್ಲಿಯೂ ಸನ್ನಿಹಿತನಾಗಿದ್ದಾನೆ. ಗುಹಾಚರವ್= ಹೃದಯಗುಹಾದಲ್ಲಿ ಸಂಚರಿಸುವ, ಪದಮ್=ಪ್ರಾಪ್ಯನಾದ, ಮಹತ್= ಉತ್ತಮನಾದ, ನಿತ್ಯಾಭಿವ್ಯಕ್ತಿಯೇ ಮೊದಲಾದ ಗುಣಗಳಿಂದ ವಿಶಿಷ್ಟನಾದ ಪರಮಾತ್ಮನಲ್ಲಿ ಎಲ್ಲ ಪದಾರ್ಥಗಳೂ ಆಶ್ರಿತವಾಗಿವೆ. ಯಾವ ಯಾವ ಪದಾರ್ಥಗಳು ಆಶ್ರಿತವಾಗಿವೆ ಎಂಬುದನ್ನು ಏಜತ್ ಎಂಬ ಮಾತಿನಿಂದ ತಿಳಿಸುತ್ತಾರೆ. ಸಾಮಾನ್ಯವಾದ ಚೇಷ್ಟೆಗಳನ್ನು ಮಾಡುವ, ವಿಶೇಷವಾದ ಚೇಷ್ಟೆಗಳನ್ನು ಮಾಡುವ, ಕಣ್ಣು ಮುಚ್ಚಿ ಇರುವ, ಜಾಗ್ರತ್-ಸ್ವಪ್ನ-ಸುಷುಪ್ತಿಯೇ ಮೊದಲಾದ ಅವಸ್ಥೆಗಳಿಂದ ಯುಕ್ತವಾದ, ಈ ಎಲ್ಲ ಜಗತ್ತನ್ನು ನೀನು ಏನು ತಿಳಿದಿರುವೆಯೋ ಅದೆಲ್ಲವೂ ಆ ಭಗವಂತನಲ್ಲಿ ಆಶ್ರಿತವಾಗಿದೆ ಎಂದು ಅರ್ಥ.

### ಉಪನಿಷತ್

**ಏತಜ್ಜಾನಥ ಸದಸದ್ವರೇಣ್ಯಂ ಪರಂ ವಿಜ್ಞಾನಾದ್ ಯದ್ವರಿಷ್ಠಂ ಪ್ರಜಾನಾಮ್ । ಯದರ್ಚಿಮದ್ ಯದಣುಭ್ಯೋಽಣು ಚ ಯಸ್ಮಿನ್ ಲೋಕಾ ನಿಹಿತಾ ಲೋಕಿನಶ್ಚ ತದೇತದಕ್ಷರಂ ಬ್ರಹ್ಮ ॥೪.೨॥**

**ಉಪನಿಷದರ್ಥ-** ಪರಮಾತ್ಮ ಮೂರ್ತಾಮೂರ್ತವಾದ ಪ್ರಪಂಚಕ್ಕಿಂತಲೂ ಶ್ರೇಷ್ಠನಾಗಿದ್ದಾನೆ. ಮೂರ್ತಾಮೂರ್ತಪ್ರಪಂಚಕ್ಕೆ ಅಭಿಮಾನಿಗಳಾದ ದೇವತೆಗಳಿಂದ ವರಣೀಯನಾಗಿದ್ದಾನೆ. ವಿಜ್ಞಾನಶಬ್ದವಾಚ್ಯರಾದ ಚತುರ್ಮುಖಬ್ರಹ್ಮದೇವರಿಗಿಂತಲೂ ಉತ್ತಮನಾಗಿದ್ದಾನೆ. ಎಲ್ಲ ಪ್ರಜೆಗಳಿಗಿಂತಲೂ ಅತ್ಯುತ್ತಮನಾಗಿದ್ದಾನೆ. ಕಾಂತಿಯಿಂದ ಸಂಪನ್ನನಾಗಿದ್ದಾನೆ. ಅಣುವಾದ ಪದಾರ್ಥಗಳಿಗಿಂತಲೂ ಅಣುವಾಗಿದ್ದಾನೆ. ಭಗವಂತನಲ್ಲಿಯೇ

ಲೋಕಗಳು, ಲೋಕಾಭಿಮಾನಿಗಳಾದ ದೇವತೆಗಳು ಆಯಾ ಲೋಕದಲ್ಲಿರುವ ಜನರು ಆಶ್ರಯಿಸಿಕೊಂಡು ಇದ್ದಾರೆ. ಇಂತಹ ಗುಣಗಳಿಂದ ಯುಕ್ತನಾದ ಪರಮಾತ್ಮನನ್ನು ನೀವೆಲ್ಲರೂ ತಿಳಿಯಿರಿ.

### ಭಾಷ್ಯ

**ವಿಜ್ಞಾನಾದ್ ಬ್ರಹ್ಮಣಃ ಪರಮ್ । 'ನಾಭಿಹ್ರದಾದಿಹ ಸತೋಽಂಭಸಿ ಯಸ್ಯ ಪುಂಸೋ ವಿಜ್ಞಾನಶಕ್ತಿರಹಮಾಸಮನಂತಶಕ್ತೇಃ' ಇತಿ ಭಾಗವತೇ ।**

ಭಾಷ್ಯಾರ್ಥ- ವಿಜ್ಞಾನ ಎಂದರೇ ಬ್ರಹ್ಮದೇವರು ಎಂದು ಅರ್ಥ. ವಿಜ್ಞಾನಕ್ಕಿಂತಲೂ ಪರಮಾತ್ಮ ಉತ್ತಮನಾಗಿದ್ದಾನೆ ಎಂದು ಅರ್ಥವನ್ನು ತಿಳಿಯಬೇಕು.

ಪ್ರಲಯೋದಕಶಾಯಿಯಾದ ಅನಂತವಾದ ಶಕ್ತಿ ಉಳ್ಳ ಪರಮಾತ್ಮನ ನಾಭಿಸರೋವರದಿಂದ ವಿಜ್ಞಾನಶಬ್ದವಾಚ್ಯವಾದ ಮಹತ್ತತ್ತ್ವವನ್ನು ಪ್ರೇರಿಸುವ ಶಕ್ತಿ ಉಳ್ಳವನಾಗಿ ನಾನು ಜನಿಸಿದೆನು. ಎಂದು ಬ್ರಹ್ಮದೇವರು ಭಾಗವತದಲ್ಲಿ ಸ್ವಯಂ ಹೇಳಿಕೊಂಡಿದ್ದಾರೆ. ಹೀಗಾಗಿ ವಿಜ್ಞಾನವೆಂದರೇ ಬ್ರಹ್ಮದೇವರು ಎಂಬ ಅರ್ಥವು ಪ್ರಕೃತ ಸ್ವರಸವಾಗುತ್ತದೆ.

### ಖಂಡಾರ್ಥ

ಪುನಃ ಕಿಂ ರೂಪಂ ಬ್ರಹ್ಮೇತ್ಯತ ಆಹ- **ಸದಸದಿತಿ** ॥ ತದಕ್ಷರಂ ಸದಸದ್ಭ್ಯಾಂ ಮೂರ್ತಾಮೂರ್ತಾಭ್ಯಾಂ, ಕಾರ್ಯಕಾರಣಾಭ್ಯಾಂ ವಾ ವರೇಣ್ಯಂ ಶ್ರೇಷ್ಠಂ, ವೃಞ ಏಣ್ಯಪ್ರತ್ಯಯಃ । ವಿಜ್ಞಾನಾಚ್ಚತುರ್ಮುಖಾತ್ ಪರಮುತ್ತಮಂ, 'ವಿಜ್ಞಾನಶಕ್ತಿರಹಮಾಸಮನಂತಶಕ್ತೇಃ' ಇತ್ಯಾದೇಃ । ಪ್ರಜಾನಾಂ ವರಿಷ್ಠಂ ಶ್ರೇಷ್ಠಮ್ । ಯದರ್ಚಿಮತ್ ಅರ್ಚಿಷ್ಮತ್, ಯಚ್ಚ ಅಣುಭ್ಯೋಽಣು ಚ, ಯಸ್ಮಿನ್ ಲೋಕಾ ಲೋಕಿನೋ ಲೋಕಸ್ಥಾ ಜನಾ ಲೋಕಾಭಿಮಾನಿನೋ ವಾ ನಿಹಿತಾಃ ತದೇತದುಕ್ತಗುಣವಿಶಿಷ್ಟಂ ಅಕ್ಷರಂ ಬ್ರಹ್ಮೇತ್ಯರ್ಥಃ ॥೪.೨॥

**ಅನುವಾದ-** ಭಗವಂತ ಮತ್ತೆ ಹೇಗಿದ್ದಾನೆ ಎಂಬುದನ್ನು 'ಸದಸತ್...' ಎಂಬ ಮಂತ್ರದಿಂದ ಹೇಳುತ್ತಿದಾರೆ.

ತದಕ್ಷರಂ=ಅಕ್ಷರನಾಮಕನಾದ ಆ ಪರಮಾತ್ಮನು, ಸದಸದ್ವಾ್ಯಮ್= ಮೂರ್ತಾಮೂರ್ತಪದಾರ್ಥಗಳಿಗಿಂತಲೂ, ಕಾರ್ಯಕಾರಣಪದಾರ್ಥ-ಗಳಿಗಿಂತಲೂ, ವರೇಣ್ಯಮ್= ಉತ್ತಮನಾಗಿದ್ದಾನೆ. ವೃಞ ಎಂಬ ಧಾತುವಿಗೆ ಏಣ್ಯ ಪ್ರತ್ಯಯವು ಬಂದಾಗ ವರೇಣ್ಯ ಎಂಬ ರೂಪವು ಆಗುತ್ತದೆ. ವಿಜ್ಞಾನಾತ್=ಚತುರ್ಮುಖನಿಗಿಂತಲೂ, ಪರಮ್= ಉತ್ತಮನಾಗಿದ್ದಾನೆ, ವಿಜ್ಞಾನಶಕ್ತಿರಹಮಾಸಮನಂತಶಕ್ತೇಃ ಎಂಬಲ್ಲಿ ಇದೇ ವಿಷಯವನ್ನು ತಿಳಿಸಿದ್ದಾರೆ. ಪ್ರಜಾನಾಂ ವರಿಷ್ಠಮ್=ಪ್ರಜೆಗಳಿಗಿಂತಲೂ ಶ್ರೇಷ್ಠನಾಗಿದ್ದಾನೆ. ಯಾವುದು ಕಾಂತಿ ಉಳ್ಳದ್ದಾಗಿದೆಯೋ, ಯಾವುದು ಅಣುವಿಗಿಂತಲೂ ಅಣುವಾಗಿದೆಯೋ, ಯಾವನಲ್ಲಿ ಲೋಕಗಳು, ಲೋಕದಲ್ಲಿರುವ ಪ್ರಜೆಗಳು ಆಶ್ರಿತರಾಗಿರುವರೋ ಆ ಪರಮಾತ್ಮನೇ ಉಕ್ತಗುಣಗಳಿಂದ ಯುಕ್ತನಾದ ಅಕ್ಷರನಾಗಿದ್ದಾನೆ ಎಂದು ತಿಳಿಯಬೇಕು. ॥೪.೨॥

### ಉಪನಿಷತ್

**ತದೇತದಕ್ಷರಂ ಬ್ರಹ್ಮ ಸ ಪ್ರಾಣಸ್ತದು ವಾಙ್ಮನಃ ತದೇತತ್ಸತ್ಯಂ**
**ತದಮೃತಂ ಬ್ರಹ್ಮ ವೇದ್ಧವ್ಯಂ ಸೋಮ್ಯ ವಿದ್ಧಿ ॥೪.೩॥**

**ಉಪನಿಷದರ್ಥ-** ಮುಖ್ಯಪ್ರಾಣಾಂತರ್ಯಾಮಿಯಾದ ರೂಪದಿಂದ ಚರಾಚರಪ್ರಪಂಚಕ್ಕೆ ಪ್ರೇರಕನಾದುದರಿಂದ ಪ್ರಾಣನಾಮಕನಾಗಿದ್ದಾನೆ. ಅನಂತವಾದ ವೇದಗಳ ಅಭಿವ್ಯಕ್ತಿಗೆ ಕಾರಣನಾದುದರಿಂದ ವಾಕ್ ಎನಿಸಿದ್ದಾನೆ. ಸರ್ವಜ್ಞಾನಸಂಪನ್ನನಾದದ್ದರಿಂದ ಮನಃ ಎನಿಸಿದ್ದಾನೆ. ಸಜ್ಜನರಿಂದ ಪ್ರಾಪ್ಯನಾದುದರಿಂದ ಅಪರಾಧೀನವಾದ ಸ್ವರೂಪ ಉಳ್ಳವನಾದದ್ದರಿಂದ, ಮುಕ್ತಾಮುಕ್ತನಿಯಾಮಕನಾದುದರಿಂದ ಸತ್ಯನಾಮಕನಾಗಿದ್ದಾನೆ. ಮರಣರಹಿತನಾಗಿದ್ದಾನೆ. ನಿತ್ಯಮುಕ್ತನಾಗಿದ್ದಾನೆ. ಸೋಮಪಾನಾರ್ಹನಾದ ಹೇ ಶೌನಕನೇ ಏಕಾಗ್ರಬುದ್ಧಿಯಿಂದ ಯುಕ್ತನಾದ ಬಿಲ್ಲುಗಾರನು ಲಕ್ಷ್ಯವನ್ನು ಹೇಗೆ ಭೇದಿಸುವನೋ ಹಾಗೆ ಏಕಾಗ್ರಚಿತ್ತದಿಂದ ಈ ಪರಮಾತ್ಮನನ್ನು ಮನನಮಾಡಬೇಕೆಂದು ತಿಳಿ.

### ಭಾಷ್ಯ

**ಪ್ರಾಣಃ ಪ್ರಣಯನಾದ್ವಿಷ್ಣುಃ ವಕ್ತೃತ್ವಾದ್ವಾಗುದೀರಿತಃ ।**
**ಮನೋ ಮಂತೃತ್ವತೋ ವಿಷ್ಣುಃ ಸರ್ವಜೀವನಿಯಾಮಕಃ ॥**
**ಇತಿ ಶಬ್ದನಿರ್ಣಯೇ ॥**

ಭಾಷ್ಯಾರ್ಥ- ಪ್ರಣಯನ ಅಂದರೇ ಪ್ರೇರಣೆ ಎಂದು ಅರ್ಥ. ಎಲ್ಲವನ್ನೂ ಪ್ರೇರಿಸುತ್ತಾನೆ ಆದುದರಿಂದ ಸರ್ವಜೀವನಿಯಾಮಕನಾದ, ಮುಖ್ಯಪ್ರಾಣಾಂತರ್ಯಾಮಿಯಾದ ಪರಮಾತ್ಮನ ರೂಪವು ಪ್ರಾಣನಾಮಕ-ವಾಗಿದೆ. ವಕ್ತೃವಾದದ್ದರಿಂದ (ವೇದಾದಿವಿದ್ಯೆಗಳನ್ನು ಉಪದೇಶಿಸುತ್ತಾನೆ) ವಾಗಭಿಮಾನಿಯಾದ ಪರಮಾತ್ಮನ ರೂಪವು ವಾಕ್‌ಶಬ್ದವಾಚ್ಯವಾಗಿದೆ. ಮಂತೃವಾಗಿದ್ದಾನೆ (ಎಲ್ಲವನ್ನು ತಿಳಿಯುತ್ತಾನೆ) ಆದ್ದರಿಂದ ಮನೋಽಭಿಮಾನಿದೇವತಾಂತರ್ಯಾಮಿಯಾದ ಪರಮಾತ್ಮನ ರೂಪವು ಮಂತೃನಾಮಕವಾಗಿದೆ. ಹೀಗೆ ಶಬ್ದನಿರ್ಣಯವು ಹೇಳುತ್ತದೆ.

### ಖಂಡಾರ್ಥ

**ಮಹಿಮಾಂತರಮಾಹ- ಸ ಪ್ರಾಣ ಇತಿ ॥ ಪ್ರಾಣ ಇತಿ ವಿಧೇಯಾಪೇಕ್ಷಯಾ ಸ ಇತಿ ಪುಲ್ಲಿಂಗನಿರ್ದೇಶಃ । ಪ್ರಕರ್ಷೇಣ ಅನತಿ ಚೇಷ್ಟತೇ, ಜಗತ್ ಪ್ರೇರಯತೀತಿ ಪ್ರಾಣಃ । ತದಕ್ಷರಂ ವಕ್ತಿ ಸಮಸ್ತವೇದಾನಿತ್ಯೇವ ವಾಕ್, ನತು ಪ್ರಸಿದ್ಧವಾಗಾದ್ಯಭೇದಾದಿತ್ಯೇವಕಾರಾರ್ಥ ಉಶಬ್ದಃ । ತದಕ್ಷರಂ ಮನುತೇ ಸರ್ವಮಿತಿ ಮನಃ । ತದೇತದಕ್ಷರಂ ಸತ್ಯಂ ಅವರಾಧೀನಸ್ವರೂಪಮ್ । ಷದ್ಲೃ ವಿಶರಣೇ ಇತಿ ಧಾತೋಃ ಸತಃ ಶರೀರತೋ ವಿಶರಣಶೀಲಾನ್ ಜೀವಾನ್ ಯಮಯತಿ ನಿಯಮಯತೀತಿ ವಾ ಸತ್ಯಂ ತದಮೃತಂ ದೇಹತೋಽಪಿ ನಾಶರಹಿತಂ, ಹೇ ಸೋಮ್ಯ ॥೪.೩॥**

ಅನುವಾದ- ಭಗವಂತನ ಮತ್ತೊಂದು ಮಹಿಮೆಯನ್ನು 'ಸ ಪ್ರಾಣಃ...' ಎಂಬ ಮಂತ್ರದಿಂದ ಉಪದೇಶಿಸುತ್ತಿದ್ದಾರೆ. ಪ್ರಾಣಃ=ಪ್ರ-ವಿಶಿಷ್ಟವಾದ ರೀತಿಯಲ್ಲಿ, ಅನಿತಿ-ಚೇಷ್ಟೆ ಮಾಡುತ್ತಾನೆ ಆದ್ದರಿಂದ ಪರಮಾತ್ಮ ಪ್ರಾಣನಾಮಕನಾಗಿದ್ದಾನೆ. ಸಮಸ್ತ ಜಗತ್ತನ್ನು ಪ್ರೇರಿಸುತ್ತಾನೆ ಆದ್ದರಿಂದ

ಪರಮಾತ್ಮ ಪ್ರಾಣನಾಮಕನಾಗಿದ್ದಾನೆ. ಆ ಅಕ್ಷರನಾಮಕನಾದ ಪರಮಾತ್ಮನು ಸಮಸ್ತ ವೇದಗಳನ್ನು ಹೇಳುತ್ತಾನಾದ್ದರಿಂದ ವಾಕ್ ನಾಮಕನಾಗಿದ್ದಾನೆ. ಪ್ರಸಿದ್ಧವಾದ ಮಾತಿನಿಂದ ಅಭಿನ್ನನಲ್ಲ ಎಂದು ತಿಳಿಸುವುದಕ್ಕಾಗಿಯೇ ಉ ಶಬ್ದವನ್ನು ಪ್ರಯೋಗಿಸಿದ್ದಾರೆ. ಆ ಅಕ್ಷರನು ಎಲ್ಲವನ್ನೂ ತಿಳಿಯುತ್ತಾನೆ ಆದ್ದರಿಂದ ಮನೋನಾಮಕನಾಗಿದ್ದಾನೆ. ಈ ಅಕ್ಷರನು ಸತ್ಯಮ್=ಅಪರಾಧೀನಸ್ವರೂಪನಾಗಿದ್ದಾನೆ ಅಂದರೇ ಸ್ವತಂತ್ರನಾಗಿದ್ದಾನೆ. ಆದ್ದರಿಂದ ಸತ್ಯಶಬ್ದವಾಚ್ಯನಾಗಿದ್ದಾನೆ. ಸತಃ=ಶರೀರತಃ ಕ್ಷಯವಿರುವ ಜೀವರನ್ನು ಯಮಯತಿ= ನಿಯಮಿಸುತ್ತಾನಾದ್ದರಿಂದಲೂ ಸತ್ಯಶಬ್ದವಾಚ್ಯನಾಗಿದ್ದಾನೆ. ಈ ಪರಮಾತ್ಮನು ಅಮೃತಂ= ದೈಹಿಕವಾಗಿಯೂ ನಾಶರಹಿತನಾಗಿದ್ದಾನೆ. ದೇವರ ದೇಹಕ್ಕೂ ನಾಶವಿಲ್ಲ. ಹೇ ಸೋಮ್ಯ ಎಂದು ಶೌನಕರನ್ನು ಸಂಬೋಧಿಸುತ್ತಿದ್ದಾರೆ. ॥೪.೩॥

**ಉಪನಿಷತ್**

**ಧನುರ್ಗೃಹೀತ್ವೌಪನಿಷದಂ ಮಹಾಸ್ತ್ರಂ**
**ಶರಂ ಹ್ಯುಪಾಸಾನಿಶಿತಂ ಸಂದಧೀತ ।**
**ಆಯಮ್ಯ ತದ್ಭಾವಗತೇನ ಚೇತಸಾ**
**ಲಕ್ಷ್ಯಂ ತದೇವಾಕ್ಷರಂ ಸೋಮ್ಯ ವಿದ್ಧಿ ॥೪.೪॥**

**ಉಪನಿಷದರ್ಥ-** ಸರ್ವವೇದವ್ಯಾಖ್ಯೇಯವಾಗಿರುವ ಪ್ರಣವರೂಪವಾದ ಧನುಸ್ಸನ್ನು ಧರಿಸಿ, ಆ ಬಿಲ್ಲಿನಲ್ಲಿ ಉಪಾಸನೆಯಿಂದ ತೀಕ್ಷ್ಣವಾಗಿರುವ ಮನಸ್ಸೆಂಬ ಬಾಣವನ್ನು ಸಂಧಾನಮಾಡಬೇಕು. ಅನಂತರ ಆ ಬಿಲ್ಲನ್ನು ಕಿವಿಯವರೆಗೆ ಎಳೆದು ಲಕ್ಷ್ಯವನ್ನು ಬಾಣವು ತಲುಪುವಂತೆ ಮಾಡಬೇಕು. ಹಾಗೆಯೇ ಲಕ್ಷ್ಯನಾದ ಭಗವಂತನ ಧ್ಯಾನವನ್ನು ಮಾಡಬೇಕು.

**ಖಂಡಾರ್ಥ**

ಔಪನಿಷದಮುಪನಿಷತ್ಸಂಬಂಧಿ ಪ್ರಣವಾಖ್ಯಂ ಧನುಃ ಗೃಹೀತ್ವಾ ವೇದ್ಧವ್ಯಂ ವೇದನೀಯಂ ತತ್ ಬ್ರಹ್ಮ ವಿದ್ಧಿ ಜಾನೀಹಿ । ಯದಾ ವೇದ್ಧಂ

ಲಕ್ಷ್ಯಂ ವಸ್ತು ಧಾನುಷ್ಕಾ ಧನುರ್ಗೃಹೀತ್ವಾ ಶರೇಣ ವಿಧ್ಯಂತಿ ತಥಾ ತ್ವಮಪಿ ಉಪನಿಷದರ್ಥಭೂತಪ್ರಣವಾರ್ಥಪರ್ಯಾಲೋಚನಯಾ ಮನಸಾ ಬ್ರಹ್ಮ ಸಾವಧಾನಂ ಜಾನೀಹೀತ್ಯರ್ಥ: । ವೇದ್ಧವ್ಯಂ ವಿದ್ಧೀತ್ಯುಕ್ತಮೇವ ವ್ಯನಕ್ತಿ- **ಮಹಾಸ್ತ್ರಮಿತ್ಯಾದಿನಾ** ॥ ಉಪಾಸಾನಿಶಿತಂ ಉಪಾಸಯಾ ತೀಕ್ಷ್ಣೀಕೃತಂ ಶರಂ ಶರವತ್ ಸ್ಥಿತಂ ಮನ: ತ್ವಂ ಸಂದಧೀತ ಸಂದತ್ಸ್ವ ವ್ಯತ್ಯಯಾತ್ । ಸಂಯೋಜಯೇತಿ ಯಾವತ್ । ಸಂಧಾನಮೇವ ವ್ಯಕ್ತಮಾಹ- **ಆಯಮ್ಯೇತಿ** ॥ ತಚ್ಚೇತ: ಸಮಸ್ತವಸ್ತುಭ್ಯೋ ನಿಯಮ್ಯ ನಿವರ್ತ್ಯೇತಿ ಯಾವತ್, ತದ್ಭಾವಗತೇನ ತದೇಕಸಂಬದ್ಧೇನ ಚೇತಸಾ ಲಕ್ಷ್ಯಂ ಲಕ್ಷ್ಯಭೂತಂ ತದೇವಾಽಕ್ಷರಂ ಹೇ ಸೋಮ್ಯ ವಿದ್ಧೀತ್ಯರ್ಥ: ॥ ೪ ॥

**ಅನುವಾದ-** ಔಪನಿಷದಂ=ಉಪನಿಷತ್ಸಂಬಧ್ಧಿಯಾದ, ಓಂಕಾರವೆಂಬ ಧನುಸ್ಸನ್ನು ಸ್ವೀಕರಿಸಿ ಭಗವಂತನನ್ನೇ ಗುರಿಯಾಗಿಟ್ಟುಕೊಂಡು ಅವನನ್ನು ಅರಿಯಬೇಕು. ದೇವರನ್ನು ಧ್ಯಾನಮಾಡಬೇಕು. ಬೇಡರು ಧನುಸ್ಸನ್ನು ಧರಿಸಿ ಬಾಣದಿಂದ ತಮ್ಮ ಲಕ್ಷ್ಯವನ್ನು ಏಕಾಗ್ರಚಿತ್ತದಿಂದ ಭೇದಿಸುತ್ತಾರೋ, ಹಾಗೆ ನೀನು ಕೂಡಾ ಉಪನಿಷತ್ತಿನ ಅರ್ಥವಾಗಿರುವ ಓಂಕಾರದ ಅರ್ಥವನ್ನು ಸರಿಯಾಗಿ ಆಲೋಚಿಸುತ್ತಾ ಸಾವಧಾನವಾಗಿ ಮನಸ್ಸಿನಿಂದ ಪರಮಾತ್ಮನನ್ನು ತಿಳಿ ಎಂದು ತಾತ್ಪರ್ಯ. ವೇದ್ಧವ್ಯಂ ವಿಧ್ಧಿ ಎಂದು ಹೇಳಿದ್ದನ್ನೇ ಹೇಗೆ ಎಂದು ಮಹಾಸ್ತ್ರಂ ಎಂಬ ಮಾತಿನಿಂದ ತಿಳಿಸುತ್ತಿದ್ದಾರೆ. ಉಪಾಸಾನಿಶಿತಮ್= ಉಪಾಸನೆಯಿಂದ ತೀಕ್ಷ್ಣಗೊಳಿಸಿರುವ, ಶರವ್=ಶರದಂತೆ ಇರುವ ಮನಸ್ಸನ್ನು, ನೀನು ಸಂಧಾನಗೊಳಿಸು. ಸಂಯೋಜಿಸು ಎಂದು ಅರ್ಥ. (ಧನುಸ್ಸಿನಲ್ಲಿ ಬಾಣವನ್ನು ಹೂಡುವಂತೆ ಪ್ರಣವದಲ್ಲಿ ಮನಸ್ಸನ್ನು ಸಂಯೋಜಿಸು ಮನಃ ಪೂರ್ವಕವಾಗಿ ಪ್ರಣವವನ್ನು ಚಿಂತಿಸು ಎಂದು ತಾತ್ಪರ್ಯ) ಸಂಧಾನ ಹೇಗೆ ಮಾಡಬೇಕೆಂಬುದನ್ನೇ 'ಆಯಮ್ಯ...' ಎಂಬ ಮಾತಿನಲ್ಲಿ ಸ್ಪಷ್ಟವಾಗಿ ಹೇಳುತ್ತಿದ್ದಾರೆ. ವಿಷಯಗಳಕಡೆಗೆ ಹೋಗದಂತೆ ಮನಸ್ಸನ್ನು ನಿಗ್ರಹಿಸಬೇಕು. ಪ್ರಣವಕ್ಕೆ ಮಾತ್ರ ಮನಸ್ಸು ಸಂಬದ್ಧವಾಗುವಂತೆ ಮಾಡಬೇಕು. ಸೋಮಪಾನಾರ್ಹನಾದ ಹೇ ಶೌನಕನೇ ಪ್ರಣವೈಕಸಂಬದ್ಧವಾದ ಮನಸ್ಸಿನಿಂದ ಲಕ್ಷ್ಯನಾಗಿರುವ ಆ ಅಕ್ಷರನನ್ನೇ ತಿಳಿಯಬೇಕು. ॥೪.೪॥

**ಉಪನಿಷತ್**

**ಪ್ರಣವೋ ಧನುಃ ಶರೋ ಹ್ಯಾತ್ಮಾ ಬ್ರಹ್ಮ ತಲ್ಲಕ್ಷ್ಯಮುಚ್ಯತೇ ।**
**ಅಪ್ರಮತ್ತೇನ ವೇದ್ಧವ್ಯಂ ಶರವತ್ತನ್ಮಯೋ ಭವೇತ್ ॥೪.೫॥**

**ಉಪನಿಷದರ್ಥ-** ಧನುಷ್ಯವಿದು ಲಕ್ಷ್ಯದ ವೇಧಕ್ಕೆ ಸಾಧನವಾಗಿರುತ್ತದೆ. ಲಕ್ಷ್ಯವೇಧಕ್ಕೆ ಸಾಧನವಾದದ್ದರಿಂದ ಓಂಕಾರವೇ ಬಿಲ್ಲು. ಶರವು ಲಕ್ಷ್ಯದಲ್ಲಿ ಸೇರಿಕೊಳ್ಳುತ್ತದೆ. ಹೀಗೆಯೇ ಲಕ್ಷ್ಯನಾದ ಭಗವಂತನಲ್ಲಿ ಆಸಕ್ತವಾಗುವುದರಿಂದ ಮನಸ್ಸು ಶರಸ್ಥಾನೀಯವಾಗಿದೆ. ಶರದಿಂದ ವೇಧನೀಯವದದ್ದೇ ಲಕ್ಷ್ಯ. ಮನಸ್ಸಿನಿಂದ ವೇಧನೀಯನಾಗಿದ್ದಾನೆ ಆದ್ದರಿಂದ ಬ್ರಹ್ಮ ಲಕ್ಷ್ಯನೆನಿಸುತ್ತಾನೆ. ಪ್ರಮಾದರಹಿತವಾದ ಮನಸ್ಸಿನಿಂದ ತನ್ಮಯನಾಗಿ ಬ್ರಹ್ಮನೆಂಬ ಲಕ್ಷ್ಯವನ್ನು ಚಿಂತಿಸಬೇಕು.

**ಖಂಡಾರ್ಥ**

ಕಿಂ ದನುರಾದೀತ್ಯತೋ ವಿವಿಚ್ಯ ದರ್ಶಯತಿ- **ಪ್ರಣವೋ ಧನುರಿತಿ ॥** ಆತ್ಮಾ ಚೇತ: ಶರ: । ತದಕ್ಷರಾಖ್ಯಂ ಬ್ರಹ್ಮೇತ್ಯರ್ಥ: ವೇದ್ದವ್ಯಂ ಬೋದ್ದವ್ಯಮಿತ್ಯರ್ಥ: । **ಶರವದಿತಿ** ॥ ಶರೋ ಯಥಾ ವೇದ್ದವ್ಯಮನುಪ್ರವಿಶತಿ ತಥಾ ಜ್ಞಾನ್ಯಪಿ ತನ್ಮಯ: ತತ್ಪ್ರವಿಷ್ಟೋ ಭವತೀತ್ಯರ್ಥ: ॥೪.೫॥

**ಅನುವಾದ-** ಧನುಸ್ಸು ಯಾವುದು? ಶರ ಯಾವುದು? ಎಂದು ವಿವೇಕಪೂರ್ವಕವಾಗಿ 'ಪ್ರಣವೋ ಧನುಃ...' ಎಂಬ ಮಂತ್ರದಿಂದ ತಿಳಿಸುತ್ತಿದ್ದಾರೆ.

ಆತ್ಮಾ=ಮನಸ್ಸು, ಈ ಮನಸ್ಸೇ ಬಾಣಸ್ಥಾನೀಯವಾಗಿದೆ. ತತ್=ಅಕ್ಷರ-ನಾಮಕನಾಗಿರುವ ಪರಮಾತ್ಮನನ್ನೇ, ವೇದ್ದವ್ಯಮ್=ತಿಳಿಯಬೇಕು ಎಂದು ಅರ್ಥ. ಶರವು ಯಾವ ರೀತಿಯಾಗಿ ಲಕ್ಷ್ಯವಾದ ಪದಾರ್ಥವನ್ನು ಪ್ರವೇಶಿಸುತ್ತದೋ ಹಾಗೆಯೇ ಜ್ಞಾನಿಯಾದವನು ಕೂಡಾ ತನ್ಮಯನಾಗಿ ಭಗವಂತನಲ್ಲಿಯೇ ಪ್ರವೇಶಿಸುತ್ತಾನೆ ಎಂದು ಅರ್ಥ. ॥೪.೫॥

### ಉಪನಿಷತ್

**ಯಸ್ಮಿನ್ ದ್ಯೌಃ ಪೃಥಿವೀ ಚಾಂತರಿಕ್ಷ-**
**ಮೋತಂ ಮನಃ ಸಹ ಪ್ರಾಣೈಶ್ಚ ಸರ್ವೈಃ ।**
**ತಮೇವೈಕಂ ಜಾನಥ ಆತ್ಮಾನ-**
**ಮನ್ಯಾ ವಾಚೋ ವಿಮುಂಚಥಾಽಮೃತಸ್ಯೈಷ ಸೇತುಃ ॥**

**ಉಪನಿಷದರ್ಥ-** ಸ್ವರ್ಗ, ಪೃಥಿವೀ, ಅಂತರಿಕ್ಷಲೋಕಗಳಿಗೆ ಅವನೇ ಆಧಾರನಾಗಿದ್ದಾನೆ. ಚಕ್ಷುರಾದಿ ಇಂದ್ರಿಯಗಳಿಂದ ಸಹಿತವಾಗಿ ಮನಸ್ಸು ಕೂಡಾ ಅವನನ್ನೇ ಆಶ್ರಯಿಸಿಕೊಂಡಿದೆ. ಆ ದೇವನನ್ನೇ ಪ್ರಧಾನನೆಂದು ಉಪಾಸನೆ ಮಾಡಿರಿ. ಇತರ ದೇವತೆಗಳನ್ನು ಪ್ರಧಾನವಾಗಿ ಉಪಾಸನೆ ಮಾಡಬೇಡಿರಿ. ಭಗವಂತನ ಪರಿವಾರ ಎಂಬುದಾಗಿ ಇತರದೇವತೆಗಳ ಉಪಾಸನೆಯನ್ನು ಅವಶ್ಯವಾಗಿ ಮಾಡಿರಿ. ಈ ಭಗವಂತನೇ ಮುಕ್ತರಿಗೆಲ್ಲ ಆಶ್ರಯನಾಗಿದ್ದಾನೆ.

### ಭಾಷ್ಯ

**ಅಮೃತಸ್ಯ ಮುಕ್ತಸ್ಯ ಸೇತುಃ । 'ಮುಕ್ತೋಪಸೃಪ್ಯವ್ಯಪದೇಶಾತ್' 'ಮುಕ್ತಾನಾಂ ಪರಮಾ ಗತಿಃ' ಇತ್ಯಾದೇಃ ।**

**ಭಾಷ್ಯಾರ್ಥ-** ಉಪನಿಷತ್ತಿನಲ್ಲಿಯ 'ಅಮೃತಸ್ಯೈಷ ಸೇತುಃ' ಎಂಬಲ್ಲಿ ಅಮೃತ ಎಂಬ ಶಬ್ದಕ್ಕೆ ಮುಕ್ತರು ಎಂದು ಅರ್ಥ. ಮುಕ್ತರಿಗೆ ಪರಮಾತ್ಮ ಆಶ್ರಯನಾಗಿದ್ದಾನೆ ಎಂದು ಅರ್ಥ. 'ಮುಕ್ತೋಪಸೃಪ್ಯವ್ಯಪದೇಶಾತ್' ಎಂಬ ಸೂತ್ರದಲ್ಲಿ ಮತ್ತು 'ಮುಕ್ತಾನಾಂ ಪರಮಾ ಗತಿಃ' ಎಂಬಲ್ಲಿ ಭಗವಂತನಿಗೆ ಮುಕ್ತಾಶ್ರಯತ್ವವನ್ನು ಹೇಳಿದ್ದಾರೆ.

### ಖಂಡಾರ್ಥ

ಯದಾಽಕ್ಷರಂ ಪ್ರಾಧಾನ್ಯೇನ ಜ್ಞೇಯಂ ತದಾಽನ್ಯದವ್ಯಸ್ತಿ ಕಿಂ ತಾದೃಶಮಿತ್ಯತಃ ತನ್ನಿಷೇಧೋಕ್ತಿಪೂರ್ವಕಂ ನೇತ್ಯಾಹ- **ಯಸ್ಮಿನ್ ದ್ಯೌರಿತ್ಯಾದಿನಾ ॥**

ಯಸ್ಮಿನ್ ದ್ಯೌಃ ಓತಾ ಪೃಥಿವೀ ಚ ಓತಾ ಅಂತರಿಕ್ಷಂ ಚ ಓತಂ ಸರ್ವೈಃ ಪ್ರಾಣೈಃ ಚಕ್ಷುರಾದೀಂದ್ರಿಯೈಃ ಸಹ ಮನಶ್ಚ ಯಸ್ಮಿನ್ನೋತಂ, ವೇಷ್ ತಂತುಸಂತಾನೇ, ಪಟೇ ತಂತವ ಇವ ಸಂಶ್ಲಿಷ್ಟತಯಾ ಯಮಾಶ್ರಿತ್ಯ ವರ್ತತೇ ದ್ಯೌರಾದಿಕಂ ತಂ ಸರ್ವಾಧಾರಮೇವೈಕಂ ಆತ್ಮಾನಂ ಜಾನಥ ಜಾನೀತ, ವ್ಯತ್ಯಯಾತ್ । ಶೌನಕೋಪಲಕ್ಷಿತಾನ್ ಪ್ರತ್ಯುಚ್ಯತ ಇತಿ ಬಹುವಚನಮ್ । ಜಾನಥ ಆತ್ಮಾನಮಿತಿ ಪೃಥಕ್ ನಿರ್ದೇಶಃ ಸರ್ವವೈಲಕ್ಷಣ್ಯಜ್ಞಾಪನಾರ್ಥಃ । ತದಾऽಹ ಸೂತ್ರೇ 'ದ್ಯುಭ್ವಾದ್ಯಾಯತನಂ ಸ್ವಶಬ್ದಾತ್' ಇತಿ । ಏತೇನಾऽಧೇಯಜ್ಞಾನಂ ವಿನಾ ತದಾಧಾರತ್ವೇನ ಜ್ಞಾನಾಯೋಗಾತ್ । 'ಅವಸ್ಥಿತೇರಿತಿ ಕಾಶಕೃತ್ಸ್ನಃ' ಇತಿ ಸೂತ್ರೋಕ್ತದಿಶಾ ಆಧೇಯಕರ್ಮ-ದೇವತಾದಿಜಗಜ್ಜ್ಞಾನಂ ಸರ್ವಾಧಾರತ್ವಪ್ರಕಾರಕಬ್ರಹ್ಮಜ್ಞಾನೋಪಯೋಗಿ ಸತ್ ಪರವಿದ್ಯಾ ಭವತೀತಿ ಸೂಚಿತಂ ಭವತಿ । ಅತ ಏವ ಪ್ರಾಕ್ಕರ್ಮದೇವತಾದಿ-ಜಗದುಕ್ತಿಃ, ಅತ್ಯೈತತ್ಸರ್ವಮರ್ಪಿತಮಿತಿ ಚೋಕ್ತಮ್ । ಅನ್ಯಾಃ ಅನ್ಯವಿಷಯಾಃ ವಾಚಃ ವಿಮುಂಚಥ ಪರಿತ್ಯಜತ, ಪ್ರಾಧಾನ್ಯೇನೇತಿ ಭಾವಃ । ತದಾಹ ಸೂತ್ರೇ 'ಹೇಯತ್ವಾವಚನಾಚ್ಚ' ಇತಿ । ಕುತಸ್ತಸ್ಯೈವ ಜ್ಞಾನಮಾವಶ್ಯಕಮಿತ್ಯತ ಆಹ- ಅಮೃತಸ್ಯೈಷ ಸೇತುರಿತಿ ॥ ಏಷ ಆತ್ಮಾऽಮೃತಸ್ಯ ಮುಕ್ತವರ್ಗಸ್ಯ ಸೇತುರಾಶ್ರಯಃ ॥೪.೬॥

ಅನುವಾದ- ಅಕ್ಷರನಾಮಕನಾದ ಪರಮಾತ್ಮನನ್ನು ಪ್ರಧಾನವಾಗಿ ಹೇಗೆ ತಿಳಿಯಬೇಕೋ ಹಾಗೆ ಪ್ರಧಾನವಾಗಿ ತಿಳಿಯಬೇಕಾದ ವಸ್ತು ಮತ್ತೊಂದು ಯಾವುದಾದರೂ ಇದೆಯೋ? ಎಂಬ ಪ್ರಶ್ನೆಗೆ ಭಗವಂತನ ಮಹಿಮೆಯನ್ನೇ ಹೇಳುತ್ತಾ ಆತನಿಗೆ ಸದೃಶವಾದ, ಪ್ರಧಾನವಾಗಿ ಪೂಜ್ಯವಾದ ವಸ್ತು ಮತ್ತೊಂದು ಇಲ್ಲವೆಂದು 'ಯಸ್ಮಿನ್ ದ್ಯೌಃ...' ಎಂಬ ಮಂತ್ರದಿಂದ ಹೇಳುತ್ತಿದ್ದಾರೆ.

ಯಾವನಲ್ಲಿ ದ್ಯುಲೋಕವು ಪ್ರವಿಷ್ಟವಾಗಿದೆಯೋ, ಪೃಥಿವಿಯೂ ಯಾವನಲ್ಲಿ ಪ್ರವಿಷ್ಟವಾಗಿದೆಯೋ ಅಂತರಿಕ್ಷವೂ ಪ್ರವಿಷ್ಟವಾಗಿದೆಯೋ, ಎಲ್ಲ ಇಂದ್ರಿಯಗಳಿಂದ ಯುಕ್ತವಾಗಿ ಮನಸ್ಸು ಕೂಡಾ ಯಾವನಲ್ಲಿ ಪ್ರವಿಷ್ಟವಾಗಿದೆಯೋ, ಬಟ್ಟೆಯನ್ನು ನೂಲುಗಳು ಆಶ್ರಯಿಸಿಕೊಂಡಂತೆ

ಯಾವನನ್ನು ಆಶ್ರಯಿಸಿಕೊಂಡು ದ್ಯುರಾದಿಲೋಕಗಳು ಇರುತ್ತವೋ, ಅಂತಹ ಪರಮಾತ್ಮನೇ ಸರ್ವಾಧಾರನಾಗಿರುವನೆಂದು ಅವನೇ ಪ್ರಧಾನನೆಂದು ಪ್ರಧಾನನಾದವನು ಅವನೊಬ್ಬನೇ ಎಂದು ತಿಳಿಯಿರಿ. ಶೌನಕರಿಗೆ ಅಂಗಿರರು ಉಪದೇಶಿಸುತ್ತಿದ್ದಾರೆ. ಆದರೇ ಅಲ್ಲಿ ಶೌನಕರಲ್ಲದೇ ಬಹಳ ಶ್ರಾವಕರು ಇದ್ದಾರೆ ಎಂದು ಜಾನಥ ಎಂಬ ಬಹುವಚನಪ್ರಯೋಗ-ದಿಂದ ತಿಳಿಸುತ್ತಿದ್ದಾರೆ. ಜಾನಥ ಆತ್ಮಾನಂ ಎರಡೂ ಸೇರಿ ಜಾನಥಾತ್ಮಾನಂ ಎಂದು ಸವರ್ಣದೀರ್ಘವಾಗಬೇಕು. ಆದರೂ ಭಗವಂತ ಸರ್ವವಿಲಕ್ಷಣ ಎಂಬುದನ್ನು ತಿಳಿಸುವುದಕ್ಕಾಗಿ ಪ್ರತ್ಯೇಕವಾಗಿ ಸಂಧಿಮಾಡದೇ ಜಾನಥ ಆತ್ಮಾನಂ ಎಂದು ವೇದಪುರುಷನು ಪ್ರಯೋಗಿಸುತ್ತಿದ್ದಾನೆ. 'ದ್ಯುಭ್ವಾದ್ಯಾಯತನಂ ಸ್ವಶಬ್ದಾತ್' (ಬ್ರ.ಸೂ೧.೩.೧)'ಯಸ್ಮಿನ್ ದ್ಯೌಃ ಎಂಬ ಶ್ರುತಿಯಲ್ಲಿ ವಿಷ್ಣುಮಾತ್ರವಾಚಕವಾದ ಆತ್ಮ ಶಬ್ದದ ಪ್ರಯೋಗವಿದ್ದುದರಿಂದ ದ್ಯು-ಭೂ ಮೊದಲಾದ ಲೋಕಗಳಿಗೆ ಆಶ್ರಯನಾದವನು ಪರಮಾತ್ಮನೇ ಆಗಿದ್ದಾನೆ' ಎಂಬ ಸೂತ್ರದಲ್ಲಿ ಇದೇ ವಿಷಯವನ್ನು ಹೇಳಿದ್ದಾರೆ.

ಎಲ್ಲಪ್ರಪಂಚವೂ ದೇವರಲ್ಲಿ ಇದೆಯಾದ್ದರಿಂದ ಪ್ರಪಂಚವೆಲ್ಲ ಆಧೇಯವಾಗಿದೆ. ದೇವರು ಆಧಾರನಾಗಿದ್ದಾನೆ. ಆಧೇಯದ ಜ್ಞಾನವಾಗದೇ ಆಧಾರದ ಜ್ಞಾನವಾಗುವುದಿಲ್ಲವಾದ್ದರಿಂದ 'ಅವಸ್ಥಿತೇರಿತಿ ಕಾಶಕೃತ್ಸ್ನಃ' (ಬ್ರ.ಸೂ.೧.೪.೨೩) 'ಕರ್ಮದೇವತಾದಿ ಎಲ್ಲ ಪ್ರಪಂಚವು ವಿಷ್ಣುವನ್ನು ಆಶ್ರಯಿಸಿದೆ. ಭಗವಂತ ಸರ್ವಾಧಾರ ಸರ್ವಾಶ್ರಯ ಎಂಬ ಮೋಕ್ಷೋಪಯೋಗಿಯಾದ ಜ್ಞಾನವನ್ನು ತಿಳಿಸಲು ವೇದವು ಆಧೇಯವಾದ ಕರ್ಮದೇವತಾದಿಗಳನ್ನು ಪ್ರತಿಪಾದಿಸುತ್ತದೆ ಎಂದು ಕಾಶಕೃತ್ಸ್ನರು ಹೇಳುತ್ತಾರೆ.'ಎಂಬ ಸೂತ್ರದಲ್ಲಿ ಹೇಳಿದಂತೆ ಆಧೇಯವಾದ ಕರ್ಮ-ದೇವತಾ ಮೊದಲಾದ ಜಗತ್ತಿನ ಜ್ಞಾನವು ಸರ್ವಾಧಾರನಾದ ಬ್ರಹ್ಮಜ್ಞಾನಕ್ಕೆ ಉಪಯೋಗಿಯಾಗಿಯೇ ಪರವಿದ್ಯಾ ಆಗುತ್ತದೆ ಎಂದು ಸೂಚಿಸಿದಂತೆ ಆಗುತ್ತದೆ. ಆದ್ದರಿಂದಲೇ ಮೊದಲು ಕರ್ಮದೇವತಾದಿಜಗತ್ತಿನ ಪರಿಚಯವನ್ನು ಮಾಡಿಸಿದ್ದಾರೆ. 'ಆತ್ಮೈತತ್ ಸರ್ವಮರ್ಪಿತಮ್' ಎಂದೂ ಹೇಳಿದ್ದಾರೆ. ಅನ್ಯಾಃ=ಅನ್ಯವಿಷಯಕವಾದ ಮಾತುಗಳನ್ನು, ವಿಮುಂಚಥ=

ಪರಿತ್ಯಜಿಸಿರಿ. ಉಳಿದ ದೇವತೆಗಳು ಪ್ರಧಾನರಾಗಿದ್ದಾರೆ ಎಂಬ ಭಾವನೆಯಿಂದ ಅವರ ಸ್ತೋತ್ರಾದಿಗಳನ್ನು ಮಾಡಬೇಡಿರಿ ಎಂದು ಭಾವ. 'ಹೇಯತ್ವಾವಚನಾಚ್ಚ (ಬ್ರ.ಸೂ.೧.೧.೮)'ಸತ್ತ್ವಾದಿಗುಣಗಳಿಂದ ಬದ್ಧರಾದ ಜೀವರಿಗೆ ಹೇಯತ್ವವನ್ನು ಅಂದರೇ ಮೋಕ್ಷಕ್ಕಾಗಿ ಪ್ರಾಧಾನ್ಯೇನ ಅಜ್ಞೇಯತ್ವವನ್ನು ಹೇಳಿದ್ದಾರೆ. ಇಲ್ಲಿ ತಮೇವೈಕಂ ಜಾನಥ ಎಂದು ಹೇಳಿದ್ದಾರೆಯೇ ಹೊರತು ಹೇಯತ್ವವನ್ನು ಹೇಳಿಲ್ಲ ಆದ್ದರಿಂದ ಪ್ರಕೃತ ಆತ್ಮಶಬ್ದವಾಚ್ಯನಾದವನು ವಿಷ್ಣುವೇ ಆಗಿದ್ದಾನೆ.' ಎಂಬ ಸೂತ್ರದಲ್ಲಿ ಇದೇ ವಿಷಯವನ್ನು ತಿಳಿಸಿದ್ದಾರೆ. ಈ ಪರಮಾತ್ಮನೇ ಮುಕ್ತರ ಸಮೂಹಕ್ಕೆ ಆಶ್ರಯನಾಗಿದ್ದಾನೆ ಆದ್ದರಿಂದ ದೇವರ ಜ್ಞಾನವನ್ನೇ ಸಂಪಾದಿಸಬೇಕು. ।।೪.೬।।

### ಉಪನಿಷತ್

ಅರಾ ಇವ ರಥನಾಭೌ ಸಂಹತಾ ಯತ್ರ ನಾಡ್ಯಃ ।
ಸ ಏಷೋಽಂತಃ ಚರತೇ ಬಹುಧಾ ಜಾಯಮಾನಃ ।।೪.೭।।

ಉಪನಿಷದರ್ಥ- ರಥದ ಚಕ್ರವನ್ನು ಹಲ್ಲುಗಳೆಲ್ಲ ಆಶ್ರಿಯಿಸಿಕೊಂಡಿವೆ. ಹಾಗೆಯೇ ೭೨ಸಾವಿರ ನಾಡಿಗಳೆಲ್ಲ ಭಗವಂತನನ್ನೇ ಆಶ್ರಿಯಿಸಿಕೊಂಡಿವೆ. ಈ ಎಲ್ಲ ನಾಡಿಗಳಿಗೆ ಆಶ್ರಯನಾದ ಹೃದಯದಲ್ಲಿರುವ ಈ ಪರಮಾತ್ಮನು ಸ್ವೇಚ್ಛೆಯಿಂದಲೇ ವಿಶ್ವಾದಿ ಅನೇಕರೂಪಗಳನ್ನು ಸ್ವೀಕರಿಸಿ ಶರೀರದ ಒಳಗೆ ಚಕ್ಷುರಾದಿಸ್ಥಾನಗಳಲ್ಲಿ ಸಂಚರಿಸುತ್ತಾನೆ.

### ಭಾಷ್ಯ

ಹೃದಯಸ್ಥಃ ಸದಾ ವಿಷ್ಣುರ್ಬಹುಧಾ ಚೈಕಧಾ ಭವೇತ್ ।
ಚರತಿ ಸ್ವೇಚ್ಛಯೈವಾಂತಃ ಸರ್ವಜೀವಾನ್ನಿಯಾಮಯನ್ ॥
ಇತಿ ಪ್ರವೃತ್ತೇ॥

ಭಾಷ್ಯಾರ್ಥ- ಎಲ್ಲ ಜೀವರಿಗೆ ನಿಯಾಮಕನಾಗಿ ಎಲ್ಲ ಜೀವರ ಹೃದಯದಲ್ಲಿರುವ ಪರಮಾತ್ಮನು ಸ್ವಯಂ ಏಕನಾಗಿದ್ದಾರೂ ಸ್ವೇಚ್ಛೆಯಿಂದ ವಿಶ್ವಾದಿ ಬಹುರೂಪಗಳಿಂದ ಪ್ರಾದುರ್ಭೂತನಾಗಿ ಶರೀರದ ಒಳಗೆ ಚಕ್ಷುರಾದಿಸ್ಥಾನಗಳಲ್ಲಿ ಸಂಚರಿಸುತ್ತಾನೆ.

### ಖಂಡಾರ್ಥ

**ಯತ್ರ ದೇಹಸ್ಥೇ ಹರೌ ರಥನಾಭೌ ರಥಚಕ್ರೇ ಅರಾ ಇವ ನಾಡ್ಯಃ ಸಂಹತಾಃ ಸಂಬದ್ಧಾಃ ಸ ಏಷ ಆತ್ಮಾ ಬಹುಧಾ ವಿಶ್ವಾದಿರೂಪೇಣ ಜಾಯಮಾನಃ ಪ್ರಾದುರ್ಭವನ್ ಅಂತಃ ಶರೀರಾಂತಃ ಚರತೇ ಸಂಚರತಿ ||೪.೭||**

**ಅನುವಾದ-** ರಥದ ಚಕ್ರದಲ್ಲಿ ಹಲ್ಲುಗಳು ಸಂಬದ್ಧವಾಗಿರುವಂತೆ, ದೇಹದಲ್ಲಿರುವ ಯಾವ ಪರಮಾತ್ಮನಲ್ಲಿ ಈ ಎಲ್ಲ ನಾಡಿಗಳು ಸಂಬದ್ಧವಾಗಿವೆಯೋ ಅಂತಹ ಪರಮಾತ್ಮನು ವಿಶ್ವಾದಿಬಹುರೂಪಗಳಿಂದ ಪ್ರಾದುರ್ಭವಿಸುವವನಾಗಿ ಈ ಶರೀರದಲ್ಲಿ ಸಂಚರಿಸುತ್ತಾನೆ. ||೪.೭||

### ಉಪನಿಷತ್

**ಓಮಿತ್ಯೇವ ಧ್ಯಾಯತ ಆತ್ಮಾನಂ**
**ಸ್ವಸ್ತಿ ವಃ ಪರಾಯ ತಮಸಃ ಪರಸ್ತಾತ್ ||೪.೮||**

**ಉಪನಿಷದರ್ಥ-** ಭಗವಂತ ಅಶೇಷಗುಣಗಳಿಂದ ಪೂರ್ಣನಾಗಿದ್ದಾನೆಂದು ಎಲ್ಲ ವೇದಗಳಿಂದ ಪರಮಮುಖ್ಯವೃತ್ತಿಯಿಂದ ಪ್ರತಿಪಾದ್ಯನಾಗಿದ್ದಾನೆಂದು ತಿಳಿಯಿರಿ. ಹೀಗೆ ತಿಳಿಯುವುದರಿಂದ ಅನಿಷ್ಟಗಳೆಲ್ಲ ತೊಲಗಿಹೋಗುತ್ತವೆ. ಸ್ವರೂಪಾನಂದದ ಆವಿರ್ಭಾವವಾಗುತ್ತದೆ.

### ಖಂಡಾರ್ಥ

ಜ್ಞಾನಹೇತುಕತ್ವಜ್ಞಾನೋಪಾಯಮಾಹ- **ಓಮಿತ್ಯೇವೇತಿ** || ಆತ್ಮಾನಂ ಓಮ್ ಅಶೇಷಗುಣಪೂರ್ಣಮ್ | ಮುಖ್ಯವೃತ್ತ್ಯಾ ಖಗಾದಿಶಾಸ್ತ್ರವೇದ್ಯಮಿತ್ಯೇವ ಧ್ಯಾಯತ | ಕಿಮರ್ಥಮ್? ತಮಸಃ ಪರಸ್ತಾತ್ ಪರಾಯ, ಜ್ಞಾನೋಪಲಕ್ಷಣಂ, ಜಡ ಪ್ರಕೃತಿಪರಶ್ರೀತತ್ತ್ವಾತ್ತರಭೂತಪರಮಾತ್ಮಜ್ಞಾನಾಯ | ಏವಂ ಧ್ಯಾನೇ ಸತಿ ತಜ್ಜ್ಞಾನಂ ಭವತಿ | ತೇನ ಚ ಪರಾತ್ಪರಜ್ಞಾನೇನ ವೋ ಯುಷ್ಮಾಕಂ ಸ್ವಸ್ತಿ ಮಂಗಲಂ ಭವತೀತ್ಯರ್ಥಃ ||೪.೮||

ಅನುವಾದ- ಜ್ಞಾನಥ ತಿಳಿಯಿರಿ ಎಂದು ಅಂಗಿರರು ಉಪದೇಶಿಸಿದರು. ಜ್ಞಾನಕ್ಕೆ ಉಪಾಯವನ್ನು **'ಓಮಿತ್ಯೇವ...'** ಎಂಬ ಮಂತ್ರದಿಂದ ಹೇಳುತ್ತಿದ್ದಾರೆ.

ಓಂ=ಅಶೇಷಗುಣಗಳಿಂದ ಪರಿಪೂರ್ಣನಾದ, ಪರಮಾತ್ಮನು ಮುಖ್ಯವೃತ್ತಿಯಿಂದ ಋಗಾದಿಶಾಸ್ತ್ರಗಳಿಂದ ವೇದ್ಯನಾಗಿದ್ದಾನೆಂದು ಧ್ಯಾನಮಾಡಿರಿ. ಜಡಪ್ರಕೃತಿಗಿಂತಲೂ ಉತ್ತಮವಾದ ಶ್ರೀತತ್ತ್ವಕ್ಕಿಂತಲೂ ಉತ್ತಮನಾದ ಪರಮಾತ್ಮನ ಜ್ಞಾನವಾಗುವುದಕ್ಕಾಗಿ ಈ ರೀತಿಯಾಗಿ ಧ್ಯಾನಮಾಡುವುದು ಅಗತ್ಯವಾಗಿದೆ. ಪರಾತ್ಪರನಾದ ಪರಮಾತ್ಮನ ಜ್ಞಾನವಾದಾಗ ನಿಮಗೆ ಮಂಗಳವಾಗುತ್ತದೆ ಎಂದು ಅರ್ಥ. ।।೪.೮।।

**ಉಪನಿಷತ್**

**ಯಃ ಸರ್ವಜ್ಞಃ ಸರ್ವವಿತ್ ಯಸ್ಯೈಷ ಮಹಿಮಾ ಭುವಿ ।**
**ದಿವ್ಯೇ ಬ್ರಹ್ಮಪುರೇ ಹ್ಯೇಷ ವ್ಯೋಮ್ನ್ಯಾತ್ಮಾ ಸಂಪ್ರತಿಷ್ಠಿತಃ ।।೪.೯।।**

**ಉಪನಿಷದರ್ಥ-** ಭಗವಂತ ಸರ್ವಜ್ಞಾನಿಯಾಗಿದ್ದಾನೆ. ಆಪ್ತಕಾಮನಾಗಿದ್ದಾನೆ. ಈ ಪರಮಾತ್ಮ ತನ್ನ ಮಹಿಮೆಯನ್ನು ಭೂಲೋಕದಲ್ಲಿ ಪ್ರಕಟಗೊಳಿಸಿದ್ದಾನೆ. ಇಂತಹ ಪರಮಾತ್ಮ ತನ್ನ ಕ್ರೀಡಾಸ್ಥಾನವಾದ ಶರೀರದಲ್ಲಿ ಅಲ್ಲಿಯೂ ಹೃದಯಾಕಾಶದಲ್ಲಿ ನಿತ್ಯವೂ ಇರುತ್ತಾನೆ.

**ಖಂಡಾರ್ಥ**

ಆತ್ಮಾನಂ ವಿಶಿನಷ್ಟಿ- **ಯಸ್ಸರ್ವಜ್ಞಃ ಸರ್ವವಿದಿತಿ** ।। ಏಷಃ ಸಾರ್ವಜ್ಞಾದಿರೂಪೋ ಯಸ್ಯ ಮಹಿಮಾ ಭುವಿ ಭೂಮ್ಯಾದೌ ಪ್ರಕಟಿತಃ ತಮಾತ್ಮಾನಮಿತ್ಯರ್ಥಃ । ಕುತ್ರತ್ಯ ಆತ್ಮಾ ಧ್ಯೇಯ ಇತ್ಯತ ಆಹ- **ದಿವ್ಯ ಇತಿ** ।। ಬ್ರಹ್ಮಪುರೇ ದೇಹೇ ದಿವಿ ಭವೇ ದಿವ್ಯೇ, ವ್ಯೋಮ್ನಃ ದ್ಯುಸಂಬಂಧಿತ್ವಾದ್ದಿವ್ಯ ಇತ್ಯುಕ್ತಿಃ, ವ್ಯೋಮ್ನಿ ದೇಹಸ್ಥಾಕಾಶೇ ಏಷ ಆತ್ಮಾ ಪ್ರತಿಷ್ಠಿತಃ ।। ೪.೯ ।।

ಅನುವಾದ- **'ಯಃ ಸರ್ವಜ್ಞಃ'** ಎಂಬ ಮಂತ್ರವು ದೇವರ ವೈಶಿಷ್ಟ್ಯವನ್ನು ಹೇಳುತ್ತಿದೆ.

ಭಗವಂತ ಸರ್ವಜ್ಞನಾಗಿದ್ದಾನೆ. ಸರ್ವವನ್ನೂ ಪಡೆದಿದ್ದಾನೆ. ಆಪ್ತಕಾಮನಾಗಿದ್ದಾನೆ. ಈ ರೀತಿಯಾದ ಮಹಿಮೆಯು ಭೂಮಿಯಲ್ಲಿ ಪ್ರಕಟವಾಗಿದೆ. ಈ ಪರಮಾತ್ಮನ ಧ್ಯಾನವನ್ನು ಮಾಡಬೇಕು. ಎಲ್ಲಿಯ ಪರಮಾತ್ಮನನ್ನು ಧ್ಯಾನಮಾಡಬೇಕೆಂಬುದನ್ನು 'ದಿವ್ಯೇ' ಎಂಬ ವಚನವು ತಿಳಿಸುತ್ತದೆ. ಬ್ರಹ್ಮಪುರವೆಂದರೇ ದೇಹ. ಈ ದೇಹದಲ್ಲಿರುವ ದಿವ್ಯವಾದ ಆಕಾಶದಲ್ಲಿ ನೆಲೆಸಿದ್ದಾನೆ.

**ಉಪನಿಷತ್**

**ಮನೋಮಯಃ ಪ್ರಾಣಶರೀರನೇತಾ**
**ಪ್ರತಿಷ್ಠಿತೋಽನ್ನೇ ಹೃದಯಂ ಸನ್ನಿಧಾಯ ।**
**ತದ್ ವಿಜ್ಞಾನೇನ ಪರಿಪಶ್ಯಂತಿ ಧೀರಾ**
**ಆನಂದರೂಪಮಮೃತಂ ಯದ್ ವಿಭಾತಿ ॥೪.೧೦॥**

**ಉಪನಿಷದರ್ಥ-** ಪರಮಾತ್ಮ ಜ್ಞಾನಸ್ವರೂಪನಾಗಿದ್ದಾನೆ. ಪಂಚಪ್ರಾಣಗಳನ್ನು, ಶರೀರವನ್ನು ಪ್ರೇರಿಸುವವನಾಗಿದ್ದಾನೆ. ಅನ್ನವಿಕಾರವಾದ ಈ ಶರೀರದಲ್ಲಿಯ ಹೃದಯಾಕಾಶದಲ್ಲಿ ಸನ್ನಿಹಿತನಾಗಿದ್ದಾನೆ. ಪರಮಾನಂದಸ್ವರೂಪನಾದ, ಅವಿನಾಶಿಯಾದ ಈ ಪರಮಾತ್ಮ ನಿತ್ಯವೂ ಸ್ವಪ್ರಕಾಶನಾಗಿರುತ್ತಾನೆ. ಇಂತಹ ಪರಮಾತ್ಮನನ್ನು ಯಥಾರ್ಥವಾದ ಧ್ಯಾನದಿಂದ ಜ್ಞಾನಿಗಳು ಸಾಕ್ಷಾತ್ಕರಿಸಿಕೊಳ್ಳುತ್ತಾರೆ.

**ಖಂಡಾರ್ಥ**

ಶರೀರಾಕಾಶೇಽಪಿ ಹೃದಯರೂಪಸ್ಥಲವಿಶೇಷಮಾಹ- **ಮನೋಮಯ ಇತಿ ॥** ಜ್ಞಾನಪ್ರಚುರಃ ಪೂರ್ಣಜ್ಞಾನ ಇತ್ಯರ್ಥಃ । ಪ್ರಾಣಶರೀರನೇತಾ ಪ್ರಾಣಾನಾಂ ಪಂಚವಾಯೂನಾಂ ಸರ್ವೇಂದ್ರಿಯಾಣಾಂ ಚ ಶರೀರಸ್ಯ ಚ ನೇತಾ ಪ್ರೇರಕಃ । ಏತೇನ ದೇಹೇ ತಸ್ಯ ಸ್ಥಿತೌ ಕೃತ್ಯಂ ದರ್ಶಿತಮ್ । ಪ್ರಾಣಾದಿನೇತೃತ್ವಂ ಚಾಽಜ್ಞಸ್ಯ ನ ಯುಕ್ತಮಿತ್ಯತೋ ಮನೋಮಯ ಇತ್ಯುಕ್ತಿಃ । ಅನ್ನೇ ಅನ್ನವಿಕಾರೇ ದೇಹೇ, ಕಾರ್ಯಕಾರಣಯೋಃ ಅಭೇದೋಪಚಾರಾತ್ ।

ಹೃದಯಂ ಸನ್ನಿಧಾಯ ಅಧಿಷ್ಠಾಯ ಪ್ರತಿಷ್ಠಿತ: ಸ್ಥಿತ: । ತಸ್ಯ ದರ್ಶನಾಯೋಗತ್ವೇ ಧ್ಯಾನಂ ವ್ಯರ್ಥಮಿತ್ಯತ ಆಹ- **ತದ್ವಿಜ್ಞಾನೇನೇತಿ** ॥ ಯದಾನಂದರೂಪಮಮೃತಂ ವಿಭಾತಿ । 'ಅತೋಽನಂತೇನ ತಥಾ ಹಿ ಲಿಂಗಮ್' ಇತಿ ಸೂತ್ರೋಕ್ತದಿಶಾಽವ್ಯಕ್ತೈಕಸ್ವಭಾವಮಪ್ಯಚಿಂತ್ಯಾದ್ಭುತಶಕ್ತ್ಯಾ ವಿಶೇಷೇಣ ಭಾತಿ ಆವಿರ್ಭವತಿ । ತದ್ರೂಪಂ ಧೀರಾ: ಪಟುತರಶ್ರವಣಮನನನಿದಿಧ್ಯಾಸನವಾಸನಾವಾಸಿತಾಂತ:ಕರಣಜನ್ಯೇನ ವಿಜ್ಞಾನೇನ ಪರಿಪಶ್ಯಂತಿ ವಿಷಯೀಕುರ್ವಂತೀತ್ಯರ್ಥ: । ತಥಾಚ ಸೂತ್ರಂ 'ಪ್ರಕಾಶಶ್ಚ ಕರ್ಮಣ್ಯಭ್ಯಾಸಾತ್' ಇತಿ ॥೪.೧೦॥

ಅನುವಾದ- ದೇಹಾಕಾಶದಲ್ಲಿಯೂ ಹೃದಯರೂಪವಾದ ವಿಶೇಷವಾದ ಸ್ಥಲವನ್ನು 'ಮನೋಮಯಃ...' ಎಂಬ ಮಂತ್ರವು ತಿಳಿಸುತ್ತಿದೆ.

ಮನೋಮಯಃ=ಜ್ಞಾನಪ್ರಚುರನಾದವನು, ಪೂರ್ಣವಾದ ಜ್ಞಾನವಿದ್ದವನು ಎಂದು ಅರ್ಥ. ಪ್ರಾಣಶರೀರನೇತಾ=ಪಂಚಪ್ರಾಣಗಳಿಗೆ, ಎಲ್ಲ ಇಂದ್ರಿಯಗಳಿಗೆ ಮತ್ತು ಶರೀರಕ್ಕೂ ಪ್ರೇರಕನಾಗಿರುವವನು, ಹೀಗೆ ಪ್ರೇರಕತ್ವವನ್ನು ಹೇಳುವುದರಿಂದ ದೇಹದಲ್ಲಿ ದೇವರು ಯಾಕಿರುತ್ತಾನೆ ಎಂಬುದಕ್ಕೆ ಪ್ರಯೋಜನವನ್ನು ಹೇಳಿದಂತಾಯಿತು. ಪ್ರಾಣಾದಿಪ್ರೇರಕತ್ವವು ಅಕ್ಷರಾದವರಿಗೆ ಇರುವುದಿಲ್ಲ ಎಂಬುದನ್ನು ಮನೋಮಯಃ ಎಂಬ ಶಬ್ದವು ತಿಳಿಸುತ್ತದೆ. ಅನ್ನೇ=ಕಾರ್ಯಕಾರಣಗಳಲ್ಲಿ ಅಭೇದವನ್ನು ಹೇಳುವುದು ಶಾಸ್ತ್ರದಲ್ಲಿ ಕಂಡಿದೆ ಆದ್ದರಿಂದ ಅನ್ನವೆಂದರೇ ಅನ್ನವಿಕಾರವಾದ ದೇಹದಲ್ಲಿ ಎಂದು ಅರ್ಥವನ್ನು ಮಾಡಬೇಕು. ಹೃದಯದಲ್ಲಿ ಸನ್ನಿಹಿತನಾಗಿ ಪರಮಾತ್ಮ ಇದ್ದಾನೆ. ಭಗವಂತನ ದರ್ಶನವೇ ಆಗುವುದಿಲ್ಲವೆಂದಾದರೇ ದೇವರ ಧ್ಯಾನಮಾಡುವುದು ವ್ಯರ್ಥವೆಂದು ಭಾವಿಸಬಾರದು. ಈ ಪ್ರಶ್ನೆಗೆ 'ತದ್ವಿಜ್ಞಾನೇನ...' ಎಂಬ ಮಾತು ಉತ್ತರವಾಗಿದೆ. ಆನಂದರೂಪಿಯಾದ, ವಿನಾಶವಿಲ್ಲದಿರುವ, ಭಗವಂತ ಜ್ಞಾನಿಗಳಿಗೆ ಗೋಚರನಾಗುತ್ತಾನೆ. 'ಅತೋಽನಂತೇನ ತಥಾ ಹಿ ಲಿಂಗಮ್' (ಬ್ರ.ಸೂ.೩.೨.೨೭)'ಪರಮಾತ್ಮ ಅವ್ಯಕ್ತ ಮತ್ತು ಪ್ರತ್ಯಕ್ಷಗೋಚರ ಎಂಬ ಈ ಎರಡೂ ವಿಷಯದಲ್ಲಿ ಪ್ರಮಾಣವಿದೆ

ಆದ್ದರಿಂದ ತಾನು ಅವ್ಯಕ್ತನಾಗಿದ್ದರೂ ಅನಂತಶಕ್ತಿಸಂಪನ್ನನಾದುದರಿಂದ ತನ್ನ ಪ್ರಸಾದದಿಂದಲೇ ಸಾಧಕರಿಗೆ ಪ್ರತ್ಯಕ್ಷವಿಷಯನಾಗುತ್ತಾನೆ. ಭಗವಂತನ ಪ್ರಸಾದದಿಂದ ಬಂಧನಿವೃತ್ತಿ ಎಂದು ಜ್ಞಾನದಿಂದ ಭಗವಂತನ ಪ್ರಸಾದವಾಗುತ್ತದೆ ಎಂದು ಲಿಂಗವೂ ಇದೆ.' ಎಂಬ ಸೂತ್ರದಲ್ಲಿ ಹೇಳಿದಂತೆ ಅವ್ಯಕ್ತೈಕಸ್ವಭಾವನಾದ ಪರಮಾತ್ಮನು ಅಚಿಂತ್ಯಶಕ್ತಿಯಿಂದಲೇ ಜ್ಞಾನಿಗಳಿಗೆ ತನ್ನ ರೂಪವನ್ನು ತೋರಿಸುತ್ತಾನೆ. ಆ ರೂಪವನ್ನು ಶ್ರವಣ-ಮನನ-ನಿದಿಧ್ಯಾಸನಗಳಿಂದ ಯುಕ್ತವಾದ ಮನಸ್ಸಿನಿಂದ ಹುಟ್ಟಿದ ಜ್ಞಾನದಿಂದ ಧೀರರಾದವರು ನೋಡುತ್ತಾರೆ. 'ಪ್ರಕಾಶಶ್ಚ ಕರ್ಮಣ್ಯಭ್ಯಾಸಾತ್' (ಬ್ರ.ಸೂ.೩.೨.೨೬)'ಭಗವದೇಕವಿಷಯಕವಾದ ಶ್ರವಣ-ಮನನಾದಿ-ಗಳನ್ನು ಆವರ್ತನ ಮಾಡುವುದರಿಂದ ಅಪರೋಕ್ಷಜ್ಞಾನವಾಗುತ್ತದೆ.' ಎಂಬ ಸೂತ್ರದಲ್ಲಿ ಇದೇ ವಿಷಯವನ್ನು ತಿಳಿಸಿದ್ದಾರೆ. ॥೪.೧೦॥

### ಉಪನಿಷತ್

**ಭಿದ್ಯತೇ ಹೃದಯಗ್ರಂಥಿಃ ಛಿದ್ಯಂತೇ ಸರ್ವಸಂಶಯಾಃ ।**
**ಕ್ಷೀಯಂತೇ ಚಾಸ್ಯ ಕರ್ಮಾಣಿ ತಸ್ಮಿನ್ ದೃಷ್ಟೇ ಪರಾವರೇ ॥೪.೧೧॥**

**ಉಪನಿಷದರ್ಥ-** ಬ್ರಹ್ಮಾದಿದೇವತೆಗಳಿಗಿಂತಲೂ ಉತ್ತಮನಾದ ಪರಮಾತ್ಮನ ಅಪರೋಕ್ಷವಾದಾಗ ಅಪ್ರಾರಬ್ಧವಾದ ಕರ್ಮಗಳೆಲ್ಲ ಭಸ್ಮವಾಗಿ ಹೋಗುತ್ತವೆ. ಅವಿದ್ಯಾಮೂಲಕವಾದ, ರಾಗ-ದ್ವೇಷ-ದುಃಖರೂಪವಾದ ಬಂಧವು ದೂರವಾಗುತ್ತದೆ. ಲಿಂಗಶರೀರವೂ ಬಿಚ್ಚಿಹೋಗುತ್ತದೆ. ಲಿಂಗಶರೀರಪ್ರಯುಕ್ತವಾಗಿರುವ ಸಂದೇಹಗಳೆಲ್ಲವೂ ತೊಲಗಿಹೋಗುತ್ತವೆ.

### ಭಾಷ್ಯ

ಪರಾ ಅಪ್ಯವರಾ ಯಸ್ಮಾತ್ ಸ ಹಿ ವಿಷ್ಣುಃ ಪರಾವರಃ ।

ಭಾಷ್ಯಾರ್ಥ- ಪರರಾದ ಉತ್ತಮರಾದ ರಮಾ-ಬ್ರಹ್ಮಾದಿದೇವತೆಗಳು ಕೂಡಾ ಪರಮಾತ್ಮನಿಗಿಂತಲೂ ಅವರ=ಕಡಿಮೆಯವರಾಗಿದ್ದಾರೆ ಆದ್ದರಿಂದ ದೇವರು ಪರಾವರ ಎನಿಸಿದ್ದಾನೆ.

### ಖಂಡಾರ್ಥ

ತದ್ದೃಷ್ಟೇಃ ಫಲಮಾಹ- **ಭಿದ್ಯತ ಇತಿ** ।। ಪರಾ ಅಪಿ ಬ್ರಹ್ಮಾದಯಃ ಅವರಾ ಯಸ್ಮಾತ್ ಸಃ ಪರಾವರಃ ತಸ್ಮಿನ್ ಪರಾವರೇ ತಸ್ಮಿನ್ ಸರ್ವೋತ್ತಮೇ ತಸ್ಮಿನ್ ಆನಂದರೂಪೇ ಹರೌ ದೃಷ್ಟೇ ಸತಿ ಹೃದಯಗ್ರಂಥಿಃ ಅವಿದ್ಯಾತನ್ಮೂಲರಾಗದ್ವೇಷದುಃಖಾದಿರೂಪೋ ಬಂಧಃ ಭಿದ್ಯತೇ ಅಪಯಾತಿ । ಅಜ್ಞಾನಮೂಲಾಃ ಸಂದೇಹವಿಪರ್ಯಯಾಶ್ಚ ಅಪಗಚ್ಛಂತಿ । ಅಸ್ಯಾಪರೋಕ್ಷಜ್ಞಾನಿನಃ ಕರ್ಮಾಣಿ ಸಂಚಿತಾಗಾಮೀನ್ಯಪ್ರಾರಬ್ಧಾನಿ ಕರ್ಮಾಣಿ ಕ್ಷೀಯಂತೇ । ಸಂಚಿತಾನಾಂ ಕ್ಷಯೋ ನಾಶಃ । ಆಗಾಮಿನಾಮಶ್ಲೇಷಃ । ತಥಾಚ ಸೂತ್ರಂ 'ತದಧಿಗಮ ಉತ್ತರಪೂರ್ವಾಘಯೋರಶ್ಲೇಷವಿನಾಶೌ' ಇತಿ ।।೪.೧೧।।

ಅನುವಾದ- ಭಗವಂತನ ದರ್ಶನದಿಂದ ಲಭ್ಯವಾಗುವ ಫಲವನ್ನು 'ಭಿದ್ಯತೇ...' ಎಂಬ ಮಂತ್ರವು ತಿಳಿಸುತ್ತದೆ.

ಪರರಾದ (ಶ್ರೇಷ್ಠರಾದ) ಬ್ರಹ್ಮಾದಿಗಳೂ ಯಾರಿಗೆ ಅವರರು (ಕಡಿಮೆಯವರು) ಆಗಿದ್ದಾರೋ ಆ ಪರಮಾತ್ಮ ಪರಾವರನೆನಿಸುತ್ತಾನೆ. ಇಂತಹ ಸರ್ವೋತ್ತಮನಾದ ಆನಂದಸ್ವರೂಪನಾದ ಪರಮಾತ್ಮನು ದರ್ಶನಕ್ಕೆ ವಿಷಯನಾಗಲು (ಪ್ರತ್ಯಕ್ಷನಾಗಲು) ಹೃದಯಗ್ರಂಥಿಃ=ಅವಿದ್ಯಾ ತನ್ಮೂಲಕವಾದ ರಾಗ-ದ್ವೇಷ-ದುಃಖಾದಿರೂಪವಾದ ಬಂಧನವು ತೊಲಗಿಹೋಗುತ್ತದೆ. ಅಜ್ಞಾನಮೂಲಕವಾದ ಸಂಶಯ-ವಿಪರೀತಜ್ಞಾನಗಳು ಕೂಡಾ ದೂರವಾಗುತ್ತವೆ. ಈ ಅಪರೋಕ್ಷಜ್ಞಾನಿಯ ಸಂಚಿತಾಗಾಮಿಗಳಾದ, ಅಪ್ರಾರಬ್ಧವಾದ ಕರ್ಮಗಳು ನಷ್ಟವಾಗುತ್ತವೆ. ಸಂಚಿತವಾದ ಕರ್ಮಗಳ ಕ್ಷಯವಾಗುತ್ತದೆ. ಆಗಾಮಿಕರ್ಮಗಳು ಅಶ್ಲಿಷ್ಟವಾಗುತ್ತವೆ. ಅಂದರೇ ಆ ಕರ್ಮಗಳ ಸಂಬಂಧವೇ ಆಗುವುದಿಲ್ಲವೆಂದು ಅರ್ಥ. 'ತದಧಿಗಮ ಉತ್ತರಪೂರ್ವಾಘಯೋರಶ್ಲೇಷವಿನಾಶೌ ತದ್ವ್ಯಪದೇಶಾತ್' (ಬ್ರ.ಸೂ.೪.೧.೧೩) 'ಭಗವಂತನ ಅಪರೋಕ್ಷಜ್ಞಾನವಾದಮೇಲೆ, ಅಪರೋಕ್ಷಾನಂತರ ಮಾಡುವ ಕರ್ಮಗಳು ಜೀವನಿಗೆ ಲೇಪವಾಗುವುದಿಲ್ಲ.

ಜ್ಞಾನಾತ್ಪೂರ್ವದಲ್ಲಿ ಮಾಡಿದ ಅಪ್ರಾರಬ್ಧವಾದ ಕರ್ಮ ನಷ್ಟವಾಗುತ್ತದೆ. ತದ್ಯಥಾ ಪುಷ್ಕರಪಲಾಶೇ... ಎಂಬ ಶ್ರುತಿಯು ಕೂಡಾ ಇದನ್ನು ತಿಳಿಸುತ್ತದೆ.' ಎಂಬ ಸೂತ್ರವು ಈ ವಿಷಯವನ್ನು ಸ್ಪಷ್ಟವಾಗಿ ತಿಳಿಸುತ್ತದೆ. ॥೪.೧೧॥

### ಉಪನಿಷತ್

**ಹಿರಣ್ಮಯೇ ಪರೇ ಕೋಶೇ ವಿರಜಂ ಬ್ರಹ್ಮ ನಿಷ್ಕಲಮ್ ।**
**ತಚ್ಛುಭ್ರಂ ಜ್ಯೋತಿಷಾಂ ಜ್ಯೋತಿಸ್ತದ್ಯದಾತ್ಮವಿದೋ ವಿದುಃ॥೪.೧೨॥**

**ಉಪನಿಷದರ್ಥ-** ಬ್ರಹ್ಮಾಂಡದ ಮಧ್ಯದಲ್ಲಿ ಸ್ವರ್ಣದಂತೆ ಹಳದಿಬಣ್ಣದಿಂದ ಪ್ರಕಾಶಿಸುವ ಸೂರ್ಯಮಂಡಲದಲ್ಲಿ ಇರುವ ವರುಣಾದಿಗಳಿಗಿಂತಲೂ ಉತ್ತಮನಾದ ಸೂರ್ಯನಲ್ಲಿ ಭಗವಂತ ಸನ್ನಿಹಿತನಾಗಿದ್ದಾನೆ. ಸತ್ತ್ವಾದಿಗುಣತ್ರಯಗಳಿಂದ ರಹಿತನಾಗಿದ್ದಾನೆ. ಷೋಡಶಕಲಾತ್ಮಕವಾದ ದೇಹದಿಂದ ರಹಿತನಾಗಿದ್ದಾನೆ. ಆದ್ದರಿಂದಲೇ ಪರಿಶುಭ್ರನಾಗಿದ್ದಾನೆ. ಸೂರ್ಯಾದಿಜ್ಯೋತಿಗಳಿಗೆ ಪ್ರಕಾಶವನ್ನು ನೀಡುವವನಾಗಿದ್ದಾನೆ. ಇಂತಹ ಪರಮಾತ್ಮನನ್ನು ಜ್ಞಾನಿಗಳು ಉಪಾಸನೆ ಮಾಡುತ್ತಾರೆ. ಆದ್ದರಿಂದ ನೀವು ಕೂಡಾ ಈ ಪರಮಾತ್ಮನ ಉಪಾಸನೆಯನ್ನೇ ಮಾಡಿರಿ.

### ಭಾಷ್ಯ

**ಬ್ರಹ್ಮಾಂಡಮಧ್ಯಗೇ ನಿತ್ಯಂ ತಪತ್ಯೇಷ ರವೌ ಸ್ಥಿತಃ ॥ಇತಿ ಚ॥**

**ಭಾಷ್ಯಾರ್ಥ-** ಬ್ರಹ್ಮಾಂಡದ ಮಧ್ಯದಲ್ಲಿಯ ಸೂರ್ಯನ ಮಂಡಲದಲ್ಲಿರುವ ಸೂರ್ಯನಲ್ಲಿ ಇದ್ದವನಾಗಿ ಪರಮಾತ್ಮನು ಎಲ್ಲವನ್ನೂ ಬೆಳಗಿಸುತ್ತಾನೆ. ಎಂದು ಪ್ರಮಾಣವಿದೆ.

### ಖಂಡಾರ್ಥ

ಏವಂ ದೇಹೇ ಭಗವದುಪಾಸನಾಸ್ಥಲಮುಕ್ತ್ವಾ ಬ್ರಹ್ಮಾಂಡಮಧ್ಯಸ್ಥ-ಸೂರ್ಯರೂಪಂ ಚೋಪಾಸ್ತಿಸ್ಥಲಮಾಹ- **ಹಿರಣ್ಮಯ ಇತಿ** ॥ ಹಿರಣ್ಮಯೇ ಸುವರ್ಣಾತ್ಮಕೇ ಪರೇ ಉತ್ತಮೇ ಕೋಶೇ ಬ್ರಹ್ಮಾಂಡೇ ವಿರಜಂ ವಿರಜಸ್ಕಂ

ರಜೋಗುಣೋಪಲಕ್ಷಿತಸತ್ತ್ವಾದಿಗುಣಹೀನಂ ನಿಷ್ಕಲಂ ಷೋಡಶಕಲಾರಹಿತಂ ಅತ ಏವ ಶುಭ್ರಂ ಶುದ್ಧಂ ಜ್ಯೋತಿಷಾಂ ತೇಜೋರೂಪಾಣಾಂ ಜ್ಯೋತಿ: ಪ್ರಕಾಶಕತ್ವಪ್ರದಂ, ಸರ್ವಜ್ಯೋತಿರಪೇಕ್ಷಯಾಽತಿಶಯಿತಮಹಾಪ್ರಕಾಶರೂಪಮಿತಿ ವಾಽರ್ಥ: । 'ಪವಿತ್ರಾಣಾಂ ಪವಿತ್ರಂ ಯೋ ಮಂಗಲಾನಾಂ ಚ ಮಂಗಲಮ್' ಇತ್ಯಾದಿವತ್, ಆದಿತ್ಯಸ್ಥಂ ಬ್ರಹ್ಮ ಆತ್ಮವಿದೋ ವಿದು: ಜಾನಂತಿ । ಅತಸ್ತತ್ರಾಽತ್ಮಾನಂ ಧ್ಯಾಯೀತೇತಿ ಭಾವ: ॥೪.೧೨॥

ಅನುವಾದ- ಹೀಗೆ ದೇಹದಲ್ಲಿ ಭಗವಂತನ ಉಪಾಸನೆಗೆ ಯೋಗ್ಯವಾದ ಸ್ಥಲವನ್ನು ಹೇಳಿ, ಬ್ರಹ್ಮಾಂಡದ ಮಧ್ಯದಲ್ಲಿರುವ ಸೂರ್ಯನ ರೂಪವು ಕೂಡಾ ಉಪಾಸನೆಗೆ ಯೋಗ್ಯವಾದ ಸ್ಥಲವೆಂದು 'ಹಿರಣ್ಮಯೇ...' ಎಂಬ ಮಂತ್ರವು ತಿಳಿಸುತ್ತದೆ.

ಹಿರಣ್ಮಯೇ=ಸ್ವರ್ಣಸ್ವರೂಪವಾದ, ಪರೇ=ಉತ್ತಮವಾದ, ಕೋಶೇ= ಬ್ರಹ್ಮಾಂಡದಲ್ಲಿ, ವಿರಜಂ=ರಜೋಗುಣದಿಂದ ಉಪಲಕ್ಷಿತವಾದ ಸತ್ತ್ವವೇ ಮೊದಲಾದ ಗುಣತ್ರಯಗಳಿಂದ ರಹಿತನಾದ, ನಿಷ್ಕಲಮ್= ಷೋಡಶಕಲಾರಹಿತನಾದ, ಆದ್ದರಿಂದಲೇ, ಶುಭ್ರಮ್=ಶುದ್ಧನಾದ, ಜ್ಯೋತಿಷಾಂ ಜ್ಯೋತಿ:=ತೇಜೋರೂಪವಾದ ವಸ್ತುಗಳಿಗೆ ಪ್ರಕಾಶವನ್ನು ಕೊಟ್ಟಿರುವ, ಪ್ರಕಾಶಕವಾದ ಎಲ್ಲ ಪದಾರ್ಥಗಳಿಗಿಂತಲೂ ಅತಿಶಯಿತವಾದ ಪ್ರಕಾಶವೇ ಸ್ವರೂಪವಾಗಿ ಉಳ್ಳ ಎಂದಾದರೂ ಅರ್ಥವನ್ನು ಮಾಡಬೇಕು. 'ಪವಿತ್ರಾಣಾಂ ಪವಿತ್ರಂ ಯೋ ಮಂಗಲಾನಾಂ ಚ ಮಂಗಲಮ್' ಎಂಬಲ್ಲಿಯಂತೆ 'ಜ್ಯೋತಿಷಾಂ ಜ್ಯೋತಿ:' ಎಂಬುದಕ್ಕೆ ಅರ್ಥವನ್ನು ತಿಳಿಯಬೇಕು. ಆದಿತ್ಯನಲ್ಲಿ ಇರುವ ಪರಮಾತ್ಮನನ್ನು ಆತ್ಮಜ್ಞಾನಿಗಳು ತಿಳಿಯುತ್ತಾರೆ. ಆದ್ದರಿಂದ ಆ ಆದಿತ್ಯನಲ್ಲಿ ದೇವರನ್ನು ಧ್ಯಾನಮಾಡಬೇಕು. ॥೪.೧೨॥

### ಉಪನಿಷತ್

ನ ತತ್ರ ಸೂರ್ಯೋ ಭಾತಿ ನ ಚಂದ್ರತಾರಕಂ
ನೇಮಾ ವಿದ್ಯುತೋ ಭಾಂತಿ ಕುತೋಽಯಮಗ್ನಿ: ।

**ತಮೇವ ಭಾಂತಮನುಭಾತಿ ಸರ್ವಂ**
**ತಸ್ಯ ಭಾಸಾ ಸರ್ವಮಿದಂ ವಿಭಾತಿ ॥೯.೧೩॥**

**ಉಪನಿಷದರ್ಥ-** ಸೂರ್ಯನಿಗೆ ಈ ಪರಮಾತ್ಮನನ್ನು ಪ್ರಕಾಶಗೊಳಿಸುವ ಸಾಮರ್ಥ್ಯವಿರುವುದಿಲ್ಲ. ಚಂದ್ರ-ನಕ್ಷತ್ರಗಳೂ ದೇವರನ್ನು ಬೆಳಗಿಸಲು ಸಮರ್ಥರಲ್ಲ. ಈ ಅಗ್ನಿಯು ಹೇಗೆ ಭಗವಂತನನನ್ನು ಪ್ರಕಾಶಗೊಳಿಸಲು ಸಮರ್ಥನಾಗುತ್ತಾನೆ. ಭಗವಂತನನ್ನು ಪ್ರಕಾಶಗೊಳಿಸುವ ಸಾಮರ್ಥ್ಯವಿದ್ದವರೂ ಈ ಪ್ರಪಂಚದಲ್ಲಿ ಯಾರೂ ಇಲ್ಲ. ಸೂರ್ಯ-ಚಂದ್ರ-ನಕ್ಷತ್ರ ಮತ್ತು ಪ್ರಕಾಶವಿರುವ ಪದಾರ್ಥಗಳೆಲ್ಲ ಪರಮಾತ್ಮನ ಪ್ರಕಾಶವನ್ನು ಅನುಸರಿಸಿಯೇ ಪ್ರಕಾಶಿಸುತ್ತವೆ.

### ಭಾಷ್ಯ

**ಸೂರ್ಯಾದಯಃ ತಂ ನ ಭಾಸಯಂತಿ ॥**

ಭಾಷ್ಯಾರ್ಥ- ಸೂರ್ಯನೇ ಮೊದಲಾದವರು ಭಗವಂತನನ್ನು ಪ್ರಕಾಶಗೊಳಿಸಲಾರವು.

### ಖಂಡಾರ್ಥ

- ಕಥಂ ಸರ್ವಜ್ಯೋತಿರಪೇಕ್ಷಯಾऽತಿಶಯಿತಮಹಾಪ್ರಕಾಶರೂಪತ್ವಂ ಹರೇರಿತ್ಯತ ಆಹ- **ನ ತತ್ರೇತಿ ॥** ತತ್ರ ಜ್ಯೋತಿಷಾಂ ಜ್ಯೋತೀರೂಪೇ ಹರೌ, ವಿಷಯಸಪ್ತಮೀ । ಚಂದ್ರತಾರಕಮಿತಿ ದ್ವಂದ್ವೈಕವದ್ಭಾವಃ । ತತ್ರ ಭಗವದ್ವಿಷಯೇ ಸೂರ್ಯಚಂದ್ರಾದಿಕಂ ನ ಬಾತಿ । ತದಪೇಕ್ಷಯಾऽಲ್ಪಪ್ರಕಾಶರೂಪತ್ವಾತ್ಸೂರ್ಯಾದೇಃ, ಮಹಾಪ್ರಕಾಶಂ ಭಗವಂತಂ ದೀಪಃ ಸೌರಾಲೋಕಮಿವ ನ ಬಾಸಯಂತಿ ಸೂರ್ಯಾದಯಃ ತಮಿತಿ ಭಾವಃ । ತಥಾಚ ಗೀತಾ 'ನ ತದ್ಭಾಸಯತೇ ಸೂರ್ಯಃ' ಇತ್ಯಾದಿ । ನ ಕೇವಲಂ ಸೂರ್ಯಾದೇಃ ತದಪ್ರಕಾಶಕತ್ವಮ್ । ಕಿಂತು ಯತ್ ಪ್ರಕಾಶಮಾನತ್ವಂ ಸ್ವಸ್ಯಾऽಸ್ತಿ ತದಪಿ ಜ್ಯೋತೀರೂಪಭಗವದಧೀನಮಿತ್ಯಾಹ- **ತಮೇವೇತಿ ॥** ಬಾಂತಂ ಪ್ರಕಾಶಮಾನಂ ತಂ ಬಗವಂತಮನು,

ಅನುರ್ಲಕ್ಷಣೇ, ತದಧೀನಂ ಸತ್ಪೂರ್ವಮಂತ್ರೇ ಪ್ರಕೃತಂ ಸೂರ್ಯಚಂದ್ರಾದಿ ಭಾತಿ ಪ್ರಕಾಶತೇ । ವಿಶ್ವಪ್ರಕಾಶಕತ್ವಮಪಿ ಸೂರ್ಯಾದೇ: ತತ್ತೇಜೋಽಪ್ಯಾನತ್ವೇನೈವೇತ್ಯಾಹ- **ತಸ್ಯೇತಿ** ॥ ತಸ್ಯ ಭಾಸಾ ಭಗವದ್ಭಾಸಾ ಸರ್ವಂ ಜಗದ್ಭಾತಿ ಪ್ರಕಾಶತೇ । ಸೂರ್ಯಾದಿಪ್ರಕಾಶದ್ವಾರೇತಿ ಭಾವ: । ತಥಾ ಚ ಗೀತಾ-

> ಯದಾದಿತ್ಯಗತಂ ತೇಜೋ ಜಗದ್ಭಾಸಯತೇಽಖಿಲಮ್ ।
> ಯಚ್ಚಂದ್ರಮಸಿ ಯಚ್ಚಾಗ್ನೌ ತತ್ತೇಜೋ ವಿದ್ಧಿ ಮಾಮಕಮ್ ॥ಇತಿ॥
> ಮಾಮಕಂ ಮದಧೀನಂ ಮದೀಯಂ ಚ ಇತ್ಯರ್ಥ: ॥೪.೧೬॥

ಅನುವಾದ- ಜ್ಯೋತಿರ್ಮಯವಾದ ಎಲ್ಲ ವಸ್ತುಗಳಿಗಿಂತಲೂ ಅಧಿಕವಾದ ಪ್ರಕಾಶವು ಭಗವಂತನ ಸ್ವರೂಪವಾಗಿದೆ ಎಂದು ಹೇಳಿದರು. ಇದು ಹೇಗೆ ಯುಕ್ತವಾಗುತ್ತದೆ ಎಂದು ಶಂಕೆ ಬಂದರೇ 'ನ ತತ್ರ ಸೂರ್ಯೋ...' ಎಂಬ ಮಂತ್ರದಿಂದ ಆ ಶಂಕೆಯನ್ನು ಪರಿಹರಿಸುತ್ತಾರೆ.

ತತ್ರ=ಜ್ಯೋತಿರ್ಮಯವಾದ ಪದಾರ್ಥಗಳಿಗಿಂತಲೂ ಉತ್ತಮನಾದ ಜ್ಯೋತೀರೂಪನಾದ ಪರಮಾತ್ಮನ ವಿಷಯದಲ್ಲಿ ಸೂರ್ಯ-ಚಂದ್ರಾದಿಗಳು ಪ್ರಕಾಶಕವಾಗುವುದಿಲ್ಲ. ಭಗವಂತನ ಅಪೇಕ್ಷಯಾ ಅತಿ ಅಲ್ಪವಾದ ಪ್ರಕಾಶವಿರುವುದರಿಂದ ದೀಪದ ಹುಳವು ಯಾವ ರೀತಿಯಾಗಿ ಸೂರ್ಯನನ್ನು ಪ್ರಕಾಶಗೊಳಿಸಲಾಗದೋ ಹಾಗೆ ಸೂರ್ಯಾದಿಗಳು ದೇವರನ್ನು ಪ್ರಕಾಶಗೊಳಿಸುವುದಿಲ್ಲವೆಂದು ಭಾವ. 'ನ ತದ್ಭಾಸಯತೇ ಸೂರ್ಯ:' ಎಂಬ ಗೀತೆಯ ವಾಕ್ಯವೂ ಇದೇ ವಿಷಯವನ್ನು ಸ್ಪಷ್ಟಪಡಿಸುತ್ತದೆ. ಸೂರ್ಯಾದಿಗಳು ಭಗವಂತನನ್ನು ಪ್ರಕಾಶಗೊಳಿಸುವುದಿಲ್ಲ-ವೆಂದು ಇಷ್ಟೇ ಅಲ್ಲ. ತಮಗಿರುವ ಪ್ರಕಾಶವೂ ಕೂಡಾ ಜ್ಯೋತೀರೂಪನಾದ ಪರಮಾತ್ಮನ ಅಧೀನವಾದದ್ದು ಎಂದು ಅರ್ಥ. 'ತಮೇವ' ಎಂಬ ವಚನವು ಇದೇ ವಿಷಯವನ್ನು ತಿಳಿಸುತ್ತದೆ. ಪ್ರಕಾಶಮಾನನಾದ ಪರಮಾತ್ಮನನ್ನು ಅನುಸರಿಸಿಯೇ ಆ ಪರಮಾತ್ಮನಿಗೆ ಅಧೀನವಾಗಿಯೇ ಪೂರ್ವಮಂತ್ರದಲ್ಲಿ ಪ್ರಕೃತರಾದ ಸೂರ್ಯ-ಚಂದ್ರಾದಿಗಳು

ಬೆಳಗುತ್ತಾರೆ. ಭಗವಂತನ ತೇಜಸ್ಸಿಗೆ ಅಧಿಷ್ಠಾನ ವಾದುದರಿಂದಲೇ ಸೂರ್ಯಾದಿಗಳು ವಿಶ್ವಪ್ರಕಾಶಕವಾಗುತ್ತವೆ ಎಂದು ತಿಳಿಯಬೇಕು. ಭಗವಂತನ ಪ್ರಕಾಶದಿಂದ ಸೂರ್ಯಚಂದ್ರಾದಿಗಳ ಪ್ರಕಾಶದ್ವಾರಾ ಎಲ್ಲ ಜಗತ್ತೂ ಬೆಳಗುತ್ತದೆ. 'ಯದಾದಿತ್ಯಗತಂ ತೇಜೋ ಜಗದ್ಭಾಸಯತೇಽಖಿಲಮ್ । ಯಚ್ಚಂದ್ರಮಸಿ ಯಚ್ಚಾಗ್ನೌ ತತ್ತೇಜೋ ವಿದ್ಧಿ ಮಾಮಕಮ್ ॥ ಎಂಬ ಗೀತಾವಾಕ್ಯವು ಇದೇ ವಿಷಯವನ್ನು ಸ್ಪಷ್ಟವಾಗಿ ತಿಳಿಸುತ್ತದೆ. ಗೀತೆಯಲ್ಲಿಯ 'ಮಾಮಕಂ' ಎಂಬ ಪದಕ್ಕೆ ನನ್ನ ಅಧೀನ ಎಂದು, ನನ್ನದು ಎಂದು ಅರ್ಥ. ॥೪.೧೩॥

## ಉಪನಿಷತ್

ಬ್ರಹ್ಮೈವೇದಮಮೃತಂ ಪುರಸ್ತಾತ್ ಬ್ರಹ್ಮ
ಪಶ್ಚಾತ್ ಬ್ರಹ್ಮ ದಕ್ಷಿಣತಶ್ಚೋತ್ತರೇಣ ।
ಅಧಶ್ಚೋರ್ಧ್ವಂ ಚ ಪ್ರಸೃತಂ ಬ್ರಹ್ಮೈ-
ವೇದಂ ವಿಶ್ವಮಿದಂ ವರಿಷ್ಠಮ್ ॥೪.೧೪॥

॥ ಇತಿ ಚತುರ್ಥಃ ಖಂಡಃ ॥

**ಉಪನಿಷದರ್ಥ-** ಮರಣರಹಿತನಾದ, ಗುಣಪರಿಪೂರ್ಣನಾದ ಈ ಪರಮಾತ್ಮನೇ ಪೂರ್ವದಲ್ಲಿಯೂ, ಪಶ್ಚಿಮದಲ್ಲಿಯೂ, ವ್ಯಾಪ್ತನಾಗಿದ್ದಾನೆ. ದಕ್ಷಿಣ, ಉತ್ತರದಲ್ಲಿಯೂ ಮೇಲೆ ಕೆಳಗೂ ಗುಣಪರಿಪೂರ್ಣನಾದ ಈ ಪರಮಾತ್ಮನೇ ವ್ಯಾಪಿಸಿದ್ದಾನೆ. ಈ ಪರಮಾತ್ಮನೇ ಪೂರ್ಣನಾಗಿದ್ದಾನೆ. ಮತ್ತು ಅತಿಶಯೇನ ಸರ್ವೋತ್ತಮನಾಗಿದ್ದಾನೆ ಎಂದು ತಿಳಿಯಿರಿ.

## ಭಾಷ್ಯ

ಇದಂ ಬ್ರಹ್ಮೈವ ವಿಶ್ವಂ ಪೂರ್ಣಮ್ । ಇದಮೇವ ವರಿಷ್ಠಂ ಸರ್ವೋತ್ತಮಮ್ । ಇದಂಶಬ್ದಾನಾಂ ಬಹುತ್ವಾತ್ ಬ್ರಹ್ಮವಿಷಯ ಏವೇದಂ ಶಬ್ದಃ ॥೪॥

ಭಾಷ್ಯಾರ್ಥ- 'ಬ್ರಹ್ಮೈವೇದಂ ವಿಶ್ವಂ' ಎಂಬಲ್ಲಿ ಇದಂ ವಿಶ್ವಂ ಬ್ರಹ್ಮ ಎಂದು ಅನ್ವಯ ಮಾಡಿಕೊಂಡು ಬ್ರಹ್ಮವು ವಿಶ್ವದಿಂದ ಅಭಿನ್ನವಾಗಿದೆ ಎಂದು ಅರ್ಥವನ್ನು ಹೇಳುತ್ತಾರೆ. ಇದು ಸರಿಯಲ್ಲ. ಕಿಂತು ಇದಂ ಬ್ರಹ್ಮ ವಿಶ್ವಂ ಎಂದು ಅನ್ವಯ ಮಾಡಿಕೊಳ್ಳಬೇಕು. ವಿಶ್ವ ಎಂದರೇ ಪೂರ್ಣ ಎಂದು ಅರ್ಥ. ಈ ಬ್ರಹ್ಮವು ಪೂರ್ಣವಾಗಿದೆ ಎಂದು ಸ್ವರಸವಾದ ಅರ್ಥವು ಬರುತ್ತದೆ. ಇದಮೇವ ವರಿಷ್ಠಂ ಈ ಬ್ರಹ್ಮವೇ ಸರ್ವೋತ್ತಮವಾಗಿದೆ. ಎಂದು ಅರ್ಥವನ್ನು ಮಾಡಬೇಕು. ಹೀಗೆ ಇದಂ ಶಬ್ದವು ಬ್ರಹ್ಮಪರವಾಗಿದೆ ಎಂದು ಹೇಳಬೇಕು. ಜಗತ್ಪರವೆಂದು ಹೇಳಿದರೇ ಇದಂ ವರಿಷ್ಠಂ ಎಂದಾಗ ಉತ್ತಮತ್ವವನ್ನು ಜಡವಾದ ಜಗತ್ತಿಗೆ ಹೇಳುವುದು ಸೂಕ್ತವಾಗುವುದಿಲ್ಲ. ಹಾಗೂ ಸರ್ವದಿಗ್ವ್ಯಾಪಕತ್ವವನ್ನೂ ವಿಶ್ವಕ್ಕೆ ಹೇಳಲು ಬರುವುದಿಲ್ಲ. ಇದಂ ಶಬ್ದ ವಿಶ್ವಪರವೆಂದು ಹೇಳಿದರೇ ಮೂರು ಇದಂ ಶಬ್ದಗಳು ಬೇಕಾಗಿಲ್ಲ. ಒಂದೇ ಇದಂ ಶಬ್ದ ಸಾಕು. ಉಳಿದ ಎರಡು ಇದಂ ಶಬ್ದಗಳು ವ್ಯರ್ಥವೆಂದಾಗಬೇಕಾದೀತು. ಇಲ್ಲಿ ಮೂರುಬಾರಿ ಇದಂ ಶಬ್ದವನ್ನು ಪ್ರಯೋಗಿಸಿದ್ದಾರೆ. ಆದ್ದರಿಂದ ಇದಂ ಬ್ರಹ್ಮ ವಿಶ್ವಂ ಇದಂ ಬ್ರಹ್ಮ ವರಿಷ್ಠಂ ಇತ್ಯಾದಿಯಾಗಿ ಅನ್ವಯವನ್ನು ಮಾಡಿಕೊಳ್ಳುವುದು ಸೂಕ್ತವಾಗುತ್ತದೆ.

### ಖಂಡಾರ್ಥ

ಹೃದಯಂ ಸನ್ನಿಧಾಯ ಪ್ರತಿಷ್ಠಿತ ಇತಿ, ಹೃದಯೇ ಜ್ಯೋತಿಷಾಂ ಜ್ಯೋತಿರಿತಿ ಸೂರ್ಯೇ ಚ ಧ್ಯಾನಾರ್ಥಂ ಸ್ಥಿತ್ಯುಕ್ತ್ಯಾ ವ್ಯಾಪ್ತಪರಿಚ್ಛಿನ್ನತ್ವಶಂಕಾಂ ನಿರಾಹ- **ಬ್ರಹ್ಮೈವೇದಮಿತಿ** ॥ ಇದಮಮೃತಂ ಬ್ರಹ್ಮೈವ । ಪುರಸ್ತಾತ್ಪುರೋದೇಶೇ ಪ್ರಸೃತಂ ವ್ಯಾಪ್ತಂ ಬ್ರಹ್ಮ, ಪಶ್ಚಾತ್ ಪಶ್ಚಿಮದೇಶೇ ಬ್ರಹ್ಮ, ದಕ್ಷಿಣತಶ್ಚೋತ್ತರೇಣ ದಕ್ಷಿಣದೇಶೇ ಉತ್ತರದೇಶೇ ಚ ಪ್ರಸೃತಮಧಶ್ಚೋರ್ಧ್ವಂ ಚ ಅಧೋದೇಶೋತ್ತರದೇಶಯೋಃ ಪ್ರಸೃತಮಿದಂ ಬ್ರಹ್ಮೈವ । ವಿಶ್ವಂ ಪೂರ್ಣಮಿದಂ ಬ್ರಹ್ಮೈವ । ವರಿಷ್ಠಂ ಸರ್ವೋತ್ತಮಮ್ । ಏವಂ ಸರ್ವದೇಶೇಷು ವ್ಯಾಪ್ತಸ್ಯಾಪಿ ಹರೇಃ ಹೃದಯಾದ್ಯಲ್ಪದೇಶೇಷ್ವವಸ್ಥಾನಂ 'ನಿಚಾಯ್ಯತ್ವಾದೇವಂ ವ್ಯೋಮವಚ್ಚ' ಇತಿ ಸೂತ್ರೋಕ್ತದಿಶಾ ಯುಕ್ತಮಿತಿ ಧ್ಯೇಯಮ್ ॥೪.೧೪॥

**ಅನುವಾದ-** 'ಹೃದಯಂ ಸನ್ನಿಧಾಯ ಪ್ರತಿಷ್ಠಿತಃ' 'ಹೃದಯೇ ಜ್ಯೋತಿಷಾಂ ಜ್ಯೋತಿಃ' ಎಂಬ ವಚನಗಳಿಂದ ಮತ್ತು ಉಪಾಸನೆಗಾಗಿ ಸೂರ್ಯನಲ್ಲಿ ನೆಲೆಸಿರುತ್ತಾನೆ ಎಂಬ ವಚನದಿಂದ ಭಗವಂತನು ಪರಿಚ್ಛಿನ್ನ ಪರಿಮಾಣ ಉಳ್ಳವನಾಗಿದ್ದಾನೆ ಎಂದು ತೋರುತ್ತದೆ. ಈ ಶಂಕೆಯನ್ನು **'ಬ್ರಹ್ಮೈವೇದಂ...'** ಎಂಬ ಮಂತ್ರವು ಪರಿಹರಿಸುತ್ತದೆ.

ಈ ಅವಿನಾಶಿಯಾದ ಪರಮಾತ್ಮನು ಬ್ರಹ್ಮನೇ ಆಗಿದ್ದಾನೆ. ಮುಂದಿನ ಭಾಗದಲ್ಲಿ, ಹಿಂದಿನ ಭಾಗದಲ್ಲಿ, ದಕ್ಷಿಣದಲ್ಲೂ ಉತ್ತರದಲ್ಲೂ, ಮೇಲೆ, ಕೆಳಗೆ, ಈ ಪರಮಾತ್ಮನು ವ್ಯಾಪ್ತನಾಗಿದ್ದಾನೆ. ಈ ಪರಮಾತ್ಮ ಪರಿಪೂರ್ಣನಾಗಿದ್ದಾನೆ. ಸರ್ವೋತ್ತಮನಾಗಿದ್ದಾನೆ. ಹೀಗೆ ಸರ್ವದೇಶಗಳಲ್ಲಿ ವ್ಯಾಪ್ತನಾಗಿರುವ ಪರಮಾತ್ಮನು ಹೃದಯವೇ ಮೊದಲಾದ ಅಲ್ಪಪ್ರದೇಶದಲ್ಲಿ ಇದ್ದಾನೆ ಎಂಬುದು '...ನಿಚಾಯ್ಯತ್ವಾದೇವಂ ವ್ಯೋಮವಚ್ಚ' (ಬ್ರ.ಸೂ.೧.೨.೭)'ವ್ಯಾಪ್ತವಾದ ಆಕಾಶವು ಅಲ್ಪಪ್ರದೇಶದಲ್ಲಿಯೂ ಇರುವಂತೆ, ವ್ಯಾಪ್ತನಾದ ಪರಮಾತ್ಮ ಹೃದಯಾದ್ಯಲ್ಪಪ್ರದೇಶದಲ್ಲಿಯೂ ಇದ್ದು ಹೃದಯಾದಿಸ್ಥಿತ ಎಂಬುದಾಗಿ ಉಪಾಸ್ಯನಾಗಿದ್ದಾನೆ.' ಎಂಬ ಸೂತ್ರದಲ್ಲಿ ನಿರೂಪಿಸಿದಂತೆ ಯುಕ್ತವೇ ಆಗಿದೆ ಎಂದು ತಿಳಿಯಬೇಕು. ||೪.೧೪||

**|| ಇತಿ ಚತುರ್ಥಖಂಡಮಂತ್ರಾರ್ಥಃ ||**

# ॥ ಅಥ ಪಂಚಮಃ ಖಂಡಃ ॥

### ಉಪನಿಷತ್

ದ್ವಾ ಸುಪರ್ಣಾ ಸಯುಜಾ ಸಖಾಯಾ
ಸಮಾನಂ ವೃಕ್ಷಂ ಪರಿಷಸ್ವಜಾತೇ ।
ತಯೋರನ್ಯಃ ಪಿಪ್ಪಲಂ ಸ್ವಾದ್ವತ್ತ್ಯ-
ನಶ್ನನ್ನನ್ಯೋ ಅಭಿಚಾಕಶೀತಿ ॥೫.೧॥

ಉಪನಿಷದರ್ಥ- ದೇಹವೆಂಬುದು ಅಶ್ವತ್ಥವೃಕ್ಷ. ಅಲ್ಲಿ ಜೀವಾತ್ಮ-ಪರಮಾತ್ಮರೆಂಬ ಹಕ್ಕಿಗಳು ಜೊತೆಯಾಗಿಯೇ ವಿಯೋಗವಿಲ್ಲದೆಯೇ ಇವೆ. ಇವುಗಳಲ್ಲಿ ಪರಮಾತ್ಮ ಉಪಕಾರಕ. ಜೀವಾತ್ಮ ಉಪಕಾರ್ಯ. ಹೀಗಾಗಿ ಪರಸ್ಪರ ಗೆಳೆಯರಾಗಿ ಇವೆ. ಭಗವಂತನಿಂದ ಅತ್ಯಂತಭಿನ್ನನಾದ ಜೀವಾತ್ಮನು ಅಶ್ವತ್ಥವೃಕ್ಷವೆಂಬ ದೇಹದಿಂದ ಜನಿತವಾದ, ಅಸಾರವಾದ, ರುಚಿಯಾಗದ, ಕರ್ಮದ ಫಲವನ್ನು ಸ್ವಾದುಪದಾರ್ಥದಂತೆ ಅನುಭವಿಸುತ್ತಾನೆ. ಜೀವಾತ್ಮನಿಂದ ಅತ್ಯಂತಭಿನ್ನನಾಗಿರುವ ಪರಮಾತ್ಮನು ಕರ್ಮಫಲವನ್ನು ಅನುಭವಿಸದೇ ಯಾವಾಗಲೂ ಪರಿಪುಷ್ಟನಾಗಿ ಇದ್ದಾನೆ.

### ಭಾಷ್ಯ

ಸ್ವಾದುವತ್ಸರ್ವದಾऽತ್ತಿ । ನ ತು ಸ್ವಾದ್ವೇವ ।

ಭಾಷ್ಯಾರ್ಥ- ಜೀವನು ಕರ್ಮಫಲವನ್ನು ಭೋಗಮಾಡುತ್ತಾನೆ. ಆದರೇ ಆ ಕರ್ಮಫಲ ವಾಸ್ತವಿಕವಾಗಿ ಸ್ವಾದುವಲ್ಲ. ರುಚಿ ಇರುವುದಿಲ್ಲ. ರುಚಿ ಇರದಿದ್ದರೂ ರುಚಿ ಇದ್ದ ಪದಾರ್ಥವನ್ನು ಭೋಗಮಾಡುವಂತೆ ಕರ್ಮಫಲವನ್ನು ಭೋಗಮಾಡುತ್ತಾನೆ.

### ಭಾಷ್ಯ

ತಸ್ಯೇದಾಹುಃ ಪಿಪ್ಪಲಂ ಸ್ವಾದ್ವಗ್ರೇ ತನ್ನೋನ್ನಶದ್ಯಃ ಪಿತರಂ ನ ವೇದ ಇತ್ಯಜ್ಞಾನಾಂ ಸ್ವಾದುನಿಷೇಧಾತ್ ।

ಭಾಷ್ಯಾರ್ಥ- ಯಾವನು ಸರ್ವೋತ್ತಮನಾಗಿರುವನೋ ಆ ಪರಮಾತ್ಮನೇ ಜೀವನು ಮಾಡುವ ಸತ್ಕರ್ಮಗಳ ಸ್ವಾದುವನ್ನು ಅಂದರೇ ಸಾರವನ್ನು ಭೋಗಮಾಡುತ್ತಾನೆ. ಯಾರು ಜಗತ್ತಿನ ಸೃಷ್ಟಿಯನ್ನು ಮಾಡುವ ಪರಮಾತ್ಮನನ್ನು ತಿಳಿದಿಲ್ಲವೋ, ಆದ್ದರಿಂದಲೇ ನರಕಾದ್ಯನರ್ಥರೂಪವಾದ ನಾಶವನ್ನು ಹೊಂದುವನೋ, ಆ ಜೀವನು ಸ್ವಾದುವನ್ನು ಭೋಗಮಾಡುವುದೇ ಇಲ್ಲ. ಹೀಗೆಂದು ಶ್ರುತಿಯಲ್ಲಿ ಅಜ್ಞರಿಗೆ ಸ್ವಾದುಭೋಗವನ್ನು ನಿಷೇಧ ಮಾಡಿದ್ದಾರೆ.

### ಭಾಷ್ಯ

ಜೀವಾದ್ಯಮೇವ ನಾಶ್ನಾತಿ ಭಗವಾನ್ । ನ ತು ನಾऽಶ್ನಾತ್ಯೇವ ।
'ತಸ್ಯೇದಾಹುಃ ಪಿಪ್ಪಲಂ ಸ್ವಾದು' ಇತ್ಯುಕ್ತತ್ವಾತ್ ।

ಭಾಷ್ಯಾರ್ಥ- ಜೀವನು ಭೋಗಿಸುವ ಅಸಾರವಾದ ಪುಣ್ಯಫಲವನ್ನಾಗಲೀ, ಅಥವಾ ಪಾಪಫಲವಾದ ದುಃಖವನ್ನಾಗಲೀ ದೇವರು ಭೋಗಿಸುವುದಿಲ್ಲ. 'ಅನಶ್ನನ್ನನ್ಯಃ' 'ದೇವರು ಭೋಗಿಸುವುದಿಲ್ಲ' ಎಂಬ ಶ್ರುತಿಗೆ ಈ ರೀತಿಯಾಗಿಯೇ ಅರ್ಥವನ್ನು ಮಾಡಬೇಕು.

'ತಸ್ಯೇದಾಹುಃ ಪಿಪ್ಪಲಂ ಸ್ವಾದು' 'ದೇವರು ಪುಣ್ಯದ ಸಾರವನ್ನು ಮಾತ್ರ ಭೋಗಿಸುತ್ತಾನೆ' ಎಂದು ಶ್ರುತಿಯು ಹೇಳುತ್ತದೆ. ಆದ್ದರಿಂದ ಸರ್ವಥಾ ಯಾವುದನ್ನೂ ಭೋಗಮಾಡುವುದಿಲ್ಲ ಎಂದು ಅರ್ಥ ಮಾಡಬಾರದು.

### ಭಾಷ್ಯ

ಸ್ವಾತಂತ್ರ್ಯೇಣೈವ ಭೋಕ್ತೃತ್ವಾದ್ ದುಖಾಭೋಗಾಚ್ಚ ಸರ್ವದಾ ।
ಅಭೋಕ್ತಾ ಚೈವ ಭೋಕ್ತಾ ಚ ಭಗವಾನ್ ವಿಷ್ಣುರವ್ಯಯಃ ॥
ಇತಿ ಚ ತತ್ತ್ವಸಾರೇ ॥

ಭಾಷ್ಯಾರ್ಥ- ನಾಶರಹಿತನಾದ ಪರಮಾತ್ಮನು, ಸ್ವತಂತ್ರವಾಗಿ ಯಾವ ಅಪೇಕ್ಷೆಯೂ ಇಲ್ಲದೇ ಸಾರವನ್ನು ಮಾತ್ರ ಭೋಗಮಾಡುತ್ತಾನೆ. ಆದ್ದರಿಂದ 'ತಸ್ಯೇದಾಹುಃ ಪಿಪ್ಪಲಂ ಸ್ವಾದು' ಎಂದು ಶ್ರುತಿಯು ದೇವರಿಗೆ ಭೋಕ್ತೃತ್ವವನ್ನು

ಹೇಳಿದೆ. ದುಃಖವನ್ನು ಎಂದಿಗೂ ಭೋಗಮಾಡುವುದಿಲ್ಲ. ಈ ಅಭಿಪ್ರಾಯದಿಂದಲೇ 'ಅನಶ್ನನ್ನನ್ಯಃ' ಎಂಬ ಶ್ರುತಿಯು ಅಭೋಕ್ತೃತ್ವವನ್ನು ದೇವರಿಗೆ ಹೇಳುತ್ತದೆ. ಆದ್ದರಿಂದ ಅಶನವನ್ನು ಪ್ರತಿಪಾದಿಸುವ ಶ್ರುತಿಗೂ ಅನಶನವನ್ನು ಪ್ರತಿಪಾದಿಸುವ ಶ್ರುತಿಗೂ ಪರಸ್ಪರ ವಿರೋಧವು ಬರುವುದಿಲ್ಲ. ತತ್ತ್ವಸಾರವು ತಿಳಿಸಿದ ಪ್ರಮೇಯವಿದು.

## ಖಂಡಾರ್ಥ

'ಸ ಏಷೋಽಂತಶ್ಚರತೇ ಬಹುಧಾ ಜಾಯಮಾನಃ' ಇತ್ಯುಕ್ತಂ ಹರೇಃ ಬಹುಧಾ ಜಾಯಮಾನತ್ವಂ ಜೀವಾಽಭೇದೇನೇತಿ ಭ್ರಮನಿರಾಸಾಯ ತಯೋಃ ಭೇದಮಾಹ- **ದ್ವಾ ಸುಪರ್ಣೇತಿ ॥** ಸಯುಜೌ ಸಂಯುಕ್ತೌ, ಸದಾ ವಿಯೋಗರಹಿತೌ, ಉಪಕಾರ್ಯೋಪಕರ್ತೃಭಾವೇನ ಸಖಾಯೌ ದ್ವೌ ಸುಪರ್ಣರೂಪೌ ಜೀವೇಶೌ ಸಮಾನಂ ವೃಕ್ಷಂ ದೇಹಾಖ್ಯಮೇಕಮಶ್ವತ್ಥವೃಕ್ಷಂ ಪರಿಷಸ್ವಜಾತೇ ಆಲಿಲಿಂಗತುಃ । ತಯೋಃ ಸುಪರ್ಣಯೋಃ ಮಧ್ಯೇ ಅನ್ಯೋ ಜೀವಃ ಪಿಪ್ಪಲಮ್ ಅಶ್ವತ್ಥಫಲರೂಪಂ ದೇಹಜನಿತಂ ಕರ್ಮಫಲಮಸ್ವಾದ್ವೇವ ಸ್ವಾದುವದತ್ತಿ । ಅನ್ಯಃ ಈಶ್ವರಃ ಅನಶ್ನನ್ ಜೀವಾದ್ಯಂ ಕರ್ಮಫಲಮನಶ್ನನ್ ಅಭಿಚಾಕಶೀತಿ, ಕಾಶೃ ದೀಪ್ತೌ, ಯಙ್‌ಲುಗಂತಮ್, ಪ್ರಕಾಶತೇ । ನಸ್ವಿತ್ಯ್ಥ ನ ತದಪೇಕ್ಷತ ಇತಿ ಭಾವಃ । ತದುಕ್ತಮೇಕಾದಶಸ್ಕಂದೇ 'ಏಕಸ್ತಯೋಃ ಖಾದತಿ ಪಿಪ್ಪಲಾನ್ನಮನ್ಯೋ ನಿರನ್ನೋಽಪಿ ಬಲೇನ ಭೂಯಾನ್' ಇತಿ ॥೩.೧॥

**ಅನುವಾದ**- ವಿಶ್ವಾದಿ ಬಹುರೂಪಗಳನ್ನು ಧರಿಸಿದ ಭಗವಂತ ದೇಹದಲ್ಲಿ ಸಂಚರಿಸುತ್ತಾನೆ ಎಂದು 'ಸ ಏಷೋಽಂತಶ್ಚರತೇ...' ಎಂಬ ಮಂತ್ರದಲ್ಲಿ ಹೇಳಿದರು. ಇವೆಲ್ಲವೂ ಜೀವನಿಂದ ಅಭಿನ್ನ ಎಂಬ ಭ್ರಮೆಯನ್ನು ನಿವಾರಿಸುವುದಕ್ಕಾಗಿ ಜೀವೇಶ್ವರರಿಗೆ ಭೇದವನ್ನು 'ದ್ವಾ ಸುಪರ್ಣಾ...' ಎಂಬ ಮಂತ್ರವು ಹೇಳುತ್ತದೆ.

ಸಯುಜೌ=ಸಂಯುಕ್ತವಾದ, ಯಾವಾಗಲೂ ವಿಯೋಗವಿಲ್ಲದಿರುವ, ಭಗವಂತ ನಿರ್ನಿಮಿತ್ತ ಉಪಕಾರಕ, ಜೀವ ಸದಾ ಉಪಕಾರ್ಯನಾದುದರಿಂದ

ಅವರಿಬ್ಬರೂ ಗೆಳೆಯರಾಗಿದ್ದಾರೆ. ಸುಪರ್ಣರೂಪರಾದ ಜೀವೇಶರಿಬ್ಬರೂ ದೇಹವೆಂಬ ಒಂದೇ ಅಶ್ವತ್ಥವೃಕ್ಷವನ್ನು ಆಲಿಂಗಿಸಿಕೊಂಡು ಇದ್ದಾರೆ. ದೇಹದಲ್ಲಿದ್ದಾರೆ ಎಂದು ಅರ್ಥ. ಈ ಎರಡು ಪಕ್ಷಿಗಳ ಮಧ್ಯದಲ್ಲಿ ಭಗವಂತನಿಂದ ಭಿನ್ನನಾದ ಜೀವನೆಂಬ ಪಕ್ಷಿಯು ಅಶ್ವತ್ಥಫಲರೂಪವಾದ, ದೇಹಜನಿತವಾದ ಕರ್ಮಫಳಗಳನ್ನು ಸ್ವಯಂ ಅಸ್ವಾದುವಾಗಿದ್ದರೂ ಸ್ವಾದುವೆಂದೇ ಅನುಭವಿಸುತ್ತಾನೆ. ಜೀವನಿಂದ ಭಿನ್ನನಾಗಿರುವ ಈಶ್ವರನು, ಜೀವನು ಸ್ವೀಕರಿಸುವ ಕರ್ಮಫಲಗಳನ್ನು ಅನುಭವಿಸದೇ ಪ್ರಕಾಶಿಸುತ್ತಾ ಇದ್ದಾನೆ. ತಾನು ಇರುವುದಕ್ಕಾಗಿ ಈಶ್ವರನು ಈ ಕರ್ಮಫಲಗಳನ್ನು ಅಪೇಕ್ಷಿಸುವುದಿಲ್ಲ ಎಂದು ಭಾವ. 'ಏಕಸ್ತಯೋಃ ಖಾದತಿ ಪಿಪ್ಪಲಾಽನ್ನೋ ಅನ್ಯೋ ನಿರನ್ನೋಽಪಿ ಬಲೇನ ಭೂಯಾನ್' ಎಂದು ಭಾಗವತದ ಏಕಾದಶಸ್ಕಂಧದಲ್ಲಿಯೂ ಇದೇ ವಿಷಯವನ್ನು ಹೇಳಿದ್ದಾರೆ. ।।೩.೧।।

### ಉಪನಿಷತ್

**ಸಮಾನೇ ವೃಕ್ಷೇ ಪುರುಷೋ ನಿಮಗ್ನಃ**
**ಅನೀಶಯಾ ಶೋಚತಿ ಮುಹ್ಯಮಾನಃ ।**
**ಜುಷ್ಟಂ ಯದಾ ಪಶ್ಯತ್ಯನ್ಯಮೀಶಂ**
**ಅಸ್ಯ ಮಹಿಮಾನಮಿತಿ ವೀತಶೋಕಃ ।।೩.೨।।**

**ಉಪನಿಷದರ್ಥ-** ಶರೀರವೆಂಬ ಅಶ್ವತ್ಥವೃಕ್ಷದಲ್ಲಿಯೇ ಜೀವನು ಪರಮಾತ್ಮನೊಡನೆ ವಾಸಿಸುತ್ತಿದ್ದಾನೆ. ನಿಯಾಮಕರು ಮತ್ತೊಬ್ಬರಿಲ್ಲದ, ಸ್ವತಂತ್ರವಾದ, ಜ್ಞಾನಾನಂದಾತ್ಮಕವಾದ ಭಗವಂತನ ಇಚ್ಛೆಯಿಂದ ಜೀವನು ದೇಹ-ಗೇಹಾದಿಗಳಲ್ಲಿ ಮಮತೆಯುಳ್ಳವನಾಗಿದ್ದಾನೆ. 'ನಾನೇ ಕರ್ತಾ' 'ನಾನೇ ಭೋಕ್ತಾ' ಎಂಬ ರೀತಿಯಲ್ಲಿ ಕರ್ತೃತ್ವಾಭಿಮಾನ ಉಳ್ಳವನಾಗಿ, ಸಂಸಾರಿಯಾಗಿ ಶೋಕವನ್ನು ಅನುಭವಿಸುತ್ತಾನೆ. ಯಾವಾಗ ಸರ್ವಸೇವ್ಯನಾದ ಪರಮಾತ್ಮನನ್ನು ಜೀವನಿಂದ ಅತ್ಯಂತಭಿನ್ನನೆಂದು ನಿಶ್ಚಯಿಸಿಕೊಳ್ಳುತ್ತಾನೋ ಮತ್ತು 'ತದೇತತ್ಸತ್ಯಂ' ಇತ್ಯಾದಿ ಮಂತ್ರಗಳಿಂದ ಉಕ್ತವಾದ ಭಗವಂತನ ಮಹಿಮೆಯನ್ನು ತಿಳಿಯುತ್ತಾನೋ ಆವಾಗ ಶೋಕಭೂಯಿಷ್ಠವಾದ ಸಂಸಾರವನ್ನು ಕಳೆದುಕೊಳ್ಳುತ್ತಾನೆ.

### ಭಾಷ್ಯ

**ನಾಸ್ತೀಶೋऽಸ್ಯಾ ಯತೋऽನ್ಯೋ ಹಿ ತತೋऽನೀಶಾ ಹರೇರ್ಮತಿಃ । ತಯಾ ಮುಹ್ಯತಿ ಜೀವಸ್ತಮನ್ಯಂ ಜ್ಞಾತ್ವಾ ವಿಮುಚ್ಯತೇ । ಜೀವಾದನ್ಯಃ ಸ್ವತಂತ್ರೋऽಯಂ ಯತೋऽತಃ ಪುರುಷೋತ್ತಮಃ ॥ ಇತಿ ಬ್ರಹ್ಮಸಾರೇ।**

ಭಾಷ್ಯಾರ್ಥ- ಭಗವಂತನ ಇಚ್ಛೆಗೆ ನಿಯಾಮಕನು ಯಾರೂ ಇಲ್ಲ. ಅಂದರೇ ಭಗವಂತನ ಇಚ್ಛೆಯನ್ನು ಪ್ರೇರಿಸುವ ಪದಾರ್ಥವು ಪ್ರಪಂಚದಲ್ಲಿ ಯಾವುದೂ ಇಲ್ಲ. ಆದ್ದರಿಂದ ಆ ಇಚ್ಛೆಯನ್ನು ಅನೀಶಾ ಎಂದು ವ್ಯವಹರಿಸುತ್ತಾರೆ. ಇಂತಹ ಸ್ವತಂತ್ರವಾದ ಭಗವಂತನ ಇಚ್ಛೆಯಿಂದಲೇ ಜೀವನು ನಾನೇ ಕರ್ತಾ ಎಂಬ ಅಭಿಮಾನಕ್ಕೆ ಮೋಹಕ್ಕೆ ಒಳಗಾಗುತ್ತಾನೆ. ಭಗವಂತ ಕ್ಷರಾಕ್ಷರರೆನಿಸಿದ ಬ್ರಹ್ಮ-ರಮಾದಿಪುರುಷರಿಗಿಂತಲೂ ಉತ್ತಮನಾಗಿದ್ದಾನೆ. ಆದ್ದರಿಂದಲೇ ಸ್ವತಂತ್ರನಾಗಿದ್ದಾನೆ. ರಮಾ-ಬ್ರಹ್ಮಾದಿಗಳೇ ಅಸ್ವತಂತ್ರರಾಗಿರುವಾಗ ಜೀವನಿಗೆಲ್ಲಿಯದು ಸ್ವಾತಂತ್ರ್ಯ. ಆದ್ದರಿಂದ ಪರಮಾತ್ಮ ಜೀವರಿಂದ ವಿಲಕ್ಷಣನಾಗಿದ್ದಾನೆ ಅತ್ಯಂತಭಿನ್ನನಾಗಿದ್ದಾನೆ ಎಂದು ತಿಳಿಯಬೇಕು. ಹೀಗೆ ತಿಳಿದವನೇ ಮುಕ್ತನಾಗುತ್ತಾನೆ. ಇದು ಬ್ರಹ್ಮಸಾರವು ತಿಳಿಸುವ ವಿಷಯವಾಗಿದೆ.

### ಖಂಡಾರ್ಥ

ಅಸ್ಯ ಬಂಧಮೋಕ್ಷಹೇತೂ ಕ್ರಮೇಣಾऽಹ- **ಸಮಾನ ಇತಿ ॥ ಜುಷ್ಟಮಿತಿ ॥** ಸಮಾನೇ ಏಕಸ್ಮಿನ್ ದೇಹಾಖ್ಯೇ ಪಿಪ್ಪಲವೃಕ್ಷೇ ನಿಮಗ್ನೋ ನಿರೂಢೋ ಮಮತಾದ್ಯಭಿಮಾನವಾನ್ ಪುರುಷೋ ಜೀವಃ ಅನೀಶಯಾ ನ ವಿದ್ಯತೇ ಅನ್ಯಃ ಈಶಃ ಯಸ್ಯಾಃ ಸಾऽನೀಶಾ ಸ್ವತಂತ್ರಾ ಭಗವನ್ಮತಿಃ ತಯಾ ಮುಹ್ಯಮಾನಃ ಶೋಚತಿ, ಭಗವಂತಮಜ್ಞಾತ್ವಾ ಸಾಂಸಾರಿಕಕ್ಲೇಶಮನುಭವತಿ । ಜುಷ್ಟಂ, ಜುಷೀ ಪ್ರೀತಿಸೇವನಯೋಃ, ಸರ್ವಸೇವ್ಯಮೀಶಂ ವಿಷ್ಣುಂ ಜೀವಾದನ್ಯಮಿತಿ, 'ತದೇತತ್ಸತ್ಯಮ್' ಇತ್ಯಾದಿನೋಕ್ತಪ್ರಕಾರೇಣ ಅಖಿಲಕರ್ಮಾರಾಧ್ಯತ್ವ-ಜಗತ್ಸ್ರಷ್ಟೃತ್ವಾದಿರೂಪಮಸ್ಯೇಶಸ್ಯ ಮಹಿಮಾನಂ ಚ ಯದಾ ಪಶ್ಯತಿ ಪುರುಷೋ ಜೀವಃ ತದಾ ವೀತಶೋಕಃ ಅಪಗತಕ್ಲೇಶಃ ಮುಕ್ತೋ ಭವತೀತ್ಯರ್ಥಃ ॥

**ಅನುವಾದ-** ಜೀವನ ಬಂಧ ಮತ್ತು ಮೋಕ್ಷಗಳಿಗೆ ಕಾರಣವಾದವುಗಳನ್ನು ಕ್ರಮೇಣ **'ಸಮಾನೇ...'** ಎಂಬ ಮಂತ್ರದಿಂದ ಉಪದೇಶಿಸುತ್ತಾರೆ.

ದೇಹವೆಂಬ ಒಂದೇ ಅಶ್ವತ್ಥವೃಕ್ಷದಲ್ಲಿ ಮಮತಾದಿ ಅಭಿಮಾನ ಉಳ್ಳ ಜೀವನು ಅನೀಶಯಾ=ಸ್ವತಂತ್ರವಾದ ಪರಮಾತ್ಮನ ಇಚ್ಛೆಯಿಂದ, ಮೋಹಿತನಾಗಿ ಶೋಕಕ್ಕೆ ಒಳಗಾಗುತ್ತಾನೆ. ದೇವರನ್ನು ತಿಳಿಯದೇ ಸಾಂಸಾರಿಕವಾದ ದುಃಖಗಳನ್ನು ಅನುಭವಿಸುತ್ತಾನೆ. ಜುಷ್ಟವ್= ಸರ್ವಸೇವ್ಯನಾದ ಪರಮಾತ್ಮನನ್ನು ಜೀವರಿಂದ ಭಿನ್ನನೆಂದು, 'ತದೇತತ್ಸತ್ಯಂ' ಇತ್ಯಾದಿಗಳಲ್ಲಿ ಉಕ್ತವಾದಂತೆ ಅಖಿಲಕರ್ಮಾರಾಧ್ಯತ್ವ, ಜಗತ್ಸ್ರಷ್ಟೃತ್ವಾದಿ-ರೂಪವಾದ ಶ್ರೀಹರಿಯ ಮಹಾಮಹಿಮೆಗಳನ್ನು ಯಾವಾಗ ಜೀವನು ತಿಳಿಯುತ್ತಾನೋ ತಿಳಿದು ದೇವರನ್ನು ಪ್ರತ್ಯಕ್ಷವಾಗಿ ಕಾಣುತ್ತಾನೋ ಆವಾಗ ಸಾಂಸಾರಿಕವಾದ ಶೋಕಗಳನ್ನು ಕಳೆದುಕೊಂಡವನಾಗಿ ಮುಕ್ತನಾಗುತ್ತಾನೆ. ||೫.೨||

**ಉಪನಿಷತ್**

**ಯದಾ ಪಶ್ಯಃ ಪಶ್ಯತೇ ರುಕ್ಮವರ್ಣಂ**
**ಕರ್ತಾರಮೀಶಂ ಪುರುಷಂ ಬ್ರಹ್ಮಯೋನಿಮ್ ।**
**ತದಾ ವಿದ್ವಾನ್ ಪುಣ್ಯಪಾಪೇ ವಿಧೂಯ**
**ನಿರಂಜನಃ ಪರಮಂ ಸಾಮ್ಯಮುಪೈತಿ ||೫.೩||**

**ಉಪನಿಷದರ್ಥ-** ಭಗವಂತ ರುಕ್ಮವರ್ಣದವನಾಗಿದ್ದಾನೆ. ಮತ್ತು ಶೋಭನವಾದ ಸಕಲಗುಣಗಳಿಂದಲೂ ಯುಕ್ತನಾಗಿದ್ದಾನೆ. ಕುಂಬಾರನಂತೆ ಈ ಎಲ್ಲ ಜಗತ್ತಿಗೆ ನಿಮಿತ್ತಕಾರಣನಾಗಿದ್ದಾನೆ. ಎಲ್ಲರಿಗೂ ಸ್ವಾಮಿಯಾಗಿದ್ದಾನೆ. ಮಹಾಲಕ್ಷ್ಮಿಗೆ ಸ್ವಾಮಿಯಾಗಿದ್ದಾನೆ. ಎಲ್ಲ ಜೀವರಾಶಿಗಳ ದೇಹಗಳಲ್ಲಿ ನಿಯಾಮಕನಾಗಿ ಇದ್ದಾನೆ. ಬ್ರಹ್ಮದೇವರಿಗೆ ಜನಕನಾಗಿದ್ದಾನೆ. ಇಂತಹ ಪರಮಾತ್ಮನನ್ನು ಜೀವನು ಯಾವಾಗ ಅಪರೋಕ್ಷತಃ ತಿಳಿದುಕೊಳ್ಳುತ್ತಾನೋ ಆವಾಗಲೇ ಅಪ್ರಾರಬ್ಧವಾದ, ಅನಭೀಷ್ಟವಾದ ಪುಣ್ಯವನ್ನು ಮತ್ತು ಅಪ್ರಾರಬ್ಧವಾದ ಪಾಪವನ್ನು ಕಳೆದುಕೊಂಡು, ಭೋಗದಿಂದ ಪ್ರಾರಬ್ಧವನ್ನೂ

ಕಳೆದುಕೊಂಡವನಾಗಿ, ನಿರ್ದು:ಖತ್ವೇನ, ಪರಮಾನಂದತ್ವೇನ ಪರಮಾತ್ಮನ ಸಾಮ್ಯವನ್ನು ಪಡೆಯುತ್ತಾನೆ.

## ಭಾಷ್ಯ

**ಪುಣ್ಯಂ ಚಾऽನಿಷ್ಟಂ ವಿಧೂಯ ॥೩॥**

ಭಾಷ್ಯಾರ್ಥ- 'ತದಾ ವಿದ್ವಾನ್ ಪುಣ್ಯಪಾಪೇ ವಿಧೂಯ' ಎಂಬಲ್ಲಿ ಅಪರೋಕ್ಷಜ್ಞಾನದಿಂದ ಜೀವನು ಸಂಪಾದಿಸಿದ ಪಾಪವು ಮತ್ತು ಪುಣ್ಯವೂ ನಷ್ಟವಾಗುತ್ತದೆ ಎಂದು ಹೇಳಿದಂತೆ ತೋರುತ್ತದೆ. ಇದು ಸರಿಯಲ್ಲ. ಪ್ರಾರಬ್ಧವಾದ ಪುಣ್ಯ ಭೋಗೈಕನಾಶ್ಯವಾಗಿದೆ. ಅಪರೋಕ್ಷದಿಂದಲ್ಲ. ಅಕಾಮ್ಯವಾದ ಪುಣ್ಯ ಜ್ಞಾನಜನಕವಾಗಿದೆ. ಆದ್ದರಿಂದ ಅನಿಷ್ಟವಾದ ಪುಣ್ಯದ ನಾಶವೆಂದು ತಿಳಿಯಬೇಕು.

ಈ ವಚನದ ಅಭಿಪ್ರಾಯವನ್ನು ಈ ರೀತಿಯಾಗಿ ತಿಳಿಯಬೇಕು. ಪುಣ್ಯವು ಕಾಮ್ಯ ಅಕಾಮ್ಯ ಎಂದು ಎರಡು ವಿಧವಾಗಿದೆ. ಅಕಾಮ್ಯವಾದ ಪುಣ್ಯ ಅಪರೋಕ್ಷಜ್ಞಾನಜನಕವಾಗಿ ಉಪಕ್ಷೀಣವಾಗುತ್ತದೆ. ಕಾಮ್ಯವಾದ ಪುಣ್ಯವು ಕೂಡಾ ಪ್ರಾರಬ್ಧ ಅಪ್ರಾರಬ್ಧ ಎಂದು ಎರಡು ವಿಧವಾಗಿದೆ. ಪ್ರಾರಬ್ಧವೂ ಇಷ್ಟ ಅನಿಷ್ಟ ಎಂದು ಎರಡು ವಿಧವಾಗಿದೆ. ಇಷ್ಟನಾಶವಿದು ಪುರುಷಾರ್ಥವೇ ಅಲ್ಲ. ಆದ್ದರಿಂದ ಇಷ್ಟವಾದ ಪ್ರಾರಬ್ಧವು ಜ್ಞಾನದಿಂದ ನಷ್ಟವಾಗುವುದಿಲ್ಲ. ಕಿಂತು ಭೋಗದಿಂದಲೇ ನಷ್ಟವಾಗುತ್ತದೆ. ಆದ್ದರಿಂದ ಪರಿಶೇಷದಿಂದ ಅನಿಷ್ಟವಾದ ಪುಣ್ಯ ಮತ್ತು ಅಪ್ರಾರಬ್ಧವಾದ ಕರ್ಮ ಈ ಎರಡೂ ಅಪರೋಕ್ಷಜ್ಞಾನದಿಂದ ನಷ್ಟವಾಗುತ್ತದೆಂದು ತಿಳಿಯಬೇಕು. ಈ ವಿಷಯವನ್ನು ಶ್ರೀಮದಾಚಾರ್ಯರು ಈ ರೀತಿಯಾಗಿ ತಿಳಿಸಿದ್ದಾರೆ.

ಅನಭೀಷ್ಟಮನಾರಬ್ಧಂ ಪುಣ್ಯಮಪ್ಯಸ್ಯ ನಶ್ಯತಿ ।
ಕಿಮು ಪಾಪಂ ಪರಬ್ರಹ್ಮಜ್ಞಾನಿನೋ ನಾऽತ್ರ ಸಂಶಯಃ ॥

## ಖಂಡಾರ್ಥ

ಪ್ರತಿಬಂಧಕಕರ್ಮಣೋ ಭಾವಾತ್ಕಥಂ ತದ್ದೃಷ್ಟ್ಯಾ ಮುಕ್ತಿಃ? ಅಶರೀರಸ್ಯ ದೃಷ್ಟಿರ್ವಾ ಕಥಮಿತ್ಯತಃ ಪೂರ್ವಮಂತ್ರಾರ್ಥಮೇವ ವಿಶದಮಾಹ- **ಯದಾ ಪಶ್ಯ ಇತಿ ।।** ಪಶ್ಯತೀತಿ ಪಶ್ಯೋ ದ್ರಷ್ಟಾ ಜೀವಃ, ಯದಾ ರುಕ್ಮವರ್ಣಂ ಹೇಮವರ್ಣವಿಗ್ರಹಂ 'ರೂಪೋಪನ್ಯಾಸಾಚ್ಚ' ಇತಿ ಸೂತ್ರಾತ್ ಬ್ರಹ್ಮಯೋನಿಂ ಹಿರಣ್ಯಗರ್ಭಸ್ಯ ಕಾರಣಮ್, ಜಗತ್ಕರ್ತಾರಂ ಪಶ್ಯತೇ ಪಶ್ಯತಿ ತದಾ ಅಸೌ ವಿದ್ವಾನ್ ಜ್ಞಾನೀ ಅನಿಷ್ಟಂ ಪುಣ್ಯಂ ಪಾಪಂ ಚ ವಿಹಾಯ 'ತದಧಿಗಮ ಉತ್ತರಪೂರ್ವಾಘಯೋರಶ್ಲೇಷವಿನಾಶೌ...' ಇತಿ ಸೂತ್ರೋಕ್ತೇಃ । ನಿರಂಜನಃ ನಿರ್ಲೇಪಃ, 'ಅಂಜನಾಖ್ಯಾವಿದ್ಯಾಹೀನಃ' ಇತಿ ಸುಧೋಕ್ತೇಃ, ಪರಮಂ ಸಾಮ್ಯಂ ನಿರ್ದುಃಖಪೂರ್ಣಾನಂದತ್ವಾದಿಬ್ರಹ್ಮಸಾಮ್ಯಂ ಆಪ್ನೋತಿ । 'ಪುಂಸ್ತ್ವಾದಿವತ್ತ್ವಸ್ಯ' ಇತಿ ಸೂತ್ರೋಕ್ತದಿಶಾ ಪ್ರಾಗಪಿ ಸಾಮ್ಯಸತ್ತ್ವೇಽ- ಪ್ಯಪ್ರಾಪ್ತಭೋಗಪ್ರಾಪ್ಯಭಿಪ್ರಾಯೇಣ ಪರಮಮಿತ್ಯುಕ್ತಿಃ । ಅಭಿವ್ಯಕ್ತ್ಯಪೇಕ್ಷಯಾ ವಾ ।।೩.೩।।

**ಅನುವಾದ-** ಮುಕ್ತಿಗೆ ಪ್ರತಿಬಂಧಕವಾದ ಕರ್ಮಗಳು ಇರುವಾಗ ಭಗವಂತನ ದರ್ಶನದಿಂದ ಮುಕ್ತಿಯಾಗುವುದು ಹೇಗೆ ಎಂಬ ಪ್ರಶ್ನೆಗೆ ಹಿಂದೆ ಹೇಳಿದ ಮಂತ್ರಾರ್ಥವನ್ನೇ 'ಯದಾ ಪಶ್ಯಃ...' ಎಂಬ ಮಂತ್ರವು ವಿಸ್ತಾರವಾಗಿ ಹೇಳುತ್ತದೆ.

ಪಶ್ಯತಿ=ನೋಡುತ್ತಾನೆ ಆದ್ದರಿಂದ ಪಶ್ಯ ಎಂದರೇ ಜೀವ ಎಂದು ಅರ್ಥ. ಈ ಜೀವನು ಯಾವಾಗ ಸ್ವರ್ಣವರ್ಣದ ಕಾಂತಿಯಿಂದ ಪರಿಶೋಭಿಸುವ ದೇಹವಿರುವ, ಈ ವಿಷಯವನ್ನು 'ರೂಪೋಪನ್ಯಾಸಾಚ್ಚ(ಬ್ರ.ಸೂ.೧.೨.೨೩) 'ರುಕ್ಮವರ್ಣವನ್ನು ಹೇಳಿರುವುದರಿಂದ ಅದೃಶ್ಯತ್ವಾದಿಗುಣಗಳುಳ್ಳವನು ವಿಷ್ಣುವೇ ಆಗಿದ್ದಾನೆ.' ಎಂಬ ಸೂತ್ರವೂ ತಿಳಿಸುತ್ತದೆ. ಬ್ರಹ್ಮದೇವರಿಗೆ ಕಾರಣನಾದ, ಜಗತ್ಕರ್ತೃವಾದ ಪರಮಾತ್ಮನನ್ನು ಅಪರೋಕ್ಷತಃ ನೋಡುತ್ತಾನೋ ಆವಾಗ ಈ ಜ್ಞಾನಿಯು ಅನಿಷ್ಟವಾದ ಪುಣ್ಯವನ್ನು ಪಾಪವನ್ನು ಪರಿತ್ಯಜಿಸಿ, 'ತದಧಿಗಮ ಉತ್ತರಪೂರ್ವಾಘಯೋಃ

ಅಶ್ಲೇಷವಿನಾಶೌ ತದ್ವ್ಯಪದೇಶಾತ್'(ಬ್ರ.ಸೂ.೪.೧.೧೩) 'ಭಗವಂತನ ಅಪರೋಕ್ಷಜ್ಞಾನ- ವಾದಮೇಲೆ, ಅಪರೋಕ್ಷಾನಂತರ ಮಾಡುವ ಕರ್ಮಗಳು ಜೀವನಿಗೆ ಲೇಪವಾಗುವುದಿಲ್ಲ. ಜ್ಞಾನಾತ್ಪೂರ್ವದಲ್ಲಿ ಮಾಡಿದ ಅಪ್ರಾರಬ್ಧವಾದ ಕರ್ಮ ನಷ್ಟವಾಗುತ್ತದೆ. ತದ್ಯಥಾ ಪುಷ್ಕರಪಲಾಶೇ... ಎಂಬ ಶ್ರುತಿಯು ಕೂಡಾ ಇದನ್ನು ತಿಳಿಸುತ್ತದೆ.' ಎಂಬ ಸೂತ್ರದಲ್ಲಿ ಈ ವಿಷಯವನ್ನು ಸ್ಪಷ್ಟವಾಗಿ ತಿಳಿಸಿದ್ದಾರೆ. ನಿರಂಜನಃ=ಯಾವುದರ ಲೇಪವಿಲ್ಲದೇ, 'ಅಂಜನಾಖ್ಯಾವಿದ್ಯಾಹೀನಃ' (ಅಂಜನವೆಂಬ ಅವಿದ್ಯಾರಹಿತನಾಗಿ ಎಂದು ಸುಧಾದಲ್ಲಿ ಹೇಳಿದ್ದಾರೆ.)ನಿರ್ದುಃಖಪೂರ್ಣಾನಂದತ್ವಾದಿನಾ ಪರಮಾತ್ಮನ ಸಾಮ್ಯವನ್ನು ಪಡೆಯುತ್ತಾನೆ ಎಂದು ಅರ್ಥ. 'ಪುಂಸ್ತ್ವಾದಿವತ್ತಸ್ಯ...' (ಬ್ರ.ಸೂ.೨.೩.೩೨) 'ಬಾಲ್ಯದಲ್ಲಿದ್ದ ಪುಂಸ್ತ್ವ-ಸ್ತ್ರೀತ್ವಗಳು ಯೌವನದಲ್ಲಿ ಅಭಿವ್ಯಕ್ತವಾಗುವಂತೆ ಜೀವನಲ್ಲಿ ಮೊದಲೇ ಇದ್ದ ಜ್ಞಾನಾನಂದಾದಿಗಳು ಮುಕ್ತಿಯಲ್ಲಿ ಅಭಿವ್ಯಕ್ತವಾಗುತ್ತವೆ' ಎಂಬ ಸೂತ್ರದಲ್ಲಿ ಹೇಳಿದಂತೆ ಸಂಸಾರದಲ್ಲಿ ಚೇತನತ್ವಾದಿನಾ ಸ್ವಲ್ಪ ಸಾಮ್ಯವಿದ್ದರೂ ಅಪ್ರಾಪ್ತವಾದ ಭೋಗದ ಪ್ರಾಪ್ತಿಯಾಗುತ್ತದೆ ಎನ್ನುವ ಅಭಿಪ್ರಾಯದಿಂದ, ಅಥವಾ ಅಭಿವ್ಯಕ್ತವಾಗುತ್ತದೆ ಎಂಬ ಅಭಿಪ್ರಾಯದಿಂದ 'ಪರಮಂ ಸಾಮ್ಯಂ' ಎಂದಿರುವರು. ಈ ಸಾಮ್ಯ ಸಂಸಾರದಲ್ಲಿ ಇರುವುದಿಲ್ಲ. ॥೫.೩॥

### ಉಪನಿಷತ್

**ಪ್ರಾಣೋ ಹ್ಯೇಷ ಸರ್ವಭೂತೈರ್ವಿಭಾತಿ**
**ವಿಜಾನನ್ ವಿದ್ವಾನ್ ಭವತೇ ನಾಽತಿವಾದೀ ।**
**ಆತ್ಮಕ್ರೀಡ ಆತ್ಮರತಿಃ ಕ್ರಿಯಾ-**
**ವಾನೇಷ ಬ್ರಹ್ಮವಿದಾಂ ವರಿಷ್ಠಃ ॥೫.೪॥**

**ಉಪನಿಷದರ್ಥ-** ಎಲ್ಲ ಭೂತಗಳಿಂದ ಉಪಚಿತವಾದ, ತೈಜಸಾ-ಹಂಕಾರಕಾರ್ಯಗಳಾದ ಎಲ್ಲ ಇಂದ್ರಿಯಗಳಿಂದ ಇಂದ್ರಿಯಾಭಿಮಾನಿಗಳಾದ ದೇವತೆಗಳಿಂದ ಕೂಡಿಕೊಂಡು ಎಲ್ಲ ಜೀವರ ದರ್ಶನ ಮೊದಲಾದ ಸಕಲವ್ಯಾಪಾರಗಳಿಗೆ ಪ್ರೇರಕನಾದುದರಿಂದ ಪರಮಾತ್ಮ ಪ್ರಾಣನಾಮಕ-

ನಾಗಿದ್ದಾನೆ. ಹೀಗಾಗಿ ಸ್ವತಂತ್ರನಾಗಿದ್ದಾನೆ. ಭಗವಂತನ ಸ್ವಾತಂತ್ರ್ಯವನ್ನು ತಿಳಿದಿರುವ ಅಪರೋಕ್ಷಜ್ಞಾನಿಯು 'ನಾನೇ ದ್ರಷ್ಟಾ ನಾನೇ ಶ್ರೋತಾ' ಎಂಬ ಅತಿವಾದವನ್ನು ಮಾಡುವುದಿಲ್ಲ. ಅವನು ಭಗವದ್ವಿಷಯಕವಾದ ಕ್ರೀಡಾ ಉಳ್ಳವನಾಗುತ್ತಾನೆ. ಭಗವಂತನ ಸೃಷ್ಟಿ ಮೊದಲಾದ ಕ್ರೀಡೆಗಳನ್ನು ಧ್ಯಾನಮಾಡುತ್ತಾ ಇರುತ್ತಾನೆ. ಭಗವಂತನ ದರ್ಶನದಿಂದ ಜನ್ಯವಾದ ಸ್ವರೂಪಸುಖದಿಂದ ಯುಕ್ತನಾಗುತ್ತಾನೆ. ಭಗವತ್ಪೂಜಾರೂಪವಾದ ಕರ್ಮಗಳನ್ನು ಮಾಡುತ್ತಾ ಇರುತ್ತಾನೆ. ಈ ಬ್ರಹ್ಮಾಪರೋಕ್ಷಜ್ಞಾನಿಯು ತನಗಿಂತಲೂ ಕಡಿಮೆಯವರಾದ ಬ್ರಹ್ಮಜ್ಞಾನಿಗಳಿಂದ ಪೂಜ್ಯನಾಗಿ ಅವರಿಗೆ ಶಾಸ್ತ್ರೋಪದೇಶವನ್ನು ಮಾಡುತ್ತಾ ಇರುತ್ತಾನೆ.

### ಖಂಡಾರ್ಥ

ವಿದ್ವಾನಿತಿ ಪ್ರಕೃತಜೀವನ್ಮುಕ್ತಸ್ಯ ಸ್ಥಿತಿಪ್ರಕಾರಮಾಹ- **ಪ್ರಾಣೋ ಹ್ಯೇಷ ಇತಿ** ॥ ವಿದ್ವಾನತಿವಾದೀ ನ ಭವತೇ ನ ಭವತಿ । ಕುತಃ? ಸರ್ವಭೂತ್ಯೈಃ ಸರ್ವೇಂದ್ರಿಯಾದಿಭಿರೇಷಃ ಪ್ರಾಣ ಏವ ಪ್ರಕೃಷ್ಟಚೇಷ್ಟಕೋ ಹರಿರೇವ ವಿಭಾತಿ ಸ್ವತಂತ್ರೋ ವರ್ತತೇ, ಅಹಂ ತು ಅಸ್ವತಂತ್ರ ಇತಿ ವಿಜಾನನ್ ಹಿ ಯತೋ ವರ್ತತೇ ಅತ ಇತಿ ಯೋಜನಾ । ಅತಿವಾದೀ ನ ಚೇತ್ಕಥಂ ತರ್ಹ್ಯಾಸ್ತ ಇತ್ಯತ ಆಹ- **ಆತ್ಮಕ್ರೀಡ ಇತಿ** ॥ ಆತ್ಮನಾ ಭಗವತಾ ಕ್ರೀಡತ ಇತ್ಯಾತ್ಮಕ್ರೀಡಃ । ಆತ್ಮದರ್ಶನಜಂ ಸುಖಂ ಪ್ರಾಪ್ತ ಇತ್ಯಾತ್ಮರತಿಃ । ಭಗವದಾರಾಧನೈಕಕ್ರಿಯಾವಾನ್ । ಬ್ರಹ್ಮವಿದಾಮೇಷ ವರಿಷ್ಠಃ ಶ್ರೇಷ್ಠಃ ॥೫.೪॥

**ಅನುವಾದ- 'ತದಾ ವಿದ್ವಾನ್...'** ಎಂಬಲ್ಲಿ ವಿದ್ವಾನ್ ಎಂಬ ಶಬ್ದದಿಂದ ಪ್ರಕೃತನಾದ ಜೀವನ್ಮುಕ್ತನ ಸ್ಥಿತಿ ಹೇಗಿರುತ್ತದೆಂದು 'ಪ್ರಾಣೋ ಹ್ಯೇಷ...' ಎಂಬ ಮಂತ್ರದಿಂದ ಹೇಳುತ್ತಾರೆ.

ಜೀವನ್ಮುಕ್ತನು ಅತಿವಾದಿಯಾಗುವುದಿಲ್ಲ. ಯಾಕೆಂದರೇ? ಸರ್ವಭೂತ್ಯೈಃ =ಎಲ್ಲ ಇಂದ್ರಿಯಾದಿಗಳ ಮುಖಾಂತರ, ಸರಿಯಾಗಿ ಚೇಷ್ಟಕನಾದವನು ಪರಮಾತ್ಮನಾದುದರಿಂದ ಪ್ರಾಣನಾಮಕನಾದ ಪರಮಾತ್ಮನೇ

ಸ್ವತಂತ್ರನಾಗಿದ್ದಾನೆ. ನಾನು ಅಸ್ವತಂತ್ರನು. ಆದ್ದರಿಂದ ಅತಿಯಾಗಿ ಮಾತುಗಳನ್ನಾಡುವುದಿಲ್ಲ. ಹೀಗಾಗಿ ಜೀವನ್ಮುಕ್ತನು ಅತಿವಾದಿಯಾಗುವುದಿಲ್ಲ ಎಂದು ಹೇಳಿದ್ದಾರೆ. ಹಾಗಾದರೇ ಜೀವನ್ಮುಕ್ತನು ಹೇಗೆ ಇರುತ್ತಾನೆ ಎಂಬುದನ್ನು 'ಆತ್ಮಕ್ರೀಡಃ...' ಎಂಬ ವಚನವು ತಿಳಿಸುತ್ತದೆ. ಆತ್ಮನಾಮಕನಾದ ಪರಮಾತ್ಮನಿಂದಲೇ ಕ್ರೀಡಿಸುತ್ತಾನೆ. ಪರಮಾತ್ಮನ ದರ್ಶನದಿಂದ ಸುಖವನ್ನು ಪಡೆದಿರುತ್ತಾನೆ. ಭಗವಂತನ ಆರಾಧನೆಯನ್ನೇ ಯಾವಾಗಲೂ ಮಾಡುತ್ತ ಇರುತ್ತಾನೆ. ಆದ್ದರಿಂದ ಬ್ರಹ್ಮಜ್ಞಾನಿಗಳಲ್ಲಿ ಇವನು ಶ್ರೇಷ್ಠನಾದವನು. ॥೩.೪॥

**ಉಪನಿಷತ್**

**ಸತ್ಯೇನ ಲಭ್ಯಸ್ತಪಸಾ ಹ್ಯೇಷ ಆತ್ಮಾ**
**ಸಮ್ಯಗ್ ಜ್ಞಾನೇನ ಬ್ರಹ್ಮಚರ್ಯೇಣ ನಿತ್ಯಮ್ ।**
**ಅಂತಃಶರೀರೇ ಜ್ಯೋತಿರ್ಮಯೋ ಹಿ ಶುಭ್ರೋ**
**ಯಂ ಪಶ್ಯಂತಿ ಯತಯಃ ಕ್ಷೀಣದೋಷಾಃ ॥೩.೫॥**

**ಉಪನಿಷದರ್ಥ-** ಕಾಮಾದ್ಯರಿಷಡ್ವರ್ಗಗಳನ್ನು ಗೆದ್ದಿರುವ, ರಾಗಾದಿದೋಷಗಳಿಂದ ರಹಿತರಾದ, ಶ್ರವಣ-ಮನನ-ಧ್ಯಾನರೂಪವಾದ ಪ್ರಯತ್ನವನ್ನು ಮಾಡುವ ಅಧಿಕಾರಿಗಳು ತಮ್ಮ ಸ್ವರೂಪಶರೀರದ ಒಳಗೆ ಮತ್ತು ಬಾಹ್ಯಶರೀರದ ಒಳಗೆ ಭಗವಂತನನ್ನು ಸಾಕ್ಷಾತ್ಕರಿಸಿಕೊಳ್ಳುತ್ತಾರೆ. ಅಂತಹ ಸ್ವಪ್ರಕಾಶನಾದ, ಶರೀರದ ಒಳಗಿದ್ದರೂ ಜೀವನಂತೆ ದುಃಖಾದಿ-ಲೇಪಗಳಿಲ್ಲದಿರುವ ಪರಮಾತ್ಮನು ಸತ್ಯವಚನ, ಸಂತಾಪದಾಯಕವಾದ ಕೃಚ್ಛ್ರಚಾಂದ್ರಾಯಣಾದಿ ವ್ರತಗಳು,' ಮನನರೂಪವಾದ ಆಲೋಚನ, ಶ್ರವಣಜನಿತವಾದ ಯಥಾರ್ಥವಾದ ಜ್ಞಾನ, ಎಲ್ಲ ಇಂದ್ರಿಯಗಳನ್ನು ಭಗವಂತನಲ್ಲಿ ಆಸಕ್ತವಾಗುವಂತೆ ಮಾಡುವುದು, ಗುಹ್ಯೇಂದ್ರಿಯನಿಯಮ ಮೊದಲಾದ ಸಾಧನಗಳಿಂದ ನಿಶ್ಚಿತವಾಗಿಯೂ ಧ್ಯಾನಪ್ರಾಪ್ಯನಾಗಿದ್ದಾನೆ.

## ಖಂಡಾರ್ಥ

ಭಗವದಪರೋಕ್ಷಜ್ಞಾನಾಯ ಧ್ಯಾನರೂಪಂ ಸಾಧನಮುಕ್ತಂ 'ಧ್ಯಾಯತ ಆತ್ಮಾನಮ್' ಇತ್ಯತ್ರ ತತ್ಸಹಕಾರೀಣ್ಯಾಹ- ಸತ್ಯೇನೇತಿ ।। ಸತ್ಯೇನ ಯಥಾರ್ಥವಚನೇನ, ತಪಸಾ ವರ್ಣಾಶ್ರಮೋಚಿತಧರ್ಮಾನುಷ್ಠಾನಪೂರ್ವಂ ನಿತ್ಯಂ ಭಗವದನುಚಿಂತನೇನ, ಸಮ್ಯಗ್ ಜ್ಞಾನೇನ ಗುರೂಪದೇಶಜನ್ಯ-ತತ್ತ್ವವಿಷಯಕಸಮ್ಯಗ್‌ಜ್ಞಾನೇನ, ನಿತ್ಯಂ ಸರ್ವೇಂದ್ರಿಯನಿಯಮನರೂಪ-ಬ್ರಹ್ಮಚರ್ಯೇಣ ಅಂತಃಶರೀರೇ ಶರೀರಾಂತಃ ಜ್ಯೋತಿರ್ಮಯಃ ಪ್ರಚುರಪ್ರಕಾಶಃ ಶುಭ್ರಃ ಶುದ್ಧಃ ಜಡಾಮಿಶ್ರಃ ಏಷ ಆತ್ಮಾ ಲಭ್ಯಃ ಅಪರೋಕ್ಷವಿಷಯಃ ಅಪರೋಕ್ಷದ್ವಾರಾ ಪ್ರಾಪ್ಯ ಇತಿ ವಾಽರ್ಥಃ । ಕ್ಷೀಣದೋಷಾ ಯತಯಃ ಪ್ರಯತ್ನಶೀಲಾಃ ಯಂ ಪಶ್ಯಂತಿ ಏಷ ಆತ್ಮೇತ್ಯನ್ವಯಃ ।।೫.೫।।

ಅನುವಾದ- ಭಗವಂತನ ಅಪರೋಕ್ಷಕ್ಕಾಗಿ 'ಧ್ಯಾಯತ ಆತ್ಮಾನಂ' ಎಂದು ಧ್ಯಾನರೂಪವಾದ ಸಾಧನವನ್ನು ಹೇಳಿದರು. 'ಸತ್ಯೇನ...' ಎಂಬ ಮಂತ್ರದಿಂದ ಆ ಧ್ಯಾನಕ್ಕೆ ಸಹಕಾರಿಗಳನ್ನು ತಿಳಿಸುತ್ತಿದ್ದಾರೆ.

ಸತ್ಯೇನ=ಯಥಾರ್ಥವಾದ ವಚನದಿಂದ, ತಪಸಾ=ವರ್ಣಾಶ್ರಮೋಚಿತವಾದ ಧರ್ಮಾನುಷ್ಠಾನಪೂರ್ವಕವಾದ ಸತತ ಶ್ರೀಹರಿಯ ಚಿಂತನೆಯಿಂದ, ಸಮ್ಯಗ್‌ಜ್ಞಾನೇನ=ಯಥಾರ್ಥವಾದ ಜ್ಞಾನದಿಂದ, ಗುರುಗಳ ಉಪದೇಶದಿಂದ ಜನ್ಯವಾದ ತತ್ತ್ವವಿಷಯಕವಾದ ಯಥಾರ್ಥಜ್ಞಾನದಿಂದ, ನಿತ್ಯವೂ ಎಲ್ಲ ಇಂದ್ರಿಯಗಳನ್ನು ನಿಯಂತ್ರಿಸುವುದೆಂಬ ಬ್ರಹ್ಮಚರ್ಯದಿಂದ, ಅಂತಃಶರೀರೇ= ಶರೀರದಲ್ಲಿ, ಜ್ಯೋತಿರ್ಮಯಃ=ಪ್ರಚುರವಾದ ಪ್ರಕಾಶವಿರುವ, ಶುಭ್ರಃ= ಶುದ್ಧನಾದ ಜಡದಿಂದ ಮಿಶ್ರನಾಗದ, ಈ ಪರಮಾತ್ಮನು ಲಭ್ಯಃ=ಅಪರೋಕ್ಷಕ್ಕೆ ವಿಷಯನಾಗುತ್ತಾನೆ. ಅಪರೋಕ್ಷದ್ವಾರಾ ಪ್ರಾಪ್ಯನಾಗುತ್ತಾನೆ ಎಂದಾದರೂ ತಿಳಿಯಬಹುದು. ದೋಷಗಳನ್ನೆಲ್ಲ ಕಳೆದು ಕೊಂಡಿರುವ, ಯತಯಃ= ಪ್ರಯತ್ನಶೀಲರಾದ ಸಾಧಕರು ಯಾರನ್ನು ನೋಡುತ್ತಾರೋ ಅವನೇ ಆತ್ಮನೆಂದು ಅನ್ವಯ ಮಾಡಿಕೊಳ್ಳಬೇಕು. ।।೫.೫।।

**ಉಪನಿಷತ್**

**ಸತ್ಯಮೇವ ಜಯತಿ ನಾಽನೃತಂ**
**ಸತ್ಯೇನ ಪಂಥಾ ವಿತತೋ ದೇವಯಾನಃ ।**
**ಯೇನಾಕ್ರಮಂತಿ ಋಷಯೋ ಹ್ಯಾಪ್ತಕಾಮಾ**
**ಯತ್ರ ತತ್ಸತ್ಯಸ್ಯ ಪರಮಂ ನಿಧಾನಮ್ ॥೫.೬॥**

**ಉಪನಿಷದರ್ಥ-** ಸದ್ಗುಣಗಳಿಂದ ಯುಕ್ತನಾದುದರಿಂದ ಭಗವಂತ ಸತ್ಯನಾಮಕನಾಗಿದ್ದಾನೆ. ಸತ್ಯನಾಮಕನಾದ ಭಗವಂತನಲ್ಲಿ ನಿಷ್ಠರಾದುದರಿಂದ ಅಧಿಕಾರಿಗಳು ಕೂಡಾ ಸತ್ಯನಾಮಕರಾಗಿದ್ದಾರೆ. ಇಂತಹ ಅಧಿಕಾರಿಗಳೇ ಈ ಸಂಸಾರವನ್ನು ಗೆಲ್ಲುತ್ತಾರೆ. ಸತ್ಯನಾಮಕನಾದ ಭಗವಂತನಿಗೆ ವಿರುದ್ಧರಾದುದರಿಂದ ಅನೃತರೆನಿಸಿದ ಅಸುರರಿಗೆ ಈ ಸಂಸಾರವನ್ನು ಗೆಲ್ಲಲಾಗುವುದಿಲ್ಲ.

ತನಗೆ ಅಧೀನವಾದ ದೇವಯಾನ ಎಂಬ ಹೆಸರಿನ ಮಾರ್ಗವನ್ನು ಆಪ್ತಕಾಮರಾದ ಋಷಿಗಳಿಗೆ ಮಾತ್ರ ಭಗವಂತ ತೋರಿಸುತ್ತಾನೆ. ದೇವರು ತೋರಿಸಿದ ಆ ಮಾರ್ಗದಿಂದಲೇ, ದೇವರು ಪ್ರತ್ಯಕ್ಷವಾಗಿ ಇರುವ ವೈಕುಂಠಾದಿಲೋಕಗಳನ್ನು ಭಗವದ್ಭಕ್ತರು ಪಡೆಯುತ್ತಾರೆ.

**ಭಾಷ್ಯ**

**ಸತ್ಯೋ ಹಿ ಭಗವಾನ್ ವಿಷ್ಣುಃ ಸದ್ಗುಣತ್ವಾತ್ ಪ್ರಕೀರ್ತಿತಃ ।**
**ಅಸುರಾಸ್ತದ್ವಿರುದ್ಧತ್ವಾದನೃತಾಃ ಪರಿಕೀರ್ತಿತಾಃ ।**
**ತಸ್ಯ ವಿಷ್ಣೋರ್ನಿಧಾನಂ ತು ವೈಕುಂಠೋ ಲೋಕ ಉತ್ತಮಃ ॥ ಇತಿ ಚ**

**ಭಾಷ್ಯಾರ್ಥ-** ಸದ್ಗುಣಸಂಪನ್ನನಾದುದರಿಂದ ಭಗವಂತ ಸತ್ಯನಾಮಕನಾಗಿದ್ದಾನೆ. ಋತನಾಮಕನಾದ ಭಗವಂತನಿಗೆ ವಿರುದ್ಧರಾದುದರಿಂದ ಅಸುರರು ಅನೃತನಾಮಕರಾಗಿದ್ದಾರೆ. ಭಗವಂತ ಎಲ್ಲಿ ಪ್ರತ್ಯಕ್ಷವಾಗಿ ಸನ್ನಿಹಿತನಾಗಿರುವನೋ ಅದುವೇ ಉತ್ತಮವಾದ ವೈಕುಂಠಲೋಕ.

## ಖಂಡಾರ್ಥ

ಹರಿಭಕ್ತಸ್ಯೈವ ಭಗವತ್ಪ್ರಾಪ್ತಿ: ನ ತದ್ವಿಮುಖಸ್ಯೇತ್ಯಾಹ- ಸತ್ಯಮೇವೇತಿ ॥ ಸದ್ಗುಣತ್ವಹೇತುನಾ ಸತ್ಯಮಿತಿ ಹರಿರುಚ್ಯತೇ । ತನ್ನಿಷ್ಠಭಕ್ತ್ಯತಿಶಯೇನ ತಸ್ಮಿನ್ನೇವ ಮಗ್ನತ್ವಹೇತುನಾ ಸತ್ಯಭಕ್ತೋಽಪಿ ಸತ್ಯಪದೇನಾತ್ರ ಗೃಹ್ಯತೇ । ತಥಾಚ ಸತ್ಯಂ ಸತ್ಯಾಖ್ಯಭಗವನ್ನಿಷ್ಠಾಯುಕ್ತಂ ಅಧಿಕಾರಿಜೀವಜಾತಮೇವ ಜಯತಿ ಪ್ರಾಪ್ನೋತಿ । ಆತ್ಮಾನಮಿತಿ ವಿಪರಿಣಾಮೇನಾನ್ವಯ: । ನಾಽನೃತಂ ಋತಾಖ್ಯಹರಿವಿರುದ್ಧತ್ವಹೇತುನಾ ಅನೃತಪದಾಭಿಧೇಯಮಸುರಜಾತಂ ನ ಜಯತ್ಯಾತ್ಮಾನಮಿತ್ಯರ್ಥ: । ಕುತ ಏವಂ ಸತ್ಯನಿಷ್ಠ ಏವ ತಮಾಪ್ನೋತಿ ನಾಽನ್ಯ ಇತ್ಯತ: ತತ್ಪ್ರಾಪ್ತಿಮಾರ್ಗಸ್ಯ ತದಧೀನತ್ವಾದಿತ್ಯಾಹ- ಸತ್ಯೇನೇತಿ ॥ ಯೋಜನಾ ತು - ಯತ್ರ ಲೋಕೇ ಸತ್ಯಸ್ಯ ಸದ್ಗುಣಸ್ಯ ಹರೇ: ಪರಮಂ ತತ್ ನಿಧಾನಂ ಪ್ರತ್ಯಕ್ಷತಯಾ ಸನ್ನಿಧಾನಂ ತಂ ವೈಕುಂಠಲೋಕಂ ಯೇನ ಪಥಾ ಮಾರ್ಗೇಣ ಆಪ್ತಕಾಮಾ ಋಷಯೋ ಜ್ಞಾನಿನ: ಆಕ್ರಮಂತಿ ಗಚ್ಛಂತಿ ಅಯಂ ದೇವಯಾನಾಖ್ಯ: ಪಂಥಾ: ಸತ್ಯೇನ ಹರಿಣಾ ವಿತತ: ವಿಸ್ತೃತ: ತದಧೀನ ಇತಿ ಯಾವತ್ ॥೫.೬॥

**ಅನುವಾದ-** ಭಗವಂತನ ಭಕ್ತರಿಗೆ ಶ್ರೀಹರಿಯು ಪ್ರಾಪ್ಯನಾಗುತ್ತಾನೆ. ಹರಿವಿಮುಖರಾದವರಿಗೆ ದೇವರ ಪ್ರಾಪ್ತಿಯಾಗುವುದಿಲ್ಲ. ಈ ವಿಷಯವನ್ನು 'ಸತ್ಯಮೇವ...' ಎನ್ನುವ ಈ ಮಂತ್ರವು ತಿಳಿಸುತ್ತದೆ.

ಸದ್ಗುಣಗಳಿರುವ ನಿಮಿತ್ತದಿಂದಾಗಿ ದೇವರು ಸತ್ಯನಾಮಕನಾಗಿದ್ದಾನೆ. ಅವನಲ್ಲಿ ಅತಿಶಯವಾದ ಭಕ್ತಿಯನ್ನು ಮಾಡುವುದರಿಂದ, ಶ್ರೀಹರಿಯಲ್ಲಿಯೇ ಮಗ್ನನಾಗಿರುವುದರಿಂದ ಸತ್ಯನಾಮಕನಾದ ಭಗವಂತನ ಭಕ್ತನನ್ನು ಇಲ್ಲಿ ಸತ್ಯ ಎಂಬ ಪದದಿಂದ ಸ್ವೀಕರಿಸಬೇಕು. ಹೀಗಾಗಿ ಸತ್ಯನಾಮಕನಾದ ಭಗವಂತನಲ್ಲಿ ನಿಷ್ಠೆ ಇರುವ ಮೋಕ್ಷಾಧಿಕಾರಿಗಳಾದ ಜೀವಸಮೂಹವೇ, ಜಯತಿ=ಪರಮಾತ್ಮನನ್ನು ಪಡೆಯುತ್ತಾರೆ. (ಋತ-ಸತ್ಯ ಎಂಬ ಎರಡು ಪದಗಳು ಒಂದೇ ಅರ್ಥವನ್ನು ಹೇಳಿಕೊಡುತ್ತವೆ) ಸತ್ಯನಾಮಕನಾದ ಪರಮಾತ್ಮನಿಗೆ ವಿರುದ್ಧರಾದುದರಿಂದ ಅನೃತರೆಂದು ಕರೆಯಲ್ಪಡುವ ಅಸುರರ

ಸಮೂಹವು, ಪರಮಾತ್ಮನನ್ನು ಪಡೆಯುವುದಿಲ್ಲವೆಂದು ಅರ್ಥ. ದೇವರನ್ನು ಹೊಂದಲು ಆವಶ್ಯಕವಾದ ಮಾರ್ಗವು ಭಗವಂತನ ಅಧೀನವಾಗಿದೆ. ಆದ್ದರಿಂದ ಸತ್ಯನಾಮಕನಾದ ಪರಮಾತ್ಮನಲ್ಲಿ ನಿಷ್ಠೆ ಇರುವವನಿಗೆ ಮಾತ್ರ ದೇವರು ಪ್ರಾಪ್ಯ, ಇತರರಿಗೆ ಪ್ರಾಪ್ಯನಲ್ಲ ಎಂಬುದನ್ನು 'ಸತ್ಯೇನ...' ಎಂಬ ಮಾತಿನಿಂದ ತಿಳಿಸುತ್ತಾರೆ. ಇಲ್ಲಿ ಅನ್ವಯವನ್ನು ಈ ರೀತಿಯಾಗಿ ಯೋಜಿಸಿಕೊಳ್ಳಬೇಕು. ಯಾವ ಮಾರ್ಗದಿಂದ ಆಪ್ತಕಾಮರಾದ ಋಷಿಗಳು, ಜ್ಞಾನಿಗಳು ಸತ್ಯನಾಮಕನಾದ ಭಗವಂತನ ಪ್ರತ್ಯಕ್ಷವಾದ ಸನ್ನಿಧಾನವಿರುವ ವೈಕುಂಠಕ್ಕೆ ಹೋಗುತ್ತಾರೋ ಈ ದೇವಯಾನವೆಂಬ ಮಾರ್ಗವು ಸತ್ಯನಾಮಕನಾದ ಪರಮಾತ್ಮನಿಂದಲೇ ವಿಸ್ತೃತವಾಗಿದೆ. ಈ ದೇವಯಾನ ಮಾರ್ಗವು ದೇವರ ಅಧೀನವಾಗಿದೆ ಎಂದು ಅರ್ಥ. ॥೫.೬॥

### ಉಪನಿಷತ್

ಬೃಹಚ್ಚ ತದ್ ದಿವ್ಯಮಚಿಂತ್ಯರೂಪಂ
ಸೂಕ್ಷ್ಮಾಚ್ಚ ತತ್ ಸೂಕ್ಷ್ಮತರಂ ವಿಭಾತಿ ।
ದೂರಾತ್ಸುದೂರೇ ತದಿಹಾಂತಿಕೇ ಚ
ಪಶ್ಯತ್ಸ್ವಿಹೈವ ನಿಹಿತಂ ಗುಹಾಯಾಮ್ ॥೫.೭॥

ಉಪನಿಷದರ್ಥ- ಸತ್ಯಶಬ್ದೋಕ್ತನಾದ ಭಗವಂತ ದೇಶತಃ ಕಾಲತಃ ಗುಣತಃ ಪರಿಪೂರ್ಣನಾಗಿದ್ದಾನೆ. ಲೋಕವಿಲಕ್ಷಣನಾಗಿದ್ದಾನೆ. ಅದ್ಭುತ-ನಾಗಿದ್ದಾನಾದ್ದರಿಂದ ರಮಾಬ್ರಹ್ಮಾದಿಗಳಿಂದಲೂ ಸಾಕಲ್ಯೇನ ಅಜ್ಞೇಯನಾಗಿದ್ದಾನೆ. ಸೂಕ್ಷ್ಮವಾದ ಜೀವಸ್ವರೂಪಕ್ಕಿಂತಲೂ ಅತಿಯಾಗಿ ಸೂಕ್ಷ್ಮನಾಗಿದ್ದಾನೆ. ಸೂರ್ಯಾದಿಗಳಲ್ಲಿ ಇದ್ದುಕೊಂಡು ತಾನೇ ಜಗತ್ಪ್ರಕಾಶಕನಾಗಿದ್ದಾನೆ. ದೂರವಾಗಿರುವ ಪದಾರ್ಥಕ್ಕಿಂತಲೂ ದೂರವಾಗಿದ್ದಾನೆ. ಹತ್ತಿರವಿರುವ ಪದಾರ್ಥಕ್ಕಿಂತಲೂ ತಾನೇ ಹತ್ತಿರದಲ್ಲಿ ಇದ್ದಾನೆ. ಭಗವಂತ ಸರ್ವಗತನಾಗಿದ್ದಾನೆ. ದೇವರನ್ನು ನೋಡಲು ಬಯಸುವವರಿಗೆ ತನ್ನ ದರ್ಶನ ಮಾಡಿಸಲು ದೇವರು ಎಲ್ಲರ ಹೃದಯದಲ್ಲಿಯೇ ಸನ್ನಿಹಿತನಾಗಿದ್ದಾನೆ.

## ಭಾಷ್ಯ

**ಸರ್ವಗತ್ವಾತ್ ದೂರೇಽಂತಿಕೇ ಚ ।**

**ಭಾಷ್ಯಾರ್ಥ-** ಭಗವಂತ ಸರ್ವಗತನಾದುದರಿಂದ ಎಲ್ಲರಿಗಿಂತಲೂ ದೂರದಲ್ಲಿದ್ದಾನೆ. ಎಲ್ಲರಿಗಿಂತಲೂ ಹತ್ತಿರದಲ್ಲಿಯೂ ಇದ್ದಾನೆ.

## ಖಂಡಾರ್ಥ

ಸತ್ಯಸ್ಯ ಮಹಿಮಾನಮಾಹ- **ಬೃಹಚ್ಚ ತದಿತ್ಯಾದಿನಾ ॥** ತತ್ಸತ್ಯಾಖ್ಯಂ ವಸ್ತು ದೇಶಕಾಲಗುಣೈಃ ಬೃಹತ್ ಬೃಂಹಿತಮ್ । ವಿಶೇಷಣಸಮುಚ್ಚಯೇ ಚಶಬ್ದಃ । ದಿವ್ಯಮದ್ಭುತಂ ಅತ ಏವ ಅಚಿಂತ್ಯರೂಪಮ್ । ಸೂಕ್ಷ್ಮಾತ್ ಪ್ರಕೃತ್ಯಾದೇಃ ತತ್ಸತ್ಯಂ ಸೂಕ್ಷ್ಮತರಂ ಚ ಅತ್ಯಂತಮಪ್ರತಿಮಮ್ ಅಣೋರಣುತರಂ ಚೇತಿ ವಾಽರ್ಥಃ । ವಿಭಾತಿ ವಿಶೇಷೇಣ ಪ್ರಕಾಶಮಾನಮಾಸ್ತೇ । ಭಾ ದೀಪ್ತಾವಿತಿ ಧಾತೋಃ । ತತ್ಸತ್ಯಾಖ್ಯಂ ಬ್ರಹ್ಮ ದೂರಾತ್ಸುದೂರೇ ಇಹ ಅಂತಿಕೇ ಚ । ಸರ್ವಗತ್ವಾದಿತಿ ಭಾವಃ । ಪಶ್ಯತ್ಸು ಪಶ್ಯತಾಂ ಜ್ಞಾನಿನಾಮಿಹೈವ ಶರೀರೇ ಹೃದಯಗುಹಾಯಾಂ ನಿಹಿತಂ ಸಂಸ್ಥಿತಮ್ ॥೫.೭॥

**ಅನುವಾದ-** 'ಬೃಹಚ್ಚ...' ಎಂಬ ಮಂತ್ರವು ಸತ್ಯನಾಮಕನಾದ ಪರಮಾತ್ಮನ ಮಹಿಮೆಯನ್ನು ಹೇಳುತ್ತದೆ.

ಸತ್ಯನಾಮಕವಾದ ಆ ವಸ್ತುವು ಬೃಹತ್=ದೇಶ-ಕಾಲ-ಗುಣಗಳಿಂದ ಪೂರ್ಣವಾಗಿದೆ, ಇಲ್ಲಿಯ ಚಶಬ್ದವು ವಿಶೇಷಣಸಮುಚ್ಚಾಯಕವಾಗಿದೆ. ದಿವ್ಯಮ್=ಅದ್ಭುತವಾಗಿದೆ. ಆದ್ದರಿಂದಲೇ ಅಚಿಂತ್ಯರೂಪವಾಗಿದೆ. ವಿಚಾರಿಸಲು ಯೋಗ್ಯವಾಗದ ಸ್ವರೂಪವಾಗಿದೆ. ಸೂಕ್ಷ್ಮವಾದ ಪ್ರಕೃತಿಗಿಂತಲೂ ಅತ್ಯಂತ ಸೂಕ್ಷ್ಮವಾಗಿದೆ. ಅತ್ಯಂತ ಅಪ್ರತಿಮವಾಗಿದೆ ಎಂದು ಅರ್ಥ. ಅಣುವಿಗಿಂತಲೂ ಅಣುವಾಗಿದೆ ಎಂದಾದರೂ ಅರ್ಥವನ್ನು ಮಾಡಿಕೊಳ್ಳಬೇಕು. ವಿಭಾತಿ=ವಿಶೇಷವಾಗಿ ಪ್ರಕಾಶಿಸುತ್ತಾ ಇದೆ. ಸತ್ಯನಾಮಕನಾಗಿರುವ ಈ ಪರಮಾತ್ಮನು ದೂರವಾದ ಪದಾರ್ಥಕ್ಕಿಂತಲೂ ಅತಿ ದೂರದಲ್ಲಿ ಇದ್ದಾನೆ. ಇಲ್ಲಿಯೇ ಹೃದಯದಲ್ಲಿ ಅತಿಸಮೀಪದಲ್ಲಿಯೇ ಇದ್ದಾನೆ.

ಸರ್ವಗತನಾಗಿರುವುದರಿಂದ ದೂರಾದ್ದೂರತರತ್ವ ಅಂತಿಕತ್ವವು ಯುಕ್ತವೇ ಆಗುತ್ತದೆ. ನೋಡುವ ಜ್ಞಾನಿಗಳಿಗೆ ಈ ಶರೀರದಲ್ಲಿಯೇ ಹೃದಯಗುಹಾದಲ್ಲಿ ಸಂಸ್ಥಿತನಾಗಿದ್ದಾನೆ. ||೩.೭||

**ಉಪನಿಷತ್**

ನ ಚಕ್ಷುಷಾ ಗೃಹ್ಯತೇ ನಾಽಪಿ ವಾಚಾ
ನಾನ್ಯೈ: ದೇವೈ: ತಪಸಾ ಕರ್ಮಣಾ ವಾ ।
ಜ್ಞಾನಪ್ರಸಾದೇನ ವಿಶುದ್ಧಸತ್ತ್ವ:
ತತಸ್ತು ತಂ ಪಶ್ಯತೇ ನಿಷ್ಕಲಂ ಧ್ಯಾಯಮಾನ: ||೩.೮||

**ಉಪನಿಷದರ್ಥ-** ಭಗವಂತನನ್ನು ಕಣ್ಣಿನಿಂದ, ಕಣ್ಣಿಗೆ ಅಭಿಮಾನಿಯಾದ ದೇವತೆಯ ಅನುಗ್ರಹದಿಂದ, ವಾಗಿಂದ್ರಿಯದಿಂದ, ವಾಗಿಂದ್ರಿಯಕ್ಕೆ ಅಭಿಮಾನಿಯಾದ ದೇವತೆಯ ಅನುಗ್ರಹದಿಂದ ತಿಳಿಯಲು ಆಗುವುದಿಲ್ಲ. ಘ್ರಾಣಾದಿ ಇಂದ್ರಿಯಗಳಿಂದ, ಅವುಗಳಿಗೆ ಅಭಿಮಾನಿಗಳಾದ ದೇವತೆಗಳ ಅನುಗ್ರಹದಿಂದಲೂ ದೇವರನ್ನು ಅಪರೋಕ್ಷಮಾಡಿಕೊಳ್ಳಲು ಸಾಧ್ಯವಿಲ್ಲ. ಉಪವಾಸಾದಿರೂಪವಾದ ತಪಸ್ಸಿನಿಂದ, ವರ್ಣಾಶ್ರಮವಿಹಿತವಾದ ಕರ್ಮಗಳಿಂದಲೂ ದೇವರನ್ನು ಪ್ರತ್ಯಕ್ಷಮಾಡಿಕೊಳ್ಳಲು ಸಾಧ್ಯವಿಲ್ಲ. ಆದರೇ ಈ ಎಲ್ಲ ದೇವತೆಗಳ ಅನುಗ್ರಹದಿಂದ, ವ್ರತಾದಿಗಳಿಂದ ಪುರುಷನು ಅಂತಃಕರಣವನ್ನು ಶುದ್ಧಮಾಡಿಕೊಳ್ಳುತ್ತಾನೆ. ವಿಶುದ್ಧಾಂತಃಕರಣನಾದ ಸಾಧಕನು ಷೋಡಷಕಲಾರಹಿತನಾದ ಪರಮಾತ್ಮನನ್ನು ಧ್ಯಾನಮಾಡುತ್ತಾನೆ. ಜ್ಞಾನನಿಯಾಮಕನಾದ, ಪರಮಜ್ಞಾನಸ್ವರೂಪನಾದ ಪರಮಾತ್ಮನ ಅನುಗ್ರಹದಿಂದ ಮತ್ತು ಜ್ಞಾನಾಭಿಮಾನಿಗಳಾದ ಬ್ರಹ್ಮದೇವರ ವಾಯುದೇವರ ಪ್ರಸಾದದಿಂದಲೇ ದೇವರ ಸಾಕ್ಷಾತ್ಕಾರವನ್ನು ಮಾಡಿಕೊಳ್ಳುತ್ತಾನೆ.

**ಭಾಷ್ಯ**

ನಾನ್ಯೈ: ದೇವೈ: ಹರಿಂ ಪಶ್ಯೇತ್ ಜ್ಞಾನರೂಪೇಣ ವಾಯುನಾ ।
ಬ್ರಹ್ಮಣಾ ಪರಮಜ್ಞಾನರೂಪೇಣ ಹರಿಣಾ ತಥಾ ।
ಪ್ರಸನ್ನೇನೈವ ತಂ ಪಶ್ಯೇದನ್ಯೇಽನುಜ್ಞಾಪ್ರದಾಯಿನ: || ಇತಿ ಚ ||

ಭಾಷ್ಯಾರ್ಥ- ಚಕ್ಷುರಾದಿ ಇಂದ್ರಿಯಗಳಿಗೆ ಅಭಿಮಾನಿಗಳಾದ ಯಾವ ದೇವತೆಯ ಪ್ರಸಾದದಿಂದಲೂ ದೇವರ ಸಾಕ್ಷಾತ್ಕಾರವನ್ನು ಪಡೆಯಲು ಸಾಧ್ಯವಿಲ್ಲ. ಜ್ಞಾನರೂಪರಾದ ವಾಯುದೇವರ ಹಾಗೂ ಬ್ರಹ್ಮದೇವರ, ಮತ್ತು ಪರಮಜ್ಞಾನರೂಪನಾದ ಪರಮಾತ್ಮನ ಪ್ರಸಾದದಿಂದಲೇ ದೇವರ ಸಾಕ್ಷಾತ್ಕಾರವನ್ನು ಪಡೆಯಲಾಗುತ್ತದೆ.

ತಾರತಮ್ಯವನ್ನು ಸರಿಯಾಗಿ ತಿಳಿದದ್ದರಿಂದ ಸಂತುಷ್ಟರಾದ ದೇವತೆಗಳು ಭಗವಂತನನ್ನು ಆರಾಧಿಸುವ ವಿಷಯದಲ್ಲಿ ಸದ್ಬುದ್ಧಿಯನ್ನು ನೀಡುವ ಮುಖಾಂತರ ಸಾಧಕರಿಗೆ ಅನುಜ್ಞೆಯನ್ನು ನೀಡುತ್ತಾರೆ. ಭಗವದಪರೋಕ್ಷಕ್ಕೆ ಕಾರಣವಾದ ಶ್ರವಣಾದಿಗಳಿಗೆ ಎಲ್ಲ ದೇವತೆಗಳ ಅನುಗ್ರಹವು ಸಾಧನವಾಗುತ್ತದೆ. ಆದ್ದರಿಂದ ದೇವತೆಗಳ ಪ್ರಸಾದಕ್ಕಾಗಿ ಪರಿವಾರತಯಾ ದೇವತೆಗಳ ಆರಾಧನೆಯನ್ನೂ ಮಾಡಬೇಕು ಎಂದು ತಿಳಿಯಬೇಕು.

## ಭಾಷ್ಯ

**ಷೋಡಶಕಲಾಶರೀರೋ ನ ಭವತೀತಿ ನಿಷ್ಕಲಃ । 'ಯದಾ ಪಶ್ಯಃ ಪಶ್ಯತೇ ರುಕ್ಮವರ್ಣಮ್' 'ಆನಂದರೂಪಮಮೃತಂ ಯದ್ವಿಭಾತಿ' ಇತ್ಯುಕ್ತತ್ವಾತ್ ॥೫॥**

ಭಾಷ್ಯಾರ್ಥ- ಹದಿನಾರುಕಲೆಗಳಿಂದ ಯುಕ್ತವಾದ ಶರೀರವು ದೇವರಿಗೆ ಇರುವುದಿಲ್ಲ. ಆದ್ದರಿಂದ ದೇವರನ್ನು ನಿಷ್ಕಲ ಎಂದು ವ್ಯವಹರಿಸುತ್ತಾರೆ.

ದೇವರು ಶರೀರರಹಿತ ಎಂಬ ಅರ್ಥವನ್ನು ನಿಷ್ಕಲ ಎಂಬ ಶಬ್ದಕ್ಕೆ ಮಾಡಬಾರದು. 'ಯದಾ...' 'ಯಾವಾಗ ಜೀವನು ಸ್ವರ್ಣವರ್ಣನಾದ ಪರಮಾತ್ಮನನ್ನು ನೋಡುತ್ತಾನೋ' ಎಂದು ಶ್ರುತಿಯು ಹೇಳುತ್ತದೆ. ದೇವರಿಗೆ ಶರೀರವೇ ಇಲ್ಲದಿದ್ದರೇ ಇಲ್ಲಿ ಹೇಳುವ ಸ್ವರ್ಣವರ್ಣತ್ವವು ಮತ್ತು 'ಆನಂದರೂಪಮಮೃತಂ ಯದ್ವಿಭಾತಿ' ಎಂಬಲ್ಲಿ ಉಕ್ತವಾದ ಆನಂದರೂಪತ್ವವು ಉಪಪನ್ನವಾಗುವುದಿಲ್ಲ. ಆದ್ದರಿಂದ ನಿಷ್ಕಲ ಎಂದರೇ ಷೋಡಶಕಲಾರಹಿತ ಎಂದೇ ಅರ್ಥವನ್ನು ಮಾಡಬೇಕು.

## ಖಂಡಾರ್ಥ

ಏವಂವಿದಸ್ಯ ಭಗವತೋ ಜ್ಞಾನಂ ಚಕ್ಷುರಾದಿದೇವತೋಪಾಸನಾ-ಬಲಾತ್ ಭವತಿ ಕಿಮಿತ್ಯತೋ ನೇತ್ಯಾಹ- **ನ ಚಕ್ಷುಷೇತಿ** ॥ ಚಕ್ಷುರಧಿ ಷ್ಠಾತೃದೇವತಾ ಪ್ರಸಾದೇನ ನ ಗೃಹ್ಯತೇ । ಗುಹಾಶಯಾಂ ನಿಹಿತಂ ವಸ್ತ್ವಿತ್ಯನುಷಂಗಃ । ವಾಚಾ ವಾಗ್ದೇವತಾಪ್ರಸಾದೇನೇತ್ಯರ್ಥಃ । ಅನ್ಯೈಃ ಇಂದ್ರಿಯಾಂತರದೇವೈಃ, ತಪಸಾಽನಶನಾದಿವ್ರತೇನ, ಕರ್ಮಣಾ ವರ್ಣಾಶ್ರಮೋಚಿತಧರ್ಮೇಣ ವಾ ನ ಗೃಹ್ಯತೇ । ಕೇನ ತರ್ಹೀತ್ಯತ ಆಹ- **ಜ್ಞಾನೇತಿ** ॥ ಜ್ಞಾನರೂಪಸ್ಯ ವಾಯೋಃ ಚತುರ್ಮುಖಸ್ಯ ವಾ ಪ್ರಸಾದೇನ, 'ವಿಜ್ಞಾನಶಕ್ತಿರಹಮಾಸಮನಂತಶಕ್ತೇಃ' ಇತ್ಯುಕ್ತೇಃ । 'ಸತ್ಯಂ ಜ್ಞಾನಮನಂತಮ್' ಇತ್ಯಾದೇಃ ಜ್ಞಾನಸ್ವರೂಪಸ್ಯ ಹರೇಃ ಪ್ರಸಾದೇನೇತಿ ವಾಽರ್ಥಃ । 'ಅತೋಽನಂತೇನ ತಥಾ ಹಿ ಲಿಂಗಮ್' ಇತಿ ಸೂತ್ರಾತ್ । ವಾಯ್ವಾದಿಸ್ತು ಅನುಜ್ಞಾಪ್ರದ ಇತಿ ಧ್ಯೇಯಮ್ । ವಿಶುದ್ಧಸತ್ತ್ವಃ ರಜಸ್ತಮೋಭ್ಯಾಮಮಿಶ್ರಿತೋ-ದ್ರಿಕ್ತಸತ್ತ್ವಗುಣೋ ಭವತಿ। ತತಸ್ತು ವಿಶುದ್ಧಸತ್ತ್ವಾದೇವ ನಿಷ್ಕಲಂ ಷೋಡಶಕಲಾತ್ಮಕದೇಹಹೀನಂ ಧ್ಯಾಯಮಾನೋ ನಿರಂತರಚಿಂತಾಂ ಕುರ್ವನ್ ಭಗವಂತಂ ಪಶ್ಯತೇ ಪಶ್ಯತಿ ॥೩.೮॥

**ಅನುವಾದ-** ಇಂತಹ ಪರಮಾತ್ಮನ ಜ್ಞಾನವು ಚಕ್ಷುರಾದಿದೇವತೆಗಳ ಉಪಾಸನೆಯಿಂದ ಜನ್ಯವಾದ ಸಾಮರ್ಥ್ಯದಿಂದ ಪ್ರಾಪ್ತವಾಗುತ್ತದೋ ಎಂದರೇ ಇಲ್ಲವೆಂದು 'ನ ಚಕ್ಷುಷಾ...' ಎಂಬ ಮಂತ್ರದಿಂದ ಹೇಳುತ್ತಾರೆ.

ಕಣ್ಣಿನಲ್ಲಿ ಅಧಿಷ್ಠಿತನಾದ ದೇವತೆಯ ಪ್ರಸಾದದಿಂದ, ಹೃದಯಗುಹಾದಲ್ಲಿ ನಿಹಿತನಾದ ಪರಮಾತ್ಮನ ಜ್ಞಾನವನ್ನು ಮಾಡಿಕೊಳ್ಳಲು ಆಗುವುದಿಲ್ಲ. ವಾಚಾ=ಮಾತಿಗೆ ಅಭಿಮಾನಿಯಾದ ದೇವತೆಯ ಪ್ರಸಾದದಿಂದ ಎಂದು ಅರ್ಥ. ಅನ್ಯೈಃ=ಬೇರೇ ಇಂದ್ರಿಯಗಳಿಗೆ ಅಭಿಮಾನಿಗಳಾದ ದೇವತೆಗಳಿಂದ, ತಪಸಾ=ಅನಶನಾದಿ ವ್ರತದಿಂದ, ಕರ್ಮಣಾ=ವರ್ಣಾಶ್ರಮೋಚಿತವಾದ ಧರ್ಮದಿಂದ, ತಿಳಿಯಲಾಗುವುದಿಲ್ಲ. ದೇವರನ್ನು ಹೇಗೆ ತಿಳಿಯಬಹುದು ಎಂಬುದನ್ನು 'ಜ್ಞಾನಪ್ರಸಾದೇನ...' ಎಂಬ ವಚನದಿಂದ ತಿಳಿಸುತ್ತಿದ್ದಾರೆ.

ಜ್ಞಾನರೂಪರಾದ ವಾಯುದೇವರ ಅಥವಾ ಚತುರ್ಮುಖದೇವರ ಅನುಗ್ರಹದಿಂದ, ಅಥವಾ 'ಸತ್ಯಂ ಜ್ಞಾನಮನಂತಂ...' ಎಂಬಲ್ಲಿ ಹೇಳಿದಂತೆ ಜ್ಞಾನಸ್ವರೂಪನಾದ ಪರಮಾತ್ಮನ ಅನುಗ್ರಹದಿಂದ ಎಂದು ಅರ್ಥ. 'ಅತೋಽನಂತೇನ ತಥಾಹಿ ಲಿಂಗಮ್' (ಬ್ರ.ಸೂ.೩.೨.೨೭) 'ಪರಮಾತ್ಮ ಅವ್ಯಕ್ತ ಮತ್ತು ಪ್ರತ್ಯಕ್ಷಗೋಚರ ಎಂಬ ಈ ಎರಡೂ ವಿಷಯದಲ್ಲಿ ಪ್ರಮಾಣವಿದೆ. ಆದ್ದರಿಂದ ತಾನು ಅವ್ಯಕ್ತನಾಗಿದ್ದರೂ ಅನಂತಶಕ್ತಿಸಂಪನ್ನನಾದುದರಿಂದ ತನ್ನ ಪ್ರಸಾದದಿಂದಲೇ ಸಾಧಕರಿಗೆ ಪ್ರತ್ಯಕ್ಷವಿಷಯನಾಗುತ್ತಾನೆ. ಭಗವಂತನ ಪ್ರಸಾದದಿಂದ ಬಂಧನಿವೃತ್ತಿ ಎಂದು ಜ್ಞಾನದಿಂದ ಭಗವಂತನ ಪ್ರಸಾದವಾಗುತ್ತದೆ ಎಂದು ಲಿಂಗವೂ ಇದೆ.' ಎಂಬ ಸೂತ್ರದಲ್ಲಿ ಈ ವಿಷಯವನ್ನು ತಿಳಿಸಿದ್ದಾರೆ. ವಾಯ್ವಾದಿಗಳು ಅನುಜ್ಞೆಯನ್ನು ನೀಡುತ್ತಾರೆ ಎಂಬುದಾಗಿ ತಿಳಿಯಬೇಕು. ವಿಶುದ್ಧಸತ್ತ್ವಃ=ರಜಸ್ಸು ಮತ್ತು ತಮೋಗುಣಗಳಿಂದ ಮಿಶ್ರಿತವಾಗದ ಸತ್ತ್ವಗುಣ ಉಳ್ಳವನಾಗುತ್ತಾನೆ. ಅನಂತರ ವಿಶುದ್ಧಗುಣನಾದುದರಿಂದಲೇ ಷೋಡಷಕಲಾಗಳಿಂದ ರಹಿತವಾದ ದೇಹ ಉಳ್ಳ ದೇವರನ್ನು ಧ್ಯಾನಮಾಡುತ್ತಾ ನಿರಂತರವಾದ ಸ್ಮರಣವನ್ನು ಮಾಡುತ್ತಾ ಭಗವಂತನನ್ನು ನೋಡುತ್ತಾನೆ ಎಂದು ಅರ್ಥ. ||೩.೮||

**ಉಪನಿಷತ್**

**ಏಷೋಽಣುರಾತ್ಮಾ ಚೇತಸಾ ವೇದಿತವ್ಯೋ**
**ಯಸ್ಮಿನ್ ಪ್ರಾಣಃ ಪಂಚಧಾ ಸಂವಿವೇಶ ।**
**ಪ್ರಾಣೈಶ್ಚಿತ್ತಂ ಸರ್ವಮೋತಂ ಪ್ರಜಾನಾಂ**
**ಯಸ್ಮಿನ್ವಿಶುದ್ಧೇ ವಿಭವತ್ಯೇಷ ಆತ್ಮಾ ||೩.೯||**

**ಉಪನಿಷದರ್ಥ-** ಪುರುಷರ ಇಂದ್ರಿಯಗಳೆಲ್ಲ ಪ್ರಾಣವನ್ನು ಆಶ್ರಯಿಸಿವೆ. ಇಂದ್ರಿಯಾಭಿಮಾನಿದೇವತೆಗಳೆಲ್ಲ ರಾಗಾದಿದೋಷಗಳಿಂದ ನಿರ್ಮುಕ್ತರಾದ ಮುಖ್ಯಪ್ರಾಣನನ್ನು ಆಶ್ರಯಿಸಿಕೊಂಡಿದ್ದಾರೆ. ಮುಖ್ಯಪ್ರಾಣದೇವರು ಕೂಡಾ ಪ್ರಾಣಾದಿ ತನ್ನ ಪಂಚರೂಪಗಳಿಂದ ಭಗವಂತನನ್ನೇ ಆಶ್ರಯಿಸಿಕೊಂಡಿದ್ದಾರೆ. ಆ ಭಗವಂತನಿಂದಲೇ ನಾನಾವಿಧವಾದ ವೈಭವಗಳಿಂದ ಯುಕ್ತರಾಗಿದ್ದಾರೆ.

ಆ ಭಗವಂತನಿಂದಲೇ ಜನ್ಮವನ್ನು ಪಡೆಯುತ್ತಾರೆ. ಇಂತಹ ಮುಖ್ಯಪ್ರಾಣರಿಗೂ ಸ್ವಾಮಿಯಾಗಿರುವ, ಅಣುರೂಪಿಯಾದ ಪರಮಾತ್ಮನನ್ನು ಧ್ಯಾನಾದಿಗಳಿಂದ ಸಂಸ್ಕೃತವಾದ ಮನಸ್ಸಿನಿಂದ ಸಾಕ್ಷಾತ್ಕಾರಮಾಡಿಕೊಳ್ಳಬೇಕು.

**ಖಂಡಾರ್ಥ**

**ಕೇನೇಂದ್ರಿಯೇಣೇತ್ಯತ ಆಹ- ಏಷೋಽಣುರಿತಿ ।।** ಏಷ: ಅಣುರೂಪೇಣ ಸರ್ವಪ್ರಾಣಿಷು ಸ್ಥಿತ ಆತ್ಮಾ ಚೇತಸಾ ವೇದಿತವ್ಯ: ಜ್ಞಾತವ್ಯ: । ಏಷ ಇತ್ಯುಕ್ತ: ಕ ಇತ್ಯತ ಆಹ- **ಯಸ್ಮಿನ್ನಿತಿ ।।** ಪ್ರಜಾನಾಂ ಸರ್ವಂ ಚಿತ್ತಂ ಪ್ರಾಣೈ: ಇಂದ್ರಿಯೈ: ಸಹ ಯಸ್ಮಿನ್ ಪ್ರಾಣೇ ಮುಖ್ಯವಾಯೌ ಓತಂ ಆಶ್ರಿತಂ ಸ: ಪ್ರಾಣ: ಯಸ್ಮಿನ್ ವಿಶುದ್ಧೇ ನಿಷ್ಕಲೇ ಹರೌ ಪಂಚಧಾ ಪ್ರಾಣಾಪಾನಾದಿಪಂಚರೂಪಾತ್ಮನಾ ವಿವೇಶ ಆಶ್ರಿತ: ತಿಷ್ಠತಿ, ವಿಭವತಿ ಚ ವಿಭವಯುಕ್ತಶ್ಚ ಭವತಿ ಏಷ ಆತ್ಮೇತಿ ಯೋಜನಾ ।।೩.೯।।

ಅನುವಾದ- ಯಾವ ಇಂದ್ರಿಯದಿಂದ ದೇವರನ್ನು ನೋಡುತ್ತಾನೆ ಎಂಬುದನ್ನು 'ಏಷೋಽಣುಃ...' ಎಂಬ ಮಂತ್ರವು ತಿಳಿಸುತ್ತದೆ.

ಏಷಃ=ಅಣುರೂಪದಿಂದ ಎಲ್ಲ ಪ್ರಾಣಿಗಳಲ್ಲಿ ಇರುವ ಪರಮಾತ್ಮನು, ಮನಸ್ಸಿನಿಂದ ತಿಳಿಯಲ್ಪಡುತ್ತಾನೆ. ಏಷಃ ಎಂದರೆ ಯಾರು ಎಂಬುದನ್ನು 'ಯಸ್ಮಿನ್...' ಎಂಬ ವಚನವು ತಿಳಿಸುತ್ತದೆ. ಎಲ್ಲ ಜನರ ಮನಸ್ಸು, ಇಂದ್ರಿಯಗಳಿಂದ ಕೂಡಿಕೊಂಡು ಯಾವ ಮುಖ್ಯಪ್ರಾಣನಲ್ಲಿ ಆಶ್ರಿತವಾಗಿದೆಯೋ, ಇಂತಹ ಪ್ರಾಣದೇವರು ಪ್ರಾಣಾಪಾನಾದಿ ಐದು ರೂಪಗಳಿಂದ ವಿಶುದ್ಧನಾದ, ಷೋಡಶಕಲಾರಹಿತವಾದ ದೇಹ ಉಳ್ಳ ಯಾವ ಪರಮಾತ್ಮನಲ್ಲಿ ಪ್ರವೇಶಿಸಿ ಇದ್ದಾರೋ, ನಾನಾವಿಧವಾದ ವೈಭವಗಳನ್ನು ಸಂಪಾದಿಸಿದ್ದಾರೋ ಅಂತಹ ಪರಮಾತ್ಮನೇ ಏಷಃ ಎಂಬ ಪದದಿಂದ ಪ್ರಕೃತದಲ್ಲಿ ವಾಚ್ಯನಾಗಿದ್ದಾನೆ ಎಂದು ಯೋಜಿಸಿಕೊಳ್ಳಬೇಕು. ।।೩.೯।।

**ಉಪನಿಷತ್**

**ಯಂ ಯಂ ಲೋಕಂ ಮನಸಾ ಸಂವಿಭಾತಿ**
**ವಿಶುದ್ಧಸತ್ತ್ವಃ ಕಾಮಯತೇ ಯಾಂಶ್ಚ ಕಾಮಾನ್ ।**
**ತಂ ತಂ ಲೋಕಂ ಜಯತೇ ತಾಂಶ್ಚ ಕಾಮಾನ್**
**ತಸ್ಮಾದಾತ್ಮಜ್ಞಂ ಹ್ಯರ್ಚಯೇದ್ಭೂತಿಕಾಮಃ ।।೫.೧೦।।**

**।। ಇತಿ ಪಂಚಮಃ ಖಂಡಃ ।।**

**ಉಪನಿಷದರ್ಥ-** ವಿಶುದ್ಧನಾದ ಭಗವಂತನಲ್ಲಿಯೇ ಮನಸ್ಸನ್ನು ಆಸಕ್ತಗೊಳಿಸಿರುವ ಅಪರೋಕ್ಷಜ್ಞಾನಿಯು ಯಾವ ಯಾವ ಲೋಕಗಳನ್ನು ಮನಸ್ಸಿನಿಂದ ಬಯಸುತ್ತಾನೋ, ಯಾವ ಯಾವ ವಿಷಯಗಳನ್ನು ಅಪೇಕ್ಷಿಸುತ್ತಾನೋ ಆಯಾ ಲೋಕಗಳನ್ನು ಆಯಾ ಕಾಮ್ಯಪದಾರ್ಥಗಳನ್ನು ಪಡೆದುಕೊಳ್ಳುತ್ತಾನೆ. ಅಪರೋಕ್ಷಜ್ಞಾನಿಯ ಸಂಕಲ್ಪವು ಅಮೋಘವಾಗಿರುತ್ತದೆ. ಜ್ಞಾನದಿಂದಲೇ ಸ್ವರ್ಗ. ಜ್ಞಾನದಿಂದಲೇ ಅಪವರ್ಗವೆಂಬುದು ಶ್ರುತಿಸ್ಮೃತಿಗಳಲ್ಲಿ ಸಿದ್ಧವಾಗಿದೆ. ಅಪರೋಕ್ಷಜ್ಞಾನಿಯಾದವನಿಗೆ ಈ ರೀತಿಯಾದ ಸತ್ಯಕಾಮತ್ವಾದಿ ಮಹಾಮಾಹಾತ್ಮ್ಯವು ಸಂಪನ್ನವಾಗುವುದರಿಂದ ಈ ವಿಧವಾದ ಐಶ್ವರ್ಯವನ್ನು ಬಯಸುವವರೆಲ್ಲರೂ ಆ ಅಪರೋಕ್ಷಜ್ಞಾನಿಗಳನ್ನು ಅರ್ಚಿಸಬೇಕು. ಪ್ರಸನ್ನರಾದ ಆ ಅಪರೋಕ್ಷಜ್ಞಾನಿಗಳಿಗೆ ಮಾತ್ರ ಈ ರೀತಿಯಾದ ಐಶ್ವರ್ಯವನ್ನು ನೀಡುವ ಸಾಮರ್ಥ್ಯವಿರುತ್ತದೆ. ಆದ್ದರಿಂದ ಅವರ ಪೂಜೆಯನ್ನು ಅವಶ್ಯವಾಗಿ ಮಾಡಬೇಕು.

**ಖಂಡಾರ್ಥ**

ಆತ್ಮವೇದಿನೋ ಮಹಿಮಾನಮಾಹ- **ಯಂ ಯಮಿತಿ** ।। ವಿಶುದ್ಧಸತ್ತ್ವಃ ಆತ್ಮವೇದೀ ಯಂ ಯಂ ಲೋಕಂ ಮನಸಾ ಸಂವಿಭಾತಿ ಭಾವಯತಿ, ಗಚ್ಛತೀತಿ ಯಾವತ್ । ಯಾಂಶ್ಚ ಕಾಮಾನ್ ಕಾಮ್ಯಮಾನಾನ್ ವಿಷಯಾನ್ ಕಾಮಯತೇ ಇಚ್ಛತಿ । ತಂ ತಂ ಲೋಕಂ ತಾಂಶ್ಚ ಕಾಮಾನ್ ಜಯತೇ ಪ್ರಾಪ್ನೋತಿ । ತಸ್ಮಾದಾತ್ಮಜ್ಞಾನಿನೋ ಮಹತ್ತ್ವಾದ್ಭೂತಿಕಾಮೋ ಭಾಗ್ಯಕಾಮಃ ಆತ್ಮಜ್ಞಂ ಭಗವದ್ಜ್ಞಾನಿನಂ ಅರ್ಚಯೇತ್ ಪೂಜಯೇತ್ । ಅರ್ಚ

ಪೂಜಾಯಾಮ್ । ಹಿಶಬ್ದ: ತದರ್ಚನೇನ ಭೂತಿಮಾನ್ ಭವತೀತಿ ನಿಶ್ಚಯಾರ್ಥ: ॥೫.೧೦॥

**ಅನುವಾದ- 'ಯಂ ಯಂ...'** ಎಂಬ ಮಂತ್ರವು ಭಗವಂತನನ್ನು ತಿಳಿದವರ ಮಹಿಮೆಯನ್ನು ಹೇಳುತ್ತದೆ.

ಉದ್ರಿಕ್ತವಾದ ಸತ್ತ್ವಗುಣ ಉಳ್ಳ ಭಗವಂತನ ಜ್ಞಾನಿಯು ಯಾವ ಯಾವ ಲೋಕಗಳನ್ನು ಮನಸ್ಸಿನಿಂದ ಚಿಂತಿಸುತ್ತಾನೋ ಆಯಾ ಲೋಕಗಳನ್ನು ಅವನು ಹೊಂದುತ್ತಾನೆ ಎಂದು ಅರ್ಥ. ಯಾವ ಯಾವ ವಿಷಯಗಳನ್ನು ಅವನು ಅಪೇಕ್ಷಿಸುತ್ತಾನೋ ಆಯಾ ವಿಷಯಗಳನ್ನು ಪಡೆಯುತ್ತಾನೆ. ಆದ್ದರಿಂದ ಪರಮಾತ್ಮನ ಜ್ಞಾನಿಗಳು ಮಹಾತ್ಮರಾಗಿದ್ದಾರೆ. ಆದ್ದರಿಂದ ಮೋಕ್ಷರೂಪವಾದ ಐಶ್ವರ್ಯವನ್ನು, ಸೌಭಾಗ್ಯವನ್ನು ಬಯಸುವವನು ಬ್ರಹ್ಮಜ್ಞಾನಿಯನ್ನು ಅರ್ಚಿಸಬೇಕು. ಬ್ರಹ್ಮಜ್ಞಾನಿಗಳನ್ನು ಪೂಜಿಸಬೇಕು. ಇವರ ಅರ್ಚನೆಯಿಂದ ಮುಕ್ತಿರೂಪವಾದ ಸೌಭಾಗ್ಯವು ನಿಶ್ಚಿತವಾಗಿಯೂ ದೊರೆಯುತ್ತದೆ. ಇದು ಪ್ರಸಿದ್ಧ ಎಂದು ಹಿ ಶಬ್ದವು ತಿಳಿಸುತ್ತದೆ. ॥೫.೧೦॥

॥ ಇತಿ ಪಂಚಮಖಂಡಮಂತ್ರಾರ್ಥ: ॥

# ।। ಅಥ ಷಷ್ಠಃ ಖಂಡಃ ।।

## ಉಪನಿಷತ್

**ಸ ವೇದೈತತ್ಪರಮಂ ಬ್ರಹ್ಮಧಾಮ**
**ಯತ್ರ ವಿಶ್ವಂ ನಿಹಿತಂ ಭಾತಿ ಶುಭ್ರಮ್ ।**
**ಉಪಾಸತೇ ಪುರುಷಂ ಯೇ ಹ್ಯಕಾಮಾಃ**
**ತೇ ಶುಕ್ರಮೇತದತಿವರ್ತಂತಿ ಧೀರಾಃ ।।೬.೧।।**

**ಉಪನಿಷದರ್ಥ-** ಯಾವ ಸಾಧಕನು ಅಪರೋಕ್ಷಜ್ಞಾನಿಗಳನ್ನು ಅರ್ಚಿಸುತ್ತಾನೋ ಅವನು ಗುಣಗಳಿಂದ ಬೃಂಹಿತನಾಗಿರುವ ಪರಮಾತ್ಮನ ಮುಖ್ಯಪ್ರತಿಮೆಯಾದ ಮುಖ್ಯಪ್ರಾಣದೇವರನ್ನು ತಿಳಿದುಕೊಳ್ಳುತ್ತಾನೆ. ಪರಿಪೂರ್ಣನಾದ, ಪರಿಶುದ್ಧನಾದ, ಪರಮಾತ್ಮನು ಮುಖ್ಯಪ್ರಾಣನಲ್ಲಿಯೇ ಸನ್ನಿಹಿತನಾಗಿ ಪ್ರಕಾಶಿಸುತ್ತಾನೆ. ಆದ್ದರಿಂದ ಮುಖ್ಯಪ್ರಾಣದೇವರು ಪರಮಾತ್ಮನ ಮುಖ್ಯಪ್ರತಿಮೆಯಾಗಿದ್ದಾರೆ. ಇಂತಹ ಮುಖ್ಯಪ್ರಾಣನ ಜ್ಞಾನವೇ ಅಲೌಕಿಕವಾದ ಐಶ್ವರ್ಯವಾಗಿದೆ.

ಪರಿಪೂರ್ಣವಾದ ಷಡ್ಗುಣಗಳುಳ್ಳ ಪರಮಾತ್ಮನನ್ನು ರಾಗಾದಿದೋಷಗಳಿಂದ ನಿರ್ಮುಕ್ತರಾದ ಯಾವ ಸಾಧಕರು ಉಪಾಸನೆ ಮಾಡುತ್ತಾರೋ ಅವರು ಶೋಕರಹಿತನಾದ ಪರಮಾತ್ಮನನ್ನು ಹೊಂದಲು ಕ್ಲೇಶರೂಪವಾದ ಸಂಸಾರವನ್ನು ಅತಿಕ್ರಮಿಸಿ ಮುಕ್ತರಾಗುತ್ತಾರೆ.

## ಭಾಷ್ಯ

**ಸ ಆತ್ಮಜ್ಞಾರ್ಚಕೋ ಬ್ರಹ್ಮಣೋ ಧಾಮ ಪ್ರಾಣಂ ವೇದ । ಯತ್ರ ವಿಶ್ವಂ ಪೂರ್ಣಂ ಬ್ರಹ್ಮ ನಿಹಿತಮ್ ।**

**ಭಾಷ್ಯಾರ್ಥ-** 'ಸ ವೇದೈತತ್...' ಎಂಬ ಮಂತ್ರದಲ್ಲಿ ಸಃ ಎಂದರೇ ಆತ್ಮಜ್ಞನನ್ನು ಅರ್ಚಿಸುವ ಜೀವ ಎಂದು ಅರ್ಥ. ಉಪನಿಷತ್ತಿನಲ್ಲಿ ಬ್ರಹ್ಮಧಾಮ ಎಂದರೇ ಬ್ರಹ್ಮನಿಗೆ ಧಾಮ ಅಧಿಷ್ಠಾನರಾದ ವಾಯುದೇವರು ಎಂದು ಅರ್ಥ.

## ಭಾಷ್ಯ

ಪ್ರಧಾನಂ ಧಾಮ ವಿಷ್ಣೋಸ್ತು ಪ್ರಾಣ ಏವ ಪ್ರಕೀರ್ತಿತಃ ।
ಉಪಾಯೈರ್ಯೋ ವಿಜಾನೀಯಾತ್ ಪ್ರಾಣಸ್ಥಂ ಪರಮೇಶ್ವರಮ್ ।
ತಸ್ಯ ಪ್ರಾಸೇ ಹರಿರ್ನಿತ್ಯಮಾವಿಷ್ಟೋ ಭವತಿ ಧ್ರುವಮ್ ॥

ಭಾಷ್ಯಾರ್ಥ- ವಿಷ್ಣುವಿಗೆ ಪ್ರಧಾನವಾಗಿ ಅಧಿಷ್ಠಾನ ಮುಖ್ಯಪ್ರಾಣದೇವರೇ ಆಗಿದ್ದಾರೆ. ಶ್ರವಣ-ಮನನಾದಿ ಉಪಾಯಗಳಿಂದ ಯಾರು ದೇವರನ್ನು ತಿಳಿಯುತ್ತಾರೋ ಆ ಸಾಧಕರನ್ನು ಅನುಗ್ರಹಿಸುವುದಕ್ಕಾಗಿ ಪರಮಾತ್ಮ ವಾಯುದೇವರನ್ನು ಪ್ರವೇಶಿಸುತ್ತಾನೆ.

## ಭಾಷ್ಯ

ನಿತ್ಯಂ ಪ್ರಾಣಸ್ಥಿತಸ್ಯೈವ ವಿಷ್ಣೋರಾವೇಶ ಏವ ಹಿ ।
ಪ್ರಾಣದ್ವಾರೇಣ ಯತ್ ಜ್ಞಾನದೀಪನಂ ಜ್ಞಾನಿನಃ ಸದಾ ।
ಸನ್ನಿಧಾನಂ ಯಥಾ ಪ್ರಾಪ್ತಾ ಪಿಶಾಚಾಃ ಪುರುಷೇಷ್ವಪಿ ॥
ತತ್ರ ಸ್ಥಿತ್ವಾಪಿ ಭುಂಜಂತ ಆವಿಶೇಯುಃ ಪುನಶ್ಚ ತೇ ।
ಮಂತ್ರಾದಿಭಿಸ್ತಥಾ ವಿಷ್ಣುಃ ಸದಾ ಪ್ರಾಣಸ್ಥಿತೋಽಪಿ ಸನ್ ॥
ಜ್ಞಾನದೀಪ್ತ್ಯಾದಿಕಂ ಕುರ್ಯಾತ್ ಜ್ಞಾನಿನಃ ಪುನರೇವ ತು ॥ ಇತಿ ಚ ॥

ಭಾಷ್ಯಾರ್ಥ- ಭಗವಂತ ಮುಖ್ಯಪ್ರಾಣದೇವರಲ್ಲಿ ಯಾವಾಗಲೂ ಸನ್ನಿಹಿತನಾಗಿಯೇ ಇರುತ್ತಾನೆ. ಆದರೂ ತನ್ನ ಉಪಾಸನೆ ಮಾಡಿದ ಸಾಧಕರಿಗೆ ಮುಖ್ಯಪ್ರಾಣದೇವರ ದ್ವಾರಾ ಜ್ಞಾನಾಭಿವೃದ್ಧಿಯನ್ನು ಮಾಡುತ್ತಾನೆ. ಈ ವಿವಕ್ಷೆಯಿಂದ ದೇವರು ವಾಯುದೇವರಲ್ಲಿ ಸನ್ನಿಹಿತನಾಗಿದ್ದಾನೆ ಎಂದು ಹೇಳುತ್ತಾರೆ. ಭೋಗಕ್ಕೆ ಉಪಯುಕ್ತವಾದ ಶರೀರವಿಲ್ಲದ ಪಿಶಾಚವು ತಾನು ಭೋಗ ಮಾಡುವುದಕ್ಕಾಗಿ ಪುರುಷನನ್ನು ಪ್ರವೇಶಿಸುತ್ತದೆ. ತಾನು ಪ್ರವೇಶಮಾಡಿದ ಪುರುಷನಲ್ಲಿ ಪಿಶಾಚವು ಇದ್ದರೂ ಕೂಡಾ ಮಂತ್ರಾದಿಗಳ ಪ್ರಯೋಗದಿಂದ ತನ್ನ ಪ್ರಭಾವವನ್ನು ತೋರಿಸುತ್ತದೆ. ಆವಾಗ ಪಿಶಾಚವು ಆವಿಷ್ಟವಾಯಿತು ಎಂದು ಲೋಕವು ವ್ಯವಹರಿಸುತ್ತದೆ. ಹಾಗೆ ವಾಯುದೇವರಲ್ಲಿ ದೇವರು ನಿತ್ಯವೂ ಸನ್ನಿಹಿತನಾಗಿದ್ದರೂ ತನ್ನ ಜ್ಞಾನಿಗಳಿಗೆ

ವಾಯುದೇವರ ದ್ವಾರಾ ಜ್ಞಾನದೀಪನ ಮಾಡಿಸುವ ಸಂದರ್ಭದಲ್ಲಿ ದೇವರು ಆವಿಷ್ಟನಾದ ಎಂದು ಶಾಸ್ತ್ರವು ವ್ಯವಹರಿಸುತ್ತದೆ.

### ಭಾಷ್ಯ

ಏತಚ್ಛುಕ್ರಂ ಪ್ರತಿ ಅನ್ಯದತಿವರ್ತಂತೇ ॥೧॥

ಸರ್ವಂ ತೀರ್ತ್ವಾ ಹರಿಂ ಶುಕ್ರಂ ಪ್ರತಿ ವೃತ್ತಿಃ ಭವೇತ್ತುನಃ ।
ಜ್ಞಾನಿನಃ ಸಾ ಹಿ ಮುಕ್ತಿಃ ಸ್ಯಾತ್ತನ್ನೈವಾತ್ಯೇತಿ ಕಶ್ಚನ ॥
ಇತಿ ಮಹಾವಾರಾಹೇ ॥

ಭಾಷ್ಯಾರ್ಥ- 'ಶುಕ್ರಮೇತದತಿವರ್ತಂತಿ...' ಎಂಬ ಮಂತ್ರದಲ್ಲಿ ಶೋಕರಹಿತನಾದುದರಿಂದ ಶುಕ್ರನಾಮಕನಾದ ಪರಮಾತ್ಮನನ್ನು ದಾಟುತ್ತಾರೆ ಎಂದು ಆಪಾತತಃ ಅರ್ಥವು ತೋರುತ್ತದೆ. ಅದು ಸರಿಯಲ್ಲ. ಆದ್ದರಿಂದ ಇಲ್ಲಿ ಅನ್ಯತ್ ಎಂಬ ಯೋಗ್ಯವಾದ ಪದವನ್ನು ಅಧ್ಯಾಹಾರ ಮಾಡಿಕೊಳ್ಳಬೇಕು. ಈ ಶುಕ್ರನಾಮಕನಾದ ಪರಮಾತ್ಮನನ್ನು ಪಡೆಯುವುದಕ್ಕಾಗಿ, ಅನ್ಯತ್ ಕರ್ಮಾದಿಗಳನ್ನು ದಾಟುತ್ತಾನೆ ಎಂದು ಸ್ವರಸವಾದ ಅರ್ಥವನ್ನು ತಿಳಿಯಬೇಕು.

ಕರ್ಮಾದಿಗಳನ್ನು ದಾಟಿ, ಶೋಕರಹಿತನಾದುದರಿಂದ ಶುಕ್ರನಾಮಕನಾದ ಹರಿಯ ಬಳಿ ಜ್ಞಾನಿಗಳು ಸೇರಿ ವೈಕುಂಠಾದಿಗಳಲ್ಲಿ ಇರುವುದೇನಿದೆಯೋ ಇದುವೇ ಮುಕ್ತಿ ಎನಿಸುತ್ತದೆ. ಶುಕ್ರನಾಮಕನಾದ ಪರಮಾತ್ಮನನ್ನು ದಾಟುವ ಸಾಮರ್ಥ್ಯ ಯಾರಿಗೂ ಇರುವುದಿಲ್ಲ. ಹೀಗೆ ಮಹಾವಾರಾಹವು ತಿಳಿಸುತ್ತದೆ.

### ಖಂಡಾರ್ಥ

ಆತ್ಮಜ್ಞಾರ್ಚಕಸ್ಯ ಭೂತಿಃ ಕೀದೃಶೀತ್ಯತೋ ವಾಯುಜ್ಞಾನದ್ವಾರಾ ಪರಮಪುಮರ್ಥಹೇತುಬ್ರಹ್ಮಜ್ಞಾನಾಪ್ತಿರೂಪೇತ್ಯಾಹ- ಸ ವೇದೈತದಿತಿ ॥

ಯೋಜನಾ ತು, ಯತ್ರ ಯಸ್ಮಿನ್ ಮುಖ್ಯವಾಯೌ ವಿಶ್ವಂ ಪೂರ್ಣಂ ಶುಭ್ರಂ ಶುದ್ಧಂ ಬ್ರಹ್ಮ ನಿಹಿತಂ ಸ್ಥಿತಂ ಸತ್ ಭಾತಿ, ವಾಯ್ವಾವಿಷ್ಟಜೀವಸ್ಯ ವಾಯುದ್ವಾರಾ ಜ್ಞಾನದೀಪನಂ ಕರೋತಿ ಏತತ್ಪರಮಂ ಮುಖ್ಯಂ ಬ್ರಹ್ಮಧಾಮ

ಪರಬ್ರಹ್ಮದಿಷ್ಠಾನ್ಯಕಂ ಮುಖ್ಯಾಯುಂ ಸ ಆತ್ಮಜ್ಞಾರ್ಚಕ: ವೇದ ಜಾನಾತೀತಿ । ಯಸ್ತು ಆತ್ಮಜ್ಞಮರ್ಚಯತಿ ಸ ಮುಖ್ಯಾಯುಜ್ಞೋ ಭವತಿ । ತದ್‌ಜ್ಞಾನೇ ಚ ಸತಿ ತತ್ರಸ್ಥೋ ಹರಿ: ತದ್ದ್ವಾರಾ ತಸ್ಯಾತ್ಮಜ್ಞಾರ್ಚಕಸ್ಯ ವಿಶೇಷತೋ ಭಗವದ್‌ಜ್ಞಾನವೃದ್ಧಿಂ ಕರೋತೀತಿ ಭಾವ: । ಕಥಮೇತದ್‌ಜ್ಞಾನಸ್ಯ ಭೂತಿತ್ವಮ್? ಸುಖಪ್ರಾಪ್ತಿದು:ಖನಿರಾಸಯೋರನ್ಯತರತ್ವಾಭಾವಾತ್ ಇತ್ಯತೋ ಬ್ರಹ್ಮಪ್ರಾಪ್ತಿಹೇತುತ್ವಾದಿತ್ಯಾಹ- **ಉಪಾಸತ ಇತಿ ।।** ಯೇ ಅಕಾಮಾ: ಕಾಮಾದಿದೋಷಹೀನಾ: ಪುರುಷಂ ಪೂರ್ಣಷಡ್ಗುಣಂ ಬ್ರಹ್ಮೋಪಾಸತೇ, ಶ್ರವಣಮನನಧ್ಯಾನೈರ್ಜಾನಂತಿ ತಂ ಶುಕ್ರಂ ಶೋಕರಹಿತಮೇತದ್ ಬ್ರಹ್ಮ ಗಂತುಮಿತಿ ಶೇಷ:, ಅತಿವರ್ತಂತಿ ಸಂಸಾರಕ್ಲೇಶಮತಿಕ್ರಮ್ಯ ವರ್ತಂತೇ, ಮುಕ್ತಾ ಭವಂತೀತ್ಯರ್ಥ: । ಹಿಶಬ್ದ: ಪ್ರಸಿದ್ಧಿದ್ಯೋತಕ: ।।೬.೧।।

ಅನುವಾದ- ಪರಮಾತ್ಮನನ್ನು ಅರ್ಚಿಸುವವರಿಗೆ ಯಾವ ವಿಧವಾದ ಐಶ್ವರ್ಯವು ಪ್ರಾಪ್ತವಾಗುತ್ತದೆ ಎಂದರೇ ವಾಯುದೇವರ ಜ್ಞಾನವಾಗುವ ಮೂಲಕ ಪರಮಪುರುಷಾರ್ಥವಾದ ಬ್ರಹ್ಮಜ್ಞಾನವೇ ಎಂಬ ಉತ್ತರವನ್ನು 'ಸ ವೇದೈತತ್...' ಎಂಬ ಮಂತ್ರವು ತಿಳಿಸುತ್ತದೆ.

ಯತ್ರ=ಯಾವ ಮುಖ್ಯಪ್ರಾಣನಲ್ಲಿ ವಿಶ್ವಮ್=ಪೂರ್ಣವಾದ. ಶುಭ್ರಮ್=ಶುದ್ಧವಾದ, ಪರಮಾತ್ಮನು ಸನ್ನಿಹಿತನಾಗಿ ತೋರುವನೋ, ಆ ಪರಮಾತ್ಮನು ವಾಯುದೇವರಿಂದ ಆವಿಷ್ಟನಾದ ಜೀವನಿಗೆ ವಾಯುದೇವರ ದ್ವಾರಾ ಜ್ಞಾನವನ್ನು ನೀಡುತ್ತಾನೆ. ಪರಮಾತ್ಮನಿಗೆ ವಿಶೇಷವಾಗಿ ಅಧಿಷ್ಠಾನರಾಗಿರುವ ವಾಯುದೇವರನ್ನು ಆ ಬ್ರಹ್ಮಜ್ಞಾನಿಯು ತಿಳಿಯುತ್ತಾನೆ. ಯಾವನು ಪರಮಾತ್ಮನನ್ನು ತಿಳಿಯುತ್ತಾನೋ ಅವನು ವಾಯುದೇವರನ್ನು ತಿಳಿಯುತ್ತಾನೆ ಎಂದು ಅರ್ಥ. ವಾಯುದೇವರ ಜ್ಞಾನವಾದರೇ ವಾಯುದೇವರಲ್ಲಿರುವ ಪರಮಾತ್ಮನು ವಾಯುದೇವರ ಮುಖಾಂತರ ಆತ್ಮಜ್ಞಾರ್ಚಕನಾದ ಸಾಧಕನಿಗೆ ವಿಶೇಷವಾಗಿ ತನ್ನ ಜ್ಞಾನವೃದ್ಧಿಯಾಗುವಂತೆ ಮಾಡುತ್ತಾನೆ ಎಂದು ಭಾವ. ಭಗವಂತನ ಜ್ಞಾನವು ಹೇಗೆ ಭೂತಿಯಾಗುತ್ತದೆ. ಅದು ಇಷ್ಟಪ್ರಾಪ್ತಿಯೂ ಅಲ್ಲ ಅನಿಷ್ಟನಿವೃತ್ತಿರೂಪವೂ ಅಲ್ಲ ಎಂದರೇ ಆ ಜ್ಞಾನವು ಪುರುಷಾರ್ಥವಾದ ಬ್ರಹ್ಮಪ್ರಾಪ್ತಿಗೆ

ಸಾಧನವಾದುದರಿಂದ ಅದು ಕೂಡಾ ಭೂತಿಯೇ ಎಂದು 'ಉಪಾಸತೇ' ಎಂಬ ವಚನದಿಂದ ತಿಳಿಸುತ್ತಿದ್ದಾರೆ. ಕಾಮಾದಿದೋಷಗಳಿಂದ ರಹಿತರಾದ ಯಾವ ಸಾಧಕರು ಷಡ್ಗುಣಗಳಿಂದ ಪೂರ್ಣನಾದ ಪರಮಾತ್ಮನನ್ನು ಉಪಾಸಿಸುತ್ತಾರೋ ಶ್ರವಣ-ಮನನ-ಧ್ಯಾನಗಳಿಂದ ತಿಳಿಯುತ್ತಾರೋ, ಅಂತಹ ಶೋಕರಹಿತನಾದ, ಈ ಪರಮಾತ್ಮನನ್ನು ಹೊಂದಲು ಸಾಂಸಾರಿಕವಾದ ಕ್ಲೇಶಗಳನ್ನು ದಾಟಿ ಮುಕ್ತರಾಗುತ್ತಾರೆ. ಇಷ್ಟವಾದ ಬ್ರಹ್ಮಪ್ರಾಪ್ತಿರೂಪವಾದ ಮುಕ್ತಿಗೆ ಕಾರಣವಾದುದರಿಂದ ಬ್ರಹ್ಮಜ್ಞಾನವು ಕೂಡಾ ಭಾಗ್ಯವಾಗುತ್ತದೆ ಎಂದು ತಿಳಿಯಬೇಕು. ॥೬.೧॥

### ಉಪನಿಷತ್

**ಕಾಮಾನ್ ಯಃ ಕಾಮಯತೇ ಮನ್ಯಮಾನಃ**
**ಸ ಕಾಮಭಿರ್ಜಾಯತೇ ತತ್ರ ತತ್ರ ।**
**ಪರ್ಯಾಪ್ತಕಾಮಸ್ಯ ಕೃತಾತ್ಮನಶ್ಚ**
**ಇಹೈವ ಸರ್ವೇ ಪ್ರವಿಲೀಯಂತಿ ಕಾಮಾಃ ॥೬.೨॥**

**ಉಪನಿಷದರ್ಥ-** ಯಾವ ವ್ಯಕ್ತಿಯು ವಿಷಯಗಳು ಶಾಶ್ವತವೆಂದು ತಿಳಿದು ಅವುಗಳನ್ನು ಅಪೇಕ್ಷಿಸುತ್ತಾನೋ ಅವನು ಆಯಾ ಕಾಮನೆಗಳಿಂದ ಬದ್ಧನಾಗಿ ನಾನಾಯೋನಿಗಳಲ್ಲಿ ನಾನಾದೇಶಗಳಲ್ಲಿ ಜನಿಸುತ್ತಾನೆ. ಮತ್ತೆ ಸಂಸಾರಬದ್ಧನಾಗುತ್ತಾನೆ. ಯಾವನು ವಿಷಯಗಳಲ್ಲಿಯ ಅನರ್ಥಸಂತತಿಯನ್ನು ಅನುಭವಿಸಿ ಪಾಠವನ್ನು ಕಲಿಯುತ್ತಾನೋ, ಭಗವಂತನಲ್ಲಿಯೇ ಮನಸ್ಸನ್ನು ಸ್ಥಿರಗೊಳಿಸುತ್ತಾ, ತೃಪ್ತನಾಗಿದ್ದಾನೋ ಅವನ ನಾನಾವಸ್ತುವಿಷಯಕವಾದ ಇಚ್ಛೆಗಳೆಲ್ಲ ನಿವೃತ್ತವಾಗುತ್ತವೆ. ಆ ಜನ್ಮದಲ್ಲಿಯೇ ಅವನು ವಿಷಯವಿರಕ್ತನಾಗುತ್ತಾನೆ.

### ಖಂಡಾರ್ಥ

ಅಕಾಮೂ ಇತಿ ಕಿಮರ್ದಮಿತ್ಯತ: ಸಕಾಮತಯೋಪಾಸನೇ ಕ್ಷಯಿಷ್ಣುಲೋಕಪ್ರಾಪ್ತಿರೇವ ನ ನಿತ್ಯಲೋಕಾವಾಪ್ತಿರಿತ್ಯಾಹ- **ಕಾಮಾನಿತಿ** ॥ ಯಃ ಕಾಮಾನ್ ವಿಷಯಾನ್ ಬದ್ರಾನ್ ಮನ್ಯಮಾನಃ ಕಾಮಯತೇ ಇಚ್ಛತಿ ।

ವಿಷಯಕಾಮನಯಾ ಭಗವಂತಮುಪಾಸ್ತ ಇತಿ ಯಾವತ್ । ಸ ಪುಮಾನ್ ಕಾಮಭಿರ್ವಿಷಯೈಃ ಸಹ ತತ್ರ ತತ್ರ ಲೋಕೇ ಭಾಗ್ಯಪುರುಷಸಂತತೌ ವಾ ಜಾಯತೇ । ಅಕಾಮತಾ ತರ್ಹಿ ಕಥಂ ಭವತೀತ್ಯತ ಆಹ- **ಪರ್ಯಾಪ್ತೇತಿ** ॥ ಯಥೇಷ್ಟಂ ವಿಷಯಾನ್ ಭುಕ್ತವತಃ ಅತ ಏವ ಕೃತಾತ್ಮನಃ ತೃಪ್ತಮನಸ್ಕಃ ಯಃ ಇಹೈವ ಜನ್ಮನಿ ಸರ್ವೇ ಕಾಮಾಃ ಕಾಮನಾಃ ನಾನಾವಸ್ತುವಿಷಯಿಣ್ಯ ಇಚ್ಛಾಃ ಪ್ರವಿಲೀಯಂತಿ ನಿವೃತ್ತಾ ಭವಂತಿ ಇತಿ ॥೬.೨॥

**ಅನುವಾದ-** ಹಿಂದೆ ಅಕಾಮಾಃ ಎಂದು ಯಾಕೆ ಹೇಳಿದರು ಎಂದರೇ ಸಕಾಮವಾಗಿ ದೇವರನ್ನು ಉಪಾಸನೆ ಮಾಡಿದರೇ ನಾಶಶೀಲವಾದ ಲೋಕಗಳ ಪ್ರಾಪ್ತಿಯಾಗುತ್ತದೆ ನಿತ್ಯವಾದ ಲೋಕಗಳ ಪ್ರಾಪ್ತಿಯಾಗುವುದಿಲ್ಲ ಎಂದು 'ಕಾಮಾನ್...' ಎಂಬ ಮಂತ್ರದಿಂದ ಹೇಳುತ್ತಾರೆ.

ಯಾವ ವ್ಯಕ್ತಿಯು ವಿಷಯಗಳನ್ನೇ ಭದ್ರವೆಂದು, ಶಾಶ್ವತವೆಂದು ಭಾವಿಸಿ ವಿಷಯಗಳನ್ನು ಅಪೇಕ್ಷಿಸುತ್ತಾನೋ, ವಿಷಯಗಳ ಅಪೇಕ್ಷೆಯಿಂದ ಭಗವಂತನನ್ನು ಪೂಜಿಸುತ್ತಾನೋ ಆ ಪುರುಷನು ಆಯಾ ವಿಷಯಗಳಿಂದ ಸಂಪನ್ನನಾಗಿ ಆಯಾ ಲೋಕದಲ್ಲಿ ಭಾಗ್ಯವಂತರ ಕುಲದಲ್ಲಿ ಜನಿಸುತ್ತಾನೆ. ಕಾಮನಾರಹಿತನು ಹೇಗಾಗುತ್ತಾನೆ ಎಂಬುದನ್ನು 'ಪರ್ಯಾಪ್ತಕಾಮಸ್ಯ' ಎಂಬ ಮಾತು ತಿಳಿಸುತ್ತದೆ. ಯಥೇಷ್ಟವಾಗಿ ವಿಷಯಗಳನ್ನು ಅನುಭವಿಸಿದ, ಆದ್ದರಿಂದಲೇ ತೃಪ್ತವಾದ ಮನಸ್ಸುಳ್ಳವನು ಯಾವನೋ ಅವನು ಇದೇ ಜನ್ಮದಲ್ಲಿ ಎಲ್ಲ ವಿಷಯಗಳ ಅಪೇಕ್ಷೆಯನ್ನು ಪರಿತ್ಯಜಿಸುತ್ತಾನೆ. ॥೬.೨॥

### ಉಪನಿಷತ್

ನಾಽಯಮಾತ್ಮಾ ಪ್ರವಚನೇನ ಲಭ್ಯೋ
ನ ಮೇಧಯಾ ನ ಬಹುನಾ ಶ್ರುತೇನ ।
ಯಮೇವೈಷ ವೃಣುತೇ ತೇನ ಲಭ್ಯಃ
ತಸ್ಯೈಷ ಆತ್ಮಾ ವಿವೃಣುತೇ ತನೂಂ ಸ್ವಾಮ್॥೬.೩ ॥

**ಉಪನಿಷದರ್ಥ-** ಶಾಸ್ತ್ರಾಭ್ಯಾಸರೂಪವಾದ ಉಪಾಸನೆ, ಜ್ಞಾನಪೂರ್ವಕವಾದ ಮನನ, ವಿಶಿಷ್ಟವಾದ ಶ್ರವಣ, ಈ ಯಾವ ಸಾಧನೆಗಳಿಂದಲೂ ಭಗವಂತ ಲಭ್ಯನಾಗುವುದಿಲ್ಲ. ಕಿಂತು ಈ ಪರಮಾತ್ಮನು ಯಾರನ್ನು ನನ್ನವನು ಎಂದು ಸ್ವೀಕರಿಸುತ್ತಾನೋ ಅವನಿಗೆ ಮಾತ್ರ ಲಭ್ಯನಾಗುತ್ತಾನೆ. ಆ ಅಧಿಕಾರಿಗೆ ಮಾತ್ರ ತನ್ನ ಅಪರೋಕ್ಷವನ್ನು ಮಾಡಿಸುತ್ತಾನೆ.

## ಖಂಡಾರ್ಥ

'ನ ಚಕ್ಷುಷಾ ಗೃಹ್ಯತೇ' ಇತ್ಯತ್ರ ದೇವತಾಂತರಶಕ್ತ್ಯಾ ಹರಿಂ ನ ಪಶ್ಯಂತಿ, ಕಿಂತು ಜ್ಞಾನಪ್ರಸಾದಾದಿತ್ಯುಕ್ತಂ, ತದ್ವಿಶದಯತಿ- **ನಾsಯಮಿತಿ** ॥ ಮೇಧಾ ಪ್ರಜ್ಞಾವಿಶೇಷಃ । ಅಯಮಾತ್ಮಾ ಭಕ್ತಿಹೀನಪ್ರವಚನಾದಿನಾ ನ ಲಭ್ಯಃ, ನ ಸಾಕ್ಷಾತ್ಕರ್ತುಂ ಶಕ್ಯಃ, ಅಪಿತು ಯಂ ಭಕ್ತಮೇವ ಆತ್ಮಾ ವೃಣುತೇ ಸ್ವೀಕರೋತಿ, ಯಸ್ಮೈ ಪ್ರಸೀದತೀತಿ ಯಾವತ್ । ತೇನೈವ ಪ್ರಸಾದವಿಷಯೇಣೈವ ಲಭ್ಯಃ । ತದ್ವ್ಯನಕ್ತಿ- ತಸ್ಯ ಸ್ವಪ್ರಸಾದವಿಷಯಸ್ಯ ಏಷಃ ಪ್ರಸನ್ನಃ ಆತ್ಮಾ ಸ್ವಾಂ ತನೂಂ ವಿವೃಣುತೇ ಪ್ರಕಾಶಯತೀತಿ । ತಸ್ಯೈವಾsಪರೋಕ್ಷವಿಷಯೋ ಭವತೀತ್ಯರ್ಥಃ ॥೩॥

**ಅನುವಾದ-** 'ನ ಚಕ್ಷುಷಾ ಗೃಹ್ಯತೇ...' ಎಂಬಲ್ಲಿ ಚಕ್ಷುರಾದಿಗಳಿಗೆ ಅಭಿಮಾನಿಗಳಾದ ಯಾವ ದೇವತೆಗಳ ಅನುಗ್ರಹದಿಂದಲೂ ದೇವರು ಪ್ರಾಪ್ಯನಲ್ಲ ಕಿಂತು ಜ್ಞಾನಪ್ರಸಾದದಿಂದಲೇ ಗೋಚರನಾಗುತ್ತಾನೆ ಎಂದು ಹೇಳಿದರು. ಅದನ್ನೇ 'ನಾsಯಂ...' ಎಂಬ ಮಂತ್ರವು ವಿಶದವಾಗಿ ಹೇಳುತ್ತದೆ.

ಮೇಧಾ=ಪ್ರಜ್ಞಾವಿಶೇಷವು, ಭಕ್ತಿರಹಿತವಾದ ಪ್ರವಚನಾದಿಗಳಿಂದ ದೇವರನ್ನು ಸಾಕ್ಷಾತ್ಕಾರ ಮಾಡಿಕೊಳ್ಳಲು ಸಾಧ್ಯವಿಲ್ಲ. ಕಿಂತು ಯಾವನನ್ನು ಈ ಪರಮಾತ್ಮನು ತನ್ನ ಭಕ್ತನೆಂದು ಸ್ವೀಕರಿಸುತ್ತಾನೋ, ಯಾರಿಗೆ ಪ್ರಸನ್ನನಾಗುವನೋ ಎಂದು ಅರ್ಥ. ಪರಮಾತ್ಮನ ಪ್ರಸಾದಕ್ಕೆ ವಿಷಯನಾಗಿರುವ ಅವನೇ ದೇವರನ್ನು ಪಡೆಯುತ್ತಾನೆ. ತನ್ನ ಪ್ರಸಾದಕ್ಕೆ ವಿಷಯನಾಗಿರುವವನಿಗೆ ಪ್ರಸನ್ನನಾದ ಈ ಪರಮಾತ್ಮನು ತನ್ನ

ಯಥಾರ್ಥವಾದ ಸ್ವರೂಪವನ್ನು ತೋರಿಸುತ್ತಾನೆ. ಅವನಿಗೇನೇ ಅಪರೋಕ್ಷವಿಷಯನಾಗುತ್ತಾನೆ ಎಂದು ಅರ್ಥ. ॥೬.೩॥

**ಉಪನಿಷತ್**

**ನಾಽಯಮಾತ್ಮಾ ಬಲಹೀನೇನ ಲಭ್ಯೋ**
**ನಚ ಪ್ರಮಾದಾತ್ತಪಸೋ ವಾಽಪ್ಯಲಿಂಗಾತ್ ।**
**ಏತೈರುಪಾಯೈರ್ಯತತೇ ಯಸ್ತು ವಿದ್ವಾನ್**
**ತಸ್ಯೈಷ ಆತ್ಮಾ ವಿಶತೇ ಬ್ರಹ್ಮಧಾಮ ॥೬.೪॥**

**ಉಪನಿಷದರ್ಥ-** ಶ್ರವಣ-ಮನನ-ಯುಕ್ತ್ಯಾದಿಬಲವಿಲ್ಲದವನು ದೇವರಲ್ಲಿ ಮನಸ್ಸನ್ನು ಸ್ಥಿರಗೊಳಿಸದವನು, ದೇವರ ಧ್ಯಾನವಿಲ್ಲದವನು, ಭಗವನಂತನನ್ನು ಹೊಂದುವುದಿಲ್ಲ. ಪ್ರಮಾಣಗಳಲ್ಲಿ ಹೇಳಲ್ಪಡದ ಭಗವತ್ಪ್ರಸಾದಕ್ಕೆ ಅನುಗುಣವಾಗದಿರುವ ಸಂತಾಪಾತ್ಮಕವಾದ ಅಥವಾ ಆಲೋಚನಾ-ರೂಪವಾದ ತಪಸ್ಸಿನಿಂದ ದೇವರನ್ನು ಪಡೆಯಲಾಗುವುದಿಲ್ಲ. ಶಾಸ್ತ್ರಗಳಿಂದ ಭಗವಂತನ ಉತ್ಕರ್ಷವನ್ನು ತಿಳಿದಿರುವ ಯಾವ ಜ್ಞಾನಿಯು ಭಗವತ್ಪ್ರಸಾದಕ್ಕೆ ಅನುಗುಣವಾದ ಶ್ರವಣಾದಿ ಸಾಧನಗಳಿಂದ ಭಗವಂತನ ಅಪರೋಕ್ಷಕ್ಕಾಗಿ ಪ್ರಯತ್ನಿಸುತ್ತಾನೋ ಅಂಥವನಿಗೆ ಮಾತ್ರ ಅಪರೋಕ್ಷವಾಗುತ್ತದೆ. ಆ ಪುರುಷನಲ್ಲಿ ಸ್ಥಿತನಾದ ವಾಯುದೇವರಲ್ಲಿರುವ ಭಗವಂತನೇ ವಾಯುದೇವರ ದ್ವಾರಾ ಆ ಸಾಧಕನಿಗೆ ಜ್ಞಾನವನ್ನು ನೀಡುತ್ತಾನೆ.

**ಖಂಡಾರ್ಥ**

ತರ್ಹಿ ಪ್ರವಚನಾದೇರ್ವೈಯರ್ಥ್ಯಮಿತ್ಯತ ಆಹ- **ನಾಽಯಮಿತಿ** ॥ ಬಲಹೀನೇನ ಶ್ರವಣಮನನಭಕ್ತ್ಯಾದಿಬಲಹೀನೇನ । ಪ್ರಮಾದಾತ್ ಭಗವದಿಸ್ಮರಣಾದಿರೂಪಾತ್ । ದೃಷ್ಟಾಂತಾರ್ಥಮೇತದುಕ್ತಿ: । ಅಲಿಂಗಾತ್ ಲಿಂಗೋಪಲಕ್ಷಿತಪ್ರಮಾಣಾನುಕ್ತಾತ್ ತಪಸೋಽಪೀತ್ಯರ್ಥ: । ತರ್ಹಿ ಕೇನ ಲಭ್ಯ ಇತ್ಯತ ಆಹ- **ಏತೈರಿತಿ** ॥ ಭಕ್ತ್ಯಾದ್ಯುಪೇತಶ್ರವಣಾದಿರೂಪೈ: ಉಪಾಯೈ: ವಿದ್ವಾನ್ ಜ್ಞಾನೀ ಯಸ್ತು ಯತತೇ ಸಾಕ್ಷಾತ್ಕಾರಾಯ ತಸ್ಯೈವ ಆತ್ಮಾ ಬ್ರಹ್ಮಧಾಮ

ಪ್ರಾಗುಕ್ತದಿಶಾ ಮುಖ್ಯನಾಯುಂ ವಿಶತೇ ಪ್ರವಿಶತಿ । ಯಸ್ತ್ವೇತೈಃ ಉಪಾಯೈಃ ವಿದ್ವಾನ್ ಭೂತ್ವಾ ಪುನಃ ಬ್ರಹ್ಮಜ್ಞಾನಾಯ ಯತ್ನವಾನಾಸ್ತೇ ತಸ್ಮಿನ್ ಪುರುಷೇ ಸ್ಥಿತಮುಖ್ಯವಾಯೌ ವಿದ್ಯಮಾನ ಏವ ಭಗವಾನ್ ವಾಯುದ್ವಾರಾ ತಸ್ಯ ಜ್ಞಾನದೀಪನಂ ಕರೋತೀತಿ ಜ್ಞಾನದೀಪನಸ್ಯಾಗಂತುಕತ್ವೇನ ಹೇತುನಾ ತದಪೇಕ್ಷಯಾ ತಸ್ಯ ಬ್ರಹ್ಮಧಾಮ ವಾಯುಂ ವಿಶತ ಇತ್ಯುಚ್ಯತೇ । ಯಥಾ ಪಿಶಾಚಾವಿಷ್ಟಪುರುಷೇ ತಸ್ಮಿನ್ ಸದಾ ಸ್ಥಿತೋಽಪಿ ಮಂತ್ರಾದಿಭಿಃ ಆವಿಷ್ಟಃ ಪಿಶಾಚ ಇತಿ ವ್ಯವಹಾರಃ ತದ್ವೇತಿ ಭಾವಃ ॥೬.೪॥

ಅನುವಾದ- ಪ್ರವಚನಾದಿಸಾಧನಗಳಿಂದ ದೇವರನ್ನು ತಿಳಿಯಲು ಆಗುವುದಿಲ್ಲವೆಂದಾದರೇ ಅವುಗಳೆಲ್ಲ ವ್ಯರ್ಥವೆಂದಾಗಬೇಕಾದೀತು ಎಂಬುದಕ್ಕೆ 'ನಾಽಯಮಾತ್ಮಾ ಬಲಹೀನೇನ...' ಎಂಬ ಮಂತ್ರವು ಉತ್ತರವನ್ನು ಹೇಳುತ್ತದೆ.

ಬಲಹೀನೇನ=ಶ್ರವಣ-ಮನನಭಕ್ತ್ಯಾದಿಬಲಗಳಿಲ್ಲದವನಿಂದ, ಪ್ರಮಾದಾತ್=ಶ್ರೀಹರಿಯ ವಿಸ್ಮರಣರೂಪವಾದ ಪ್ರಮಾದದಿಂದ, ಅಲಿಂಗಾತ್=ಲಿಂಗದಿಂದ ಉಪಲಕ್ಷಿತವಾದ ಪ್ರಮಾಣಗಳಲ್ಲಿ ಉಕ್ತವಾಗದ ವ್ರತಾದಿರೂಪವಾದ ತಪಸ್ಸಿನಿಂದಲೂ ಲಭ್ಯನಲ್ಲ. ಹಾಗಾದರೇ ಯಾವುದರಿಂದ ಲಭ್ಯನಾಗುತ್ತಾನೆ ಎಂದರೇ 'ಏತೈಃ' ಎಂಬ ವಚನವು ತಿಳಿಸುತ್ತದೆ. ಭಕ್ತ್ಯಾದಿಗಳಿಂದ ಯುಕ್ತವಾದ ಶ್ರವಣಾದಿರೂಪವಾದ ಉಪಾಯಗಳಿಂದ ಜ್ಞಾನಿಯಾದವನು ಯಾರು ಸಾಕ್ಷಾತ್ಕಾರಕ್ಕಾಗಿ ಪ್ರಯತ್ನ ಮಾಡುತ್ತಾನೋ ಅವನಿಗೆ ತನ್ನ ದರ್ಶನವನ್ನು ನೀಡುವುದಕ್ಕಾಗಿ ಈ ಪರಮಾತ್ಮನು ತನಗೆ ಅಧಿಷ್ಠಾನನಾಗಿರುವ ವಾಯುದೇವರನ್ನು ಪ್ರವೇಶಿಸುತ್ತಾನೆ. ॥೬.೪॥

ವಾಯುದೇವರಲ್ಲಿ ದೇವರು ಯಾವಾಗಲೂ ಇರುತ್ತಾನೆ. ಹೀಗಿರುವಾಗ ವಾಯುದೇವರನ್ನು ದೇವರು ಪ್ರವೇಶಿಸುತ್ತಾನೆ ಎಂದು ಹೇಳಿದ್ದು ಯಾಕೆ ಎಂದರೇ,

ಯಾರು ಈ ಉಪಾಯಗಳಿಂದ ಜ್ಞಾನಿಯಾಗಿ ಮತ್ತೆ ಬ್ರಹ್ಮಜ್ಞಾನಕ್ಕಾಗಿ ಪ್ರಯತ್ನಿಸುತ್ತಾನೋ ಆ ಪುರುಷನಲ್ಲಿರುವ ಮುಖ್ಯಪ್ರಾಣನಲ್ಲಿ ಯಾವಾಗಲೂ ಇರುವ ಪರಮಾತ್ಮನೇ ವಾಯುದೇವರ ದ್ವಾರಾ ಆ ಜೀವನಿಗೆ ಜ್ಞಾನವನ್ನು ಬೆಳಗಿಸುತ್ತಾನೆ. ದೇವರು ಯಾವಾಗಲೂ ಇದ್ದರೂ, ಈ ಜ್ಞಾನದೀಪನವೆಂಬುದು ಆಗಂತುಕವಾದುದರಿಂದ ಜ್ಞಾನದೀಪನ ಮಾಡುವ ಭಗವಂತ ವಾಯುದೇವರಲ್ಲಿ ಪ್ರವೇಶಿಸುತ್ತಾನೆ ಎಂದು ಹೇಳಿದ್ದು.

ಇದಕ್ಕೆ ದೃಷ್ಟಾಂತ. ಪಿಶಾಚವು ತಾನು ಆವಿಷ್ಟನಾದ ಪುರುಷನಲ್ಲಿ ಯಾವಾಗಲೂ ಇದ್ದರೂ ಕೂಡಾ ಮಂತ್ರಾದಿಗಳ ಪ್ರಯೋಗದಿಂದ ತನ್ನ ಪ್ರಭಾವವನ್ನ ತೋರಿಸಿದಾಗ, ಪಿಶಾಚಗಳು ಪುರುಷನಲ್ಲಿ ಪ್ರವೇಶಿಸಿದವು ಎಂದು ವ್ಯವಹರಿಸುತ್ತಾರೆ. ಹಾಗೆಯೇ ಪ್ರಕೃತದಲ್ಲಿಯೂ ತಿಳಿಯಬೇಕು.

**ಉಪನಿಷತ್**

**ಸಂಪ್ರಾಪ್ಯೈನಮೃಷಯೋ ಜ್ಞಾನತೃಪ್ತಾಃ**
**ಕೃತಾತ್ಮಾನೋ ವೀತರಾಗಾಃ ಪ್ರಶಾಂತಾಃ ।**
**ತೇ ಸರ್ವಗಂ ಸರ್ವತಃ ಪ್ರಾಪ್ಯ ಧೀರಾಃ**
**ಮುಕ್ತಾತ್ಮಾನಃ ಸರ್ವಮೇವಾಽಽವಿಶಂತಿ ॥೬.೫॥**

**ಉಪನಿಷದರ್ಥ-** ಅಪರೋಕ್ಷಜ್ಞಾನದಿಂದಲೇ ತೃಪ್ತರಾದ ಋಷಿಗಳು ದೇವರನ್ನು ಪಡೆದು ವಿಷಯವಿರಕ್ತರಾಗುತ್ತಾರೆ. ಪ್ರಕೃಷ್ಟವಾದ ಸುಖ ಉಳ್ಳವರಾಗುತ್ತಾರೆ.

ವಿಷಯಗಳಲ್ಲಿ ರಾಗವನ್ನು ಕಳೆದುಕೊಂಡಿರುವ, ಮನಸ್ಸು ಮೊದಲಾದ ಇಂದ್ರಿಯಗಳನ್ನು ನಿಗ್ರಹಿಸಿರುವ, ಕ್ರೌರ್ಯರಹಿತರಾದ, ಭಗವಂತನಲ್ಲಿ ಮನಸ್ಸನ್ನು ಇಟ್ಟಿರುವ, ಸಿದ್ಧಾಂತಜ್ಞಾನದಿಂದ ಅಚಲರಾದ, ಋಷಿಗಳು ಅಪರೋಕ್ಷವನ್ನು ಪಡೆದದ್ದರಿಂದ ಅನ್ಯತ್ರ ಅಲಂಬುದ್ಧಿಯಿಂದ ಯುಕ್ತರಾಗಿ, ದೇಹ-ಗೇಹಾದಿಗಳಿಂದ ಮುಕ್ತರಾಗಿ, ಸರ್ವಗುಣಪರಿಪೂರ್ಣನಾದ, ಸರ್ವಗತನಾದ, ಪರಮಾತ್ಮನ ಸಮೀಪ ಸೇರುತ್ತಾರೆ. ತಮ್ಮ ತಮ್ಮ ಯೋಗ್ಯತೆಗೆ ಅನುಗುಣವಾಗಿ ಸ್ವರೂಪಸುಖವನ್ನು ಅನುಭವಿಸುತ್ತಾರೆ.

## ಭಾಷ್ಯ

**ಸರ್ವತೋ ದೇಹಾದೇಃ ಮುಕ್ತಾಃ । ಸರ್ವಗಂ ಭಗವಂತಂ ಪ್ರಾಪ್ಯ ತಮೇವಾಽಪಿಯಂತಿ ।**

**ದೇಹಾದೇಃ ಸರ್ವತೋ ಮುಕ್ತಾಃ ಸರ್ವಗಂ ಪುರುಷೋತ್ತಮಮ್ ।**
**ಪ್ರಾಪ್ಯ ತಸ್ಮಿನ್ ಪ್ರವಿಶ್ಯಾಽಥ ಮೋದಂತೇಽಂತರ್ಬಹಿಸ್ತಥಾ ॥ ಇತಿ ಚ**

**ಭಾಷ್ಯಾರ್ಥ-** ಸರ್ವತಃ ಎಂಬ ಪದವನ್ನು ಪ್ರಾಪ್ಯ ಎಂಬ ಪದದ ಜೊತೆಗೆ ಅನ್ವಯ ಮಾಡಿಕೊಳ್ಳಬಾರದು. ಕಿಂತು ಮುಕ್ತಾತ್ಮಾನಃ ಎಂಬ ಪದದ ಜೊತೆ ಅನ್ವಯ ಮಾಡಿಕೊಳ್ಳಬೇಕು. ಇಲ್ಲಿ ದೇಹವೆಂದರೇ ಚರಮದೇಹ ಎಂದು ಅರ್ಥ. ಹೀಗಾಗಿ ಚರಮದೇಹದಿಂದ ಕರ್ಮದಿಂದ ಅವಿದ್ಯಾದಿಂದ ಕಾಮದಿಂದ ಮುಕ್ತರಾದವರು ಎಂದು ಅರ್ಥ. ಇಂಥವರು ಸರ್ವತ್ರ ಸ್ಥಿತನಾದ ಪರಮಾತ್ಮನನ್ನು ಪಡೆದು ಆ ಪರಮಾತ್ಮನಲ್ಲಿಯೇ ಸೇರುತ್ತಾರೆ.

## ಖಂಡಾರ್ಥ

**ಆತ್ಮಜ್ಞಾನಮಹಿಮಾನಮಾಹ- ಸಂಪ್ರಾಪ್ಯೈನಮಿತಿ ॥ ಜ್ಞಾನತೃಪ್ತಾಃ** ಜ್ಞಾನೇನ ತೃಪ್ತಾ ಋಷಯಃ ಏನಂ ಭಗವಂತಂ ಸಂಪ್ರಾಪ್ಯ ಕೃತಾತ್ಮಾನಃ ಕೃತಕೃತ್ಯಾಃ, ವೀತರಾಗಾಃ ಪ್ರಶಾಂತಾಃ ವಿಷಯೋಪರತಾ ಭವಂತಿ । ನ ಕೇವಲಮೇತಾವದೇವ, ಕಿಂತು ತೇ ಧೀರಾಃ ಸರ್ವತಃ ದೇಹಾದಿಬಂಧಾತ್ ಮುಕ್ತಾತ್ಮಾನಃ ಸಂತಃ ಸರ್ವಗಂ ಭಗವಂತಂ ಪ್ರಾಪ್ಯ ಸರ್ವಮೇವ ಗುಣಪೂರ್ಣಂ ಭಗವಂತಂ ಏವ ಅಪಿಯಂತಿ ಇತರೈಃ ಅಜ್ಞೇಯತಯಾ ಪ್ರವಿಶಂತಿ । ಪ್ರವಿಶ್ಯ ಚ ಇಚ್ಛಯಾ ಅಂತರ್ಬಹಿಃ ಸಂಚರಂತಃ ಭೋಗಾನ್ ಭುಂಜಾನಾ ಆಸತ ಇತ್ಯರ್ಥಃ ॥೬.೫॥

**ಅನುವಾದ-** ಬ್ರಹ್ಮಜ್ಞಾನದ ಮಹಿಮೆಯನ್ನು 'ಸಂಪ್ರಾಪ್ಯೈನಂ...' ಎಂಬ ಮಂತ್ರವು ತಿಳಿಸುತ್ತಿದೆ.

ಜ್ಞಾನತೃಪ್ತಾಃ=ಜ್ಞಾನದಿಂದ ತೃಪ್ತರಾದ ಋಷಿಗಳು, ಈ ಭಗವಂತನನ್ನು ಹೊಂದಿ, ಕೃತಕೃತ್ಯರಾಗಿ, ರಾಗರಹಿತರಾಗಿ, ವಿಷಯಗಳಿಂದ ಉಪರತರಾಗುತ್ತಾರೆ.

ಇಷ್ಟುಮಾತ್ರವಲ್ಲ, ಆ ಜ್ಞಾನಿಗಳು ದೇಹಾದಿಬಂಧಗಳಿಂದ ಮುಕ್ತರಾಗಿ ಎಲ್ಲ ಕಡೆಗೆ ಇರುವ ಪರಮಾತ್ಮನನ್ನು ಹೊಂದಿ ಗುಣಪೂರ್ಣನಾದ ಪರಮಾತ್ಮನನ್ನು ಮತ್ತೊಬ್ಬರಿಗೆ ತಿಳಿಯದ ಹಾಗೆ ಪ್ರವೇಶಿಸುತ್ತಾರೆ. ಹೀಗೆ ದೇವರನ್ನು ಪ್ರವೇಶಿಸಿ, ತಮ್ಮ ಇಚ್ಛೆಯಿಂದ ಹೊರಗೆ ಒಳಗೆ ಸಂಚರಿಸುತ್ತಾ ವಿಷಯಗಳನ್ನು ಅನುಭವಿಸುತ್ತಾ ಇರುತ್ತಾರೆ ಎಂದು ತಿಳಿಯಬೇಕು. ॥೬.೫॥

### ಉಪನಿಷತ್

**ವೇದಾಂತವಿಜ್ಞಾನಸುನಿಶ್ಚಿತಾರ್ಥಾಃ**
**ಸನ್ನ್ಯಾಸಯೋಗಾದ್ಯತಯಃ ಶುದ್ಧಸತ್ತ್ವಾಃ ।**
**ತೇ ಬ್ರಹ್ಮಲೋಕೇಷು ಪರಾಂತಕಾಲೇ**
**ಪರಾಮೃತಾತ್ಪರಿಮುಚ್ಯಂತಿ ಸರ್ವೇ ॥೬.೬॥**

ಉಪನಿಷದರ್ಥ- ಉಪನಿಷತ್ತುಗಳ ಶ್ರವಣದಿಂದ ಉಂಟಾದ ವಿಜ್ಞಾನದಿಂದ ಭಗವಂತ ಮೊದಲಾದ ತತ್ತ್ವಗಳ ನಿರ್ಧಾರವನ್ನು ಮಾಡಿಕೊಂಡಿರುವ, ಕಾಮ್ಯಕರ್ಮಪರಿತ್ಯಾಗರೂಪವಾದ ಉಪಾಯದಿಂದ ಅಂತಃಕರಣವನ್ನು ಸ್ವಚ್ಛಮಾಡಿಕೊಂಡಿರುವ, ಹೀಗೆ ಶ್ರವಣಾದಿ ಪ್ರಯತ್ನಗಳನ್ನು ಮಾಡುವ ಅಧಿಕಾರಿಗಳು, ಅಪರೋಕ್ಷಜ್ಞಾನವಾದ ಮೇಲೆ, ಭೋಗದಿಂದ ಪ್ರಾರಬ್ಧವನ್ನು ಕಳೆದುಕೊಳ್ಳುತ್ತಾರೆ. ಹೀಗೆ ಪ್ರಾರಬ್ಧದಿಂದ ಮುಕ್ತರಾದವರು ಪ್ರತೀಕಾಲಂಬನ- ರಾಗಿದ್ದರೇ ಸತ್ಯನಾಮಕವಾದ ಬ್ರಹ್ಮನ ಲೋಕದಲ್ಲಿ ವಾಸಮಾಡುತ್ತಾರೆ. ಅಪ್ರತೀಕಾಲಂಬನರಾಗಿದ್ದರೇ ಪರಮಾತ್ಮನ ಲೋಕದಲ್ಲಿ ವಾಸಮಾಡುತ್ತಾರೆ. ಬ್ರಹ್ಮದೇವರ ಪರನಾಮಕವಾದ ನೂರು ವರ್ಷ ಆಯುಷ್ಯ ಮುಗಿದ ಮೇಲೆ ಪ್ರತೀಕಾಲಂಬನರು ಮತ್ತು ಅಪ್ರತೀಕಾಲಂಬನರು ಇವರೆಲ್ಲರೂ ಮಹಾಪ್ರಲಯದಲ್ಲಿ ಬ್ರಹ್ಮದೇವರ ಜೊತೆಗೆ ವಿರಜಾನದಿಯಲ್ಲಿ ಸ್ನಾನ ಮಾಡಿ ಲಿಂಗದೇಹರೂಪವಾದ ಪ್ರಕೃತಿಯಿಂದ ಮುಕ್ತರಾಗುತ್ತಾರೆ.

### ಭಾಷ್ಯ

ಬ್ರಹ್ಮಲೋಕೇಷು ಸ್ಥಿತ್ವಾ ಪರಾಂತಕಾಲೇ ಪರಿಮುಚ್ಯಂತಿ ॥

**ಭಾಷ್ಯಾರ್ಥ-** ಸಾಧಕರು ಪ್ರತೀಕಾಲಂಬನರಾಗಿದ್ದರೇ ಚತುರ್ಮುಖ-ಲೋಕವಾದ ಸತ್ಯಮೊದಲಾದ ಲೋಕಗಳಲ್ಲಿ ಅಪ್ರತೀಕಾಲಂಬನರಾಗಿದ್ದರೇ ಪರಬ್ರಹ್ಮನ ಲೋಕದ ಅಮುಕ್ತಸ್ಥಾನದಲ್ಲಿ ಮಹಾಪ್ರಲಯವಾಗುವ ತನಕ ಇರುತ್ತಾರೆ. ನಂತರ ಬ್ರಹ್ಮದೇವರಿಂದ ಸಹಿತರಾಗಿ ವಿರಜಾನದಿಯಲ್ಲಿ ಸ್ನಾನಮಾಡಿ ಲಿಂಗಶರೀರವನ್ನೂ ಕಳೆದು ಕೊಂಡು ಮುಕ್ತರಾಗುತ್ತಾರೆ.

## ಖಂಡಾರ್ಥ

ಜ್ಞಾನಾನಂತರಮೇವ ಮುಕ್ತಾ ಭವಂತಿ ಕಿಮಿತ್ಯತೋ ನೇತ್ಯಾಹ-**ವೇದಾಂತೇತಿ** ।। ವೇದಾನಾಮಂತಃ ನಿರ್ಣಯೋ ಯಸ್ಮಾತ್ತಸ್ಮಾತ್ ಮೀಮಾಂಸಾಶಾಸ್ತ್ರಜನಿತೇನ ವಿಜ್ಞಾನೇನ ಸುನಿಶ್ಚಿತಾರ್ಥಾಃ ಸಮ್ಯಕ್ ನಿರ್ಣೀತಾರ್ಥಾಃ ಭಗವತಿ ಸರ್ವಕರ್ಮಣಾಂ ಸಮರ್ಪಣಾಖ್ಯಸನ್ನ್ಯಾಸ-ಯೋಗಾತ್ ಉಪಾಯಾತ್ ಶುದ್ಧಸತ್ತ್ವಾ ಯತಯಃ ಪ್ರಯತ್ನಶೀಲಾಃ ಯೇ ತೇ ಸರ್ವೇ ಬ್ರಹ್ಮಲೋಕೇಷು ಸತ್ಯಲೋಕೇಷು ಸ್ಥಿತ್ವೇತಿ ಶೇಷಃ । ಸ್ಥಾನಬಾಹುಲ್ಯಾತ್ ಬಹುವಚನಮ್ । ಪರಾಂತಕಾಲೇ ಪರೇತಿ ಬ್ರಹ್ಮಣಃ ಶತಾಯುಷೋ ನಾಮ, ತಸ್ಯಾಂತಕಾಲೇ ಪರಾಮೃತಾತ್ ಪ್ರಕೃತಿಬಂಧಾತ್ ಪರಿಮುಚ್ಯಂತಿ ಪರಿಮುಚ್ಯಂತೇ ಮುಕ್ತಾ ಭವಂತೀತಿ । ತದುಕ್ತಂ ಸೂತ್ರೇ 'ಕಾರ್ಯಂ ಬಾದರಿರಸ್ಯ ಗತ್ಯುಪಪತ್ತೇಃ' ಇತಿ । ಏತಚ್ಚ ಪ್ರತೀಕೇಷು ಬ್ರಹ್ಮದ್ವಾತ್ಯಪರಮ್ । ಅಪ್ರತೀಕಾಲಂಬನಾ ಯೇ ವ್ಯಾಪ್ತದರ್ಶಿನಃ ತೇ ತು ವೈಕುಂಠಾದಿಲೋಕೇ ಮುಕ್ತಸ್ಥಾನೇ ಸ್ಥಿತಂ ಭಗವಂತಮೇವ ಪ್ರಾಪ್ಯ ತತ್ರ ಸ್ಥಿತ್ವಾ ಪರಾಂತಕಾಲಸಮಯೇ ಪುನಃ ಸತ್ಯಲೋಕಂ ಪ್ರಾಪ್ಯ ತೇನ ಸಹ ಮುಚ್ಯಂತೇ । ತದಾऽಹ ಸೂತ್ರೇ 'ಪರಂ ಜೈಮಿನಿರ್ಮುಖ್ಯತ್ವಾತ್' ಇತಿ ।।೬.೬।।

**ಅನುವಾದ-** ಜ್ಞಾನವಾದ ಕೂಡಲೇ ಮುಕ್ತರಾಗುವುದಿಲ್ಲವೆಂಬುದನ್ನು '**ವೇದಾಂತ...**' ಎಂಬ ಮಂತ್ರ ತಿಳಿಸುತ್ತದೆ.

ವೇದಗಳ ಅರ್ಥವನ್ನು ನಿರ್ಣಯ ಮಾಡುವ ಬ್ರಹ್ಮಮೀಮಾಂಸಾ-ಶಾಸ್ತ್ರದಿಂದ ಜನ್ಯವಾದ ವಿಜ್ಞಾನದಿಂದ ಭಗವಂತನೇ ಮೊದಲಾದ ಪದಾರ್ಥಗಳನ್ನು ಯಥಾರ್ಥವಾಗಿ ತಿಳಿದಿರುವ, ಭಗವಂತನಲ್ಲಿ

ಸರ್ವಕರ್ಮಗಳನ್ನು ಸಮರ್ಪಿಸುವುದೆಂಬ ಸನ್ಯಾಸರೂಪವಾದ ಉಪಾಯದಿಂದ, ಶುದ್ಧವಾದ ಮನಸ್ಸುಳ್ಳ, ಪ್ರಯತ್ನಶೀಲರಾದ ಸಾಧಕರು ಯಾರಿದ್ದಾರೋ ಅವರೆಲ್ಲರೂ ಬ್ರಹ್ಮದೇವರ ಲೋಕವಾದ ಸತ್ಯಲೋಕದಲ್ಲಿ ವಾಸಮಾಡಿ, ಬ್ರಹ್ಮದೇವರ ಪರನಾಮಕವಾದ ನೂರು ವರ್ಷಗಳು ಕಳೆದ ಮೇಲೆ ಪ್ರಕೃತಿಬಂಧನದಿಂದ ಮುಕ್ತರಾಗುತ್ತಾರೆ. ಚತುರ್ಮುಖನನ್ನು ಪಡೆಯುತ್ತಾರೆ ಎಂಬುದು ಈ ಸೂತ್ರದಲ್ಲಿ ನಿರೂಪಿತವಾಗಿದೆ. 'ಕಾರ್ಯಂ ಬಾದರಿರಸ್ಯ ಗತ್ಯುಪಪತ್ತೇಃ'(ಬ್ರ.ಸೂ.೪.೩.೭)'ಜ್ಞಾನಿಗಳಾದ ಪ್ರತೀಕಾಲಂಬನರನ್ನು ಉತ್ಪತ್ತಿ ಇರುವ ಚತುರ್ಮುಖಬ್ರಹ್ಮದೇವರ ಹತ್ತಿರ ವಾಯುದೇವರು ಕರೆದೊಯ್ಯುತ್ತಾರೆ. ಹೀಗೆಂದು ಶುಕಾಚಾರ್ಯರು ಅಭಿಪ್ರಾಯಪಡುತ್ತಾರೆ.' ಪ್ರತೀಕದಲ್ಲಿ ಬ್ರಹ್ಮಧ್ಯಾನಮಾಡುವವರು ಮುಕ್ತಿಯನ್ನು ಪಡೆಯುವ ಕ್ರಮವಿದಾಗಿದೆ.

ಅಪ್ರತೀಕಾಲಂಬನರು ವ್ಯಾಪ್ತದರ್ಶಿಗಳು ಯಾರಿದ್ದಾರೋ ಅವರು ವೈಕುಂಠಾದಿಲೋಕಗಳಲ್ಲಿರುವ ಅಮುಕ್ತಸ್ಥಾನದಲ್ಲಿ ಇರುವ ಭಗವಂತನನ್ನೇ ಪಡೆದು, ಅಲ್ಲಿಯೇ ಇದ್ದು ಬ್ರಹ್ಮದೇವರ ನೂರು ವರ್ಷಗಳು ಮುಗಿದ ಮೇಲೆ ಮಹಾಪ್ರಲಯದಲ್ಲಿ ಮತ್ತೆ ಸತ್ಯಲೋಕಕ್ಕೆ ಹೋಗಿ ಬ್ರಹ್ಮದೇವರಿಂದ ಕೂಡಿಕೊಂಡು ಮುಕ್ತರಾಗುತ್ತಾರೆ. 'ಪರಂ ಜೈಮಿನಿರ್ಮುಖ್ಯತ್ವಾತ್' (ಬ್ರ.ಸೂ.೪.೩.೧೨) 'ಬ್ರಹ್ಮಶಬ್ದದ ಮುಖ್ಯವಾಚ್ಯನು ಪರಮಾತ್ಮನೇ ಆಗಿದ್ದಾನೆ ಆದ್ದರಿಂದ ಅಪ್ರತೀಕಾಲಂಬನರನ್ನು ಪರಬ್ರಹ್ಮನ ಹತ್ತಿರ ವಾಯುದೇವರು ಕರೆದೊಯ್ಯುತ್ತಾರೆ.' ಎಂಬ ಸೂತ್ರದಲ್ಲಿ ಈ ವಿಷಯವನ್ನೇ ತಿಳಿಸಿದ್ದಾರೆ. ॥೬.೬॥

### ಉಪನಿಷತ್

ಗತಾಃ ಕಲಾಃ ಪಂಚದಶ ಪ್ರತಿಷ್ಠಾ
ದೇವಾಶ್ಚ ಸರ್ವೇ ಪ್ರತಿದೇವತಾಸು ।
ಕರ್ಮಾಣಿ ವಿಜ್ಞಾನಮಯಶ್ಚ ಆತ್ಮಾ
ಪರೇಽವ್ಯಯೇ ಸರ್ವ ಏಕೀಭವಂತಿ ॥೬.೭॥

**ಉಪನಿಷದರ್ಥ-** ಪ್ರಾಣ-ಶ್ರದ್ಧಾ-ಆಕಾಶ-ವಾಯು-ಜ್ಯೋತಿ-ಜಲ-ಪೃಥಿವಿ-ಇಂದ್ರಿಯ-ಮನಸ್ಸು-ಅನ್ನ-ವೀರ್ಯ-ತಪಸ್ಸು-ಮಂತ್ರ-ಲೋಕ ನಾಮ ಎಂಬ ಹದಿನೈದು ಕಲೆಗಳಿಗೆ ಅಭಿಮಾನಿಗಳಾದ, ಮುಖ್ಯಪ್ರಾಣ-ಸರಸ್ವತೀ-ವಿನಾಯಕ-ಪ್ರಾಣಸುತನಾದ ಮರುತ್-ಅಗ್ನಿಯ ಮಗನಾದ ಪಾವಕ-ಬುಧ-ಶನಿ-ಇಂದ್ರ-ರುದ್ರ-ಚಂದ್ರ-ವರುಣ-ಅಗ್ನಿ-ಸ್ವಾಹಾ-ಪರ್ಜನ್ಯ-ಉಷಾ ಎಂಬ ಹದಿನೈದು ದೇವತೆಗಳು, ದೇವತೆಗಳಿಗೆ ಪ್ರತಿಬಿಂಬರಾಗಿರುವ ಪ್ರಜೆಗಳಲ್ಲಿ ಪ್ರತ್ಯೇಕವಾಗಿ ದೇಹಧಾರಣಾದಿಗಳಿಂದ ಜೀವರ ಸ್ಥಿತಿಗೆ ಕಾರಣರಾದ ಕಲಾಭಿಮಾನಿಗಳಾದ ದೇವತೆಗಳಿಂದ ಭಿನ್ನರಾದ ದೇವತೆಗಳು, ಕರ್ಮಾಭಿಮಾನಿಯಾದ ಪುಷ್ಕರ ಸಂಸಾರಿಗಳಾದ ಯಾವ ಜೀವರುಗಳಿಗೆ ನಿಯಾಮಕರಾಗಿರುತ್ತಾರೋ ಆ ಜೀವರು ಮುಕ್ತರಾದಾಗ ಈ ದೇವತೆಗಳೂ ಮುಕ್ತರಾಗಿ ಅವರಿಗೆ ನಿಯಾಮಕರಾಗಿಯೇ ಇರುತ್ತಾರೆ. ಈ ಎಲ್ಲ ದೇವತೆಗಳು ಮತ್ತು ಜ್ಞಾನಸ್ವರೂಪನಾಗಿರುವ ಜೀವ ಇವರೆಲ್ಲರೂ ನಾಶವಿಲ್ಲದೇ ದೇವರ ಸಮೀಪ ಸೇರುತ್ತಾರೆ. ಹೀಗೆ ಒಂದೇ ಸ್ಥಲದಲ್ಲಿ ಸೇರಿ ಸುಖವಾಗಿ ಇರುತ್ತಾರೆ.

**ಭಾಷ್ಯ**

**ಅವಿರೋಧಶ್ಚ ಸಾದೃಶ್ಯಮೇಕದೇಶಸ್ಥಿತಿಸ್ತಥಾ ।**
**ಏಕೀಭಾವಸ್ತ್ರಿಧಾ ಪ್ರೋಕ್ತೋ ನೈಕೀಭಾವಃ ಸ್ವರೂಪಯೋಃ ॥**

**ಭಾಷ್ಯಾರ್ಥ-** ಐಕ್ಯವು ಅವಿರೋಧ, ಸಾದೃಶ್ಯ, ಮತ್ತು ಏಕದೇಶದಲ್ಲಿ ಇರುವುದು ಎಂದು ಮೂರುವಿಧವಾಗಿದೆ. ಆದ್ದರಿಂದ ಐಕ್ಯವೆಂದರೇ ಸ್ವರೂಪೈಕ್ಯವೇ ಎಂದು ಅರ್ಥವಲ್ಲ.

**ಭಾಷ್ಯ**

**ಕುತೋಽಭೂತಸ್ಯ ಭವನಂ ಸ್ವರೂಪಸ್ಯೈಕ್ಯಮೇವ ಹಿ ।**
**ಅತೋ ನದೀನಾಂ ಜೀವಾನಾಂ ವಿರುದ್ಧಾನಾಂ ನೃಣಾಮಪಿ ॥**
**ಅಬ್ಧಿನಾ ಹರಿಣಾ ಚೈವ ತಥೈವ ಚ ನರಾಂತರೈಃ ।**
**ಏಕೀಭಾವಸ್ತು ಸಂಶ್ಲೇಷೋ ವಿರೋಧಸ್ಯ ಚ ವರ್ಜನಮ್ ।**

ಸ್ವರೂಪೈಕ್ಯಂ ಕುತಸ್ತೇಷಾಂ ನಿತ್ಯಭಿನ್ನಸ್ವರೂಪಿಣಾಮ್ ॥
ಹರೇರಪಿ ಸ್ವರೂಪಾಣಾಮೇಕೀಭಾವೋ ಯದೋಚ್ಯತೇ ॥
ಸಂಶ್ಲೇಷ ಏವ ಸಿದ್ಧತ್ವಾತ್ ಸ್ವರೂಪೈಕ್ಯಸ್ಯ ನೋ ಭವಃ ॥ ಇತಿ ಚ ॥

ಭಾಷ್ಯಾರ್ಥ- ಅಭೂತತದ್ಭಾವ ಹಿಂದೆ ಆಗದೇ ಇದ್ದದ್ದು ಇಂದು ಆಗಿದೆ ಎಂಬ ಅರ್ಥದಲ್ಲಿ ಚ್ವಿ ಎಂಬ ಪ್ರತ್ಯಯವು ಬರುತ್ತದೆ. ಪ್ರಕೃತ ಚ್ವಿ ಪ್ರತ್ಯಯವು ಬಂದುದರಿಂದಲೇ ಏಕೀಭಾವ ಎಂಬ ಶಬ್ದವು ನಿಷ್ಪನ್ನವಾಗಿದೆ. ಅದ್ವೈತಿಗಳ ಪ್ರಕಾರ ಜೀವೇಶ್ವರಲ್ಲಿ ಸ್ವಾಭಾವಿಕವಾಗಿಯೇ ಐಕ್ಯವಿದೆ. ಈ ಸ್ವರೂಪೈಕ್ಯವು ಯಾವಾಗಲೂ ಇದ್ದೇ ಇರುತ್ತದೆ. ಆದ್ದರಿಂದ ಅದ್ವೈತಿಗಳಿಗೆ ಏಕೀಭವಂತಿ ಎಂಬ ಈ ಪ್ರಯೋಗವು ಬಾಧಕವಾಗುತ್ತದೆ.

ನದಿಗಳು ಸಮುದ್ರದಲ್ಲಿ ಒಂದಾದವು ಎಂದಾಗ ನದಿಗಳು ಮತ್ತು ಸಮುದ್ರ ಜೊತೆಗೆ ಇವೆ ಎಂದು ಹೇಳಬೇಕು. ಜೀವರು ದೇವರು ಒಂದಾದರು ಎಂದಾಗ ಮುಕ್ತಿಯಲ್ಲಿ ಸೇರಿ ಇದ್ದಾರೆ ಎಂದು ಹೇಳಬೇಕು. ವಿರೋಧಿಗಳು ಒಂದಾಗಿದ್ದಾರೆ ಎಂದಾಗ ಅವಿರುದ್ಧರಾಗಿ ಇದ್ದಾರೆ ಎಂದು ತಿಳಿಯಬೇಕು. ಹೊರತು ಸ್ವರೂಪೈಕ್ಯವನ್ನು ಸರ್ವಥಾ ಹೇಳಬಾರದು. ನಿತ್ಯವೂ ಭಿನ್ನರಾದವರಲ್ಲಿ ಸ್ವರೂಪೈಕ್ಯವನ್ನು ಸರ್ವಥಾ ಹೇಳಲಾಗುವುದಿಲ್ಲ.

ಹೀಗೆಯೇ ದೇವರ ಅವತಾರರೂಪಗಳು ಮೂಲರೂಪದಿಂದ ಏಕೀಭಾವವನ್ನು ಹೊಂದಿದವು ಎಂದು ಹೇಳಿದಾಗ ಸಂಶ್ಲೇಷವಿಶೇಷವನ್ನೇ ಹೇಳಬೇಕು. ಸ್ವರೂಪೈಕ್ಯವನ್ನಲ್ಲ. ಅವತಾರರೂಪಗಳಿಗೂ ಮೂಲರೂಪಕ್ಕೂ ಸ್ವರೂಪೈಕ್ಯವು ಅನಾದಿಸಿದ್ಧವಾಗಿದೆ.

## ಭಾಷ್ಯ

ಗತಾ ಮುಕ್ತಾಃ । ಪ್ರಾಣಾದಿಪಂಚದಶಕಲಾರೂಪಾ ದೇವತಾಃ ಅನ್ಯೇ ಚ ದೇವಾಃ ಸರ್ವೇ ಪ್ರತಿದೇವತಾಸು ದೇವತಾಪ್ರತಿಬಿಂಬಭೂತಾಸು ಪ್ರಜಾಸು ಪ್ರತಿ ಪ್ರತಿ ಸ್ಥಿತಾಃ ಕರ್ಮಾಣಿ ವಿಜ್ಞಾನಮಯೋ ಜೀವಶ್ಚ ಪರಮಾತ್ಮನಿ ಪ್ರವಿಶಂತಿ ।

ಭಾಷ್ಯಾರ್ಥ- ಉಪನಿಷತ್ತಿನಲ್ಲಿಯ ಗತ ಎಂಬ ಶಬ್ದಕ್ಕೆ ಮುಕ್ತ ಎಂದು ಅರ್ಥ. ಪ್ರಾಣ-ಶ್ರದ್ಧಾ ಮೊದಲಾದ ಹದಿನೈದು ಕಲೆಗಳಿಗೆ ಅಭಿಮಾನಿಗಳಾದ ದೇವತೆಗಳು, ಕರ್ಮಾಭಿಮಾನಿಯಾದ ಪುಷ್ಕರ ಮತ್ತು ಇತರ ದೇವತೆಗಳೂ ಕೂಡಾ ಜೀವರು ಮುಕ್ತರಾಗುವಾಗಲೇ ಮುಕ್ತರಾಗುತ್ತಾರೆ. ಮತ್ತು ತಮ್ಮ ಪ್ರತಿಬಿಂಬರಾದ ಮುಕ್ತರಾದ ಜೀವರಿಗೆ ಮುಕ್ತಿಯಲ್ಲಿಯೂ ನಿಯಾಮಕರಾಗಿ ಇರುತ್ತಾರೆ. ಹದಿನೈದು ಕಲೆಗಳಿಗೆ ಅಭಿಮಾನಿಗಳಾದ ದೇವತೆಗಳು, ಕರ್ಮ ಎಂಬ ಕಲೆಗೆ ಅಭಿಮಾನಿಯಾದ ಪುಷ್ಕರ ಜ್ಞಾನಮಯನಾದ ಜೀವ ಇವರೆಲ್ಲರೂ ಮುಕ್ತರಾಗಿ ಪರಮಾತ್ಮನಲ್ಲಿ ಪ್ರವೇಶಿಸುತ್ತಾರೆ.

## ಭಾಷ್ಯ

**ಪ್ರತಿಬಿಂಬೋ ಹರೇಃ ಪ್ರಾಣಸ್ತಸ್ಯ ಚಾSನ್ಯಾಃ ಕಲಾಃ ಕ್ರಮಾತ್ ।**
**ಕಲಾನಾಂ ದೇವತಾ ಅನ್ಯಾ ದೇವತಾನಾಂ ನರಾ ಅಪಿ ॥**
**ತಸ್ಮಾತ್ ಸರ್ವೇಷು ಮುಕ್ತೇಷು ನರೇಷ್ವಪಿ ನಿಯಾಮಕಾಃ ।**
**ತಿಷ್ಠಂತಿ ನಾSತ್ರ ಸಂದೇಹಃ ಪರಮಾತ್ಮನಿ ಚಾSಖಿಲಾಃ ॥**
**ಇತಿ ಮುಕ್ತಿವಿವೇಕೇ ॥**

ಭಾಷ್ಯಾರ್ಥ- ಮುಖ್ಯಪ್ರಾಣದೇವರು ಪರಮಾತ್ಮನ ಪ್ರತಿಬಿಂಬರಾಗಿದ್ದಾರೆ. ಶ್ರದ್ಧಾದಿಕಲಾಭಿಮಾನಿಗಳಾದ ಸರಸ್ವತೀ ಮೊದಲಾದವರು ಮುಖ್ಯಪ್ರಾಣನ ಪ್ರತಿಬಿಂಬರಾಗಿದ್ದಾರೆ. ಕಲಾದೇವತೆಗಳಿಗೆ ಇತರ ದೇವತೆಗಳು ಪ್ರತಿಬಿಂಬರಾಗಿದ್ದಾರೆ. ಆ ದೇವತೆಗಳಿಗೆ ಮನುಷ್ಯರು ಪ್ರತಿಬಿಂಬರಾಗಿದ್ದಾರೆ.

ಆದ್ದರಿಂದ ಮುಕ್ತರಾದ ಮನುಷ್ಯರಿಗೆ ಸಂಸಾರದಲ್ಲಿ ನಿಯಾಮಕರಾದ ದೇವತೆಗಳು ಮುಕ್ತಿಯಲ್ಲಿಯೂ ನಿಯಾಮಕರಾಗಿ ಇರುತ್ತಾರೆ. ಎಲ್ಲರೂ ಪರಮಾತ್ಮನ ನಿಯತಿಗೆ ಬದ್ಧರಾಗಿ ಅವರನ್ನು ಆಶ್ರಯಿಸಿಕೊಂಡೇ ಇರುತ್ತಾರೆ. ಈ ವಿಷಯದಲ್ಲಿ ಸರ್ವಥಾ ಸಂದೇಹವಿಲ್ಲ. ಮುಕ್ತವಿವೇಕ ಹೇಳುವ ಪ್ರಮೇಯವಿದಾಗಿದೆ.

### ಭಾಷ್ಯ

**ಕಲಾಭ್ಯಶ್ಚಾನ್ಯದೇವೇಭ್ಯಃ ಕರ್ಮ ಪ್ರತ್ಯವರಂ ಯತಃ ।**
**ಕಲಾಭ್ಯಃ ಪೃಥಗುಕ್ತಂ ತತ್ ಪುಷ್ಕರಃ ಕರ್ಮ ಚೋಚ್ಯತೇ ॥ ಇತಿ ಚ ॥**

ಭಾಷ್ಯಾರ್ಥ- ಕಲಾಭಿಮಾನಿದೇವತೆಗಳಿಗಿಂತಲೂ, ಉಳಿದ ದೇವತೆಗಳಿಗಿಂತಲೂ ಕರ್ಮಾಭಿಮಾನಿಯಾದ ಪುಷ್ಕರನು ಕಡಿಮೆಯವನು. ಆದ್ದರಿಂದ ಕರ್ಮಾಭಿಮಾನಿಯಾದ ಪುಷ್ಕರನನ್ನು ಪ್ರತ್ಯೇಕವಾಗಿ ಹೇಳಿದೆ. ಇಲ್ಲಿ ಕರ್ಮ ಎಂದರೇ ಪುಷ್ಕರ ಎಂದು ಅರ್ಥ.

### ಭಾಷ್ಯ

**ಅನ್ಯಥಾ ಗತಾ ಭವಿಷ್ಯಂತಿ ಇತ್ಯಧ್ಯಾಹಾರೋ ದೋಷಃ । ನ ಚ ಮೂಲರೂಪಾಣಿ ಪ್ರತಿದೇವತಾ ಇತ್ಯುಚ್ಯಂತೇ ದೇವಾನಾಮ್ । ಪ್ರತಿರೂಪ-ಶಬ್ದವದ್ಧಿ ಪ್ರತಿದೇವತಾಶಬ್ದಃ । 'ವಿಜ್ಞಾನಾತ್ಮಾ ಸಹ ದೇವೈಶ್ಚ ಸರ್ವೈಃ ಪ್ರಾಣಾ ಭೂತಾನಿ ಸಂಪ್ರತಿಷ್ಠಂತಿ ಯತ್ರ' 'ಇಮಾಃ ಷೋಡಶಕಲಾಃ ಪುರುಷಾಯಣಾಃ ಪುರುಷಂ ಪ್ರಾಪ್ಯಾಽಸ್ತಂ ಗಚ್ಛಂತಿ' ಇತಿ 'ಯಥಾ ಸೋಮ್ಯೇಮಾಃ ಸಮುದ್ರಾಯಣಾಃ' ಇತಿ ನದೀದೃಷ್ಟಾಂತಪೂರ್ವಕಂ ಪುರುಷಪ್ರಾಪ್ತಿಕಥನಾಚ್ಚ ಮುಕ್ತಾ ದೇವತಾ ಏವೋಚ್ಯಂತೇ । 'ಸ ಪ್ರಾಣಮಸೃಜತ' ಇತ್ಯಾದೇಶ್ಚ ಪುರುಷೋ ಭಗವಾನ್ ॥೭॥**

ಭಾಷ್ಯಾರ್ಥ- ಗತಾಃ ಎಂಬ ಶಬ್ದಕ್ಕೆ ಮುಕ್ತರು ಎಂದು ಅರ್ಥವನ್ನು ಹೇಳದೇ ಗತಾಃ ಭವಿಷ್ಯಂತಿ ಪ್ರಾಣಾದಿಜಡವಾದ ಕಲೆಗಳು ತಮಗೆ ಕಾರಣವಾದ ಪ್ರಕೃತಿಯಲ್ಲಿ ಸೇರಿಹೋಗುತ್ತವೆ. ಎಂದು ಅರ್ಥವನ್ನು ಹೇಳಿದರೇ ಭವಿಷ್ಯಂತಿ ಎಂಬ, ಇಲ್ಲದೇ ಇರುವ ಪದವನ್ನು ಅಧ್ಯಾಹಾರ ಮಾಡಿಕೊಳ್ಳುವುದರಿಂದ ದೋಷವು ಬರುತ್ತದೆ. ದೇವಾಃ ಸರ್ವೇ ಪ್ರತಿದೇವತಾಸು ಎಂಬಲ್ಲಿ ದೇವತೆಗಳೆಲ್ಲರೂ ತಮ್ಮ ಮೂಲರೂಪದಲ್ಲಿ ಸೇರಿಹೋಗುತ್ತಾರೆ. ಎಂದು ಹೇಳಿದರೇ ದೇವತೆಗಳ ಮೂಲರೂಪಗಳನ್ನು ಪ್ರತಿದೇವತಾ ಎಂಬ ಶಬ್ದದಿಂದ ಎಲ್ಲಿಯೂ ವ್ಯವಹಾರ ಮಾಡಿಲ್ಲ. ಇದಕ್ಕೆ ಕೋಶಾದಿಗಳ ಆಧಾರವೂ ಇಲ್ಲ. ಆದ್ದರಿಂದ ಹೀಗೆ ಅರ್ಥವನ್ನು ಹೇಳುವುದು ಅಸಂಗತವಾಗಿದೆ. ಪ್ರತಿದೇವತಾ

ಎಂಬ ಶಬ್ದಕ್ಕೆ ದೇವತೆಗಳ ಪ್ರತಿಬಿಂಬರು ಎಂದು ನಾವು ಹೇಳಿದ ಅರ್ಥವು ಸಂಗತವಾಗುತ್ತದೆ. ಪ್ರತಿರೂಪ ಶಬ್ದದಂತೆ ಪ್ರತಿದೇವತಾ ಎಂಬ ಶಬ್ದವು ದೇವತೆಗಳಿಗೆ ಸದೃಶ, ದೇವತೆಗಳ ಅಧೀನ ಎಂಬ ಅರ್ಥವನ್ನು ಹೇಳುತ್ತದೆ. ದೇವತೆಗಳಿಗೆ ಸದೃಶರಾಗುವುದು ದೇವತೆಗಳಿಗೆ ಅಧೀನರಾಗುವುದು ಎಂದರೇ ದೇವತೆಗಳ ಪ್ರತಿಬಿಂಬರಾಗುವುದು ಎಂದೇ ಅರ್ಥವಾಗುತ್ತದೆ. ಹೀಗಾಗಿ ನಾವು ಹೇಳಿದ ಅರ್ಥವು ಸಮಂಜಸವಾಗುತ್ತದೆ.

## ಭಾಷ್ಯ

**'ವಿಜ್ಞಾನಾತ್ಮಾ ಸಹ ದೇವೈಶ್ಚ ಸರ್ವೈಃ ಪ್ರಾಣಾ ಭೂತಾನಿ ಸಂಪ್ರತಿಷ್ಠಂತಿ ಯತ್ರ' 'ಇಮಾಃ ಷೋಡಶಕಲಾಃ ಪುರುಷಾಯಣಾಃ ಪುರುಷಂ ಪ್ರಾಪ್ಯಾऽಸ್ತಂ ಗಚ್ಛಂತಿ' ಇತಿ 'ಯಥಾ ಸೋಮ್ಯೇಮಾಃ ಸಮುದ್ರಾಯಣಾಃ' ಇತಿ ನದೀದೃಷ್ಟಾಂತಪೂರ್ವಕಂ ಪುರುಷಪ್ರಾಪ್ತಿಕಥನಾಚ್ಚ ಮುಕ್ತಾ ದೇವತಾ ಏವೋಚ್ಯಂತೇ । 'ಸ ಪ್ರಾಣಮಸೃಜತ' ಇತ್ಯಾದೇಶ್ಚ ಪುರುಷೋ ಭಗವಾನ್ ।**

ಭಾಷ್ಯಾರ್ಥ- ವಿಜ್ಞಾನಸ್ವರೂಪನಾದ ಜೀವನು, ಪ್ರಾಣಾದಿಕಲೆಗಳು, ಚಕ್ಷುರಾದಿ ಇಂದ್ರಿಯಗಳು, ರೂಪಾದಿಇಂದ್ರಿಯವಿಷಯಗಳು, ಪೃಥಿವ್ಯಾದಿ-ಭೂತಗಳು, ಮತ್ತು ತನ್ಮಾತ್ರಾಗಳು, ಎಲ್ಲ ದೇವತೆಗಳಿಂದ, ಕಲಾಭಿಮಾನಿಗಳಿಂದ ಕೂಡಿಕೊಂಡು ಯಾವ ಅಕ್ಷರನಾಮಕನಾದ ಪರಮಾತ್ಮನನ್ನು ಆಶ್ರಯಿಸಿಕೊಂಡಿರುವರೋ, ಇಲ್ಲಿ ಕಲಾಭಿಮಾನಿಗಳಾದ ದೇವತೆಗಳು ಪ್ರಸಕ್ತರಾಗಿದ್ದಾರೆ. ಸಮುದ್ರವನ್ನು ಸೇರುವ ನದಿಗಳೆಲ್ಲ ಹರಿಯುತ್ತಾ ಕೊನೆಗೆ ಸಮುದ್ರವನ್ನು ಹೇಗೆ ಸೇರುತ್ತವೋ ಹಾಗೆ ಷೋಡಶಕಲಾಭಿಮಾನಿಗಳಾದ ದೇವತೆಗಳು ಪರಮಾತ್ಮನನ್ನು ಸೇರುವ ಸ್ವಭಾವ ಉಳ್ಳವರು. ಹೀಗಾಗಿ ಆ ಪರಮಾತ್ಮನನ್ನೇ ಕೊನೆಗೆ ಸೇರುತ್ತಾರೆ. ಹೀಗೆ ನದಿಗಳ ದೃಷ್ಟಾಂತವನ್ನು ಹೇಳುತ್ತಾ ಕಲಾಭಿಮಾನಿದೇವತೆಗಳಿಗೆ ಪುರುಷಪ್ರಾಪ್ತಿಯನ್ನು ಹೇಳಿದ್ದಾರೆ. ಆದ್ದರಿಂದ ಕಲಾಃ ಎಂದರೇ ಜಡವಾದ ಕಲೆಗಳಲ್ಲ ಕಲಾಭಿಮಾನಿದೇವತೆಗಳೆಂದು. ಗತಾಃ ಎಂದರೇ ಮುಕ್ತರು ಎಂದೇ ಅರ್ಥವನ್ನು ಹೇಳಬೇಕು. ಮತ್ತು ಪುರುಷ ಎಂದರೇ ಜೀವ ಎಂದು ಅರ್ಥವಲ್ಲ. 'ಸ ಪ್ರಾಣಮಸೃಜತ' ಎಂದು ಷಟ್ಪ್ರಶ್ನದ

ಉಪಕ್ರಮದಲ್ಲಿ ಈ ಪುರುಷನಿಗೆ ಪ್ರಾಣಜನಕತ್ವವನ್ನು ಹೇಳಿದ್ದಾರೆ. ಪ್ರಾಣಜನಕತ್ವ ವಿಷ್ಣುವಿಗೆ ಮಾತ್ರ ಉಪಪನ್ನವಾಗುತ್ತದೆ. ಹೀಗಾಗಿ ಪರಮಾತ್ಮ ಎಂದೇ ಅರ್ಥವನ್ನು ಹೇಳಬೇಕು.

### ಖಂಡಾರ್ಥ

ಮುಕ್ತಿಪ್ರಕಾರಮಾಹ- **ಗತಾ ಇತಿ ॥** ಪ್ರತಿಷ್ಠಾ: ಸಂಸಾರಿಣಾಂ ಪ್ರತಿಷ್ಠಾ ನಿಯಾಮಕಾ: ಕಲಾ: ಕಲಾಭಿಮಾನಿನ: ಪಂಚದಶ ದೇವಾ: ಗತಾ ಮುಕ್ತಾ: । ಯಸ್ಯ ಜೀವಸ್ಯ ಸಂಸಾರೇ ನಿಯಾಮಕತಯಾ ಸ್ಥಿತಾ: ತಾ: ಕಲಾದೇವತಾ: ತಜ್ಜೀವಮುಕ್ತ್ಯನಂತರೇ ಮುಕ್ತಾ: ಸತ್ಯೋ ಮುಕ್ತಸ್ಯಾSಪಿ ತಸ್ಯ ನಿಯಾಮಿಕಾ ಇತಿ ತಾತ್ಪರ್ಯಾರ್ಥ: । ಪಂಚದಶಕಲಾಸ್ತು, 'ಸ ಪ್ರಾಣಮಸೃಜತ ಪ್ರಾಣಾಚ್ಛ್ರದ್ಧಾಂ ಖಂ ವಾಯುರ್ಜ್ಯೋತಿರಾಪ: ಪೃಥಿವೀಂದ್ರಿಯಂ ಮನೋSನ್ನಮನ್ನಾದ್ವೀರ್ಯಂ ತಪೋ ಮಂತ್ರಾ: ಕರ್ಮ ಲೋಕಾ ಲೋಕೇಷು ನಾಮ ಚ' ಇತಿ ಷಟ್ಪ್ರಶ್ನೋಕ್ತದಿಶಾ ಧ್ಯೇಯಾ: । ತದಭಿಮಾನಿದೇವತಾಶ್ಚ 'ಕರ್ಮೇತಿ ಪುಷ್ಕರ: ಪ್ರೋಕ್ತ:' ಇತ್ಯಾದಿಷಟ್ಪ್ರಶ್ನಭಾಷ್ಯೋಕ್ತದಿಶಾ ಪ್ರಾಣವಾಣೀವಿನಾಯಕಪ್ರಾಣಸುತ-ಮರುತ್ಪಾವಕ ಬುಧಶನಿಇಂದ್ರರುದ್ರಚಂದ್ರವರುಣವಹ್ನಿಸ್ವಾಹಾವರ್ಜನ್ಯೋಷಾ: ಕ್ರಮಾತ್ ಜ್ಞೇಯಾ: । ಉಕ್ತಂ ಹಿ 'ಯತ್ರ ಮೂರ್ತಿಧರಾ: ಕಲಾ:' ಇತ್ಯೇಕಾದಶಸ್ಕಂಧತಾತ್ಪರ್ಯೇ ಸಪ್ತದಶಾಧ್ಯಾಯೇ, ಕಲಾ: ಪ್ರಾಣಾದ್ಯಾ:, 'ಸ ಪ್ರಾಣಮಸೃಜತ ಪ್ರಾಣಾಚ್ಛ್ರದ್ಧಾಮ್' ಇತ್ಯಾದಿ । ಯದ್ಯಪಿ ಕರ್ಮಾಭಿಮಾನಿನಾ ಪುಷ್ಕರೇಣ ಸಹ ಷೋಡಶಕಲಾ:, ತಥಾSಪಿ ತಸ್ಯ ಕರ್ಮಣೀತಿ ಪೃಥಗುಕ್ತೇ: ಪಂಚದಶತ್ವಮ್ । ಪೃಥಗುಕ್ತಿಕೃತ್ಯಂ ಭಾಷ್ಯೇ ವ್ಯಕ್ತಮ್। ಸರ್ವೇ ದೇವಾಶ್ಚ ಕಲಾದೇವೇಭ್ಯೋSನ್ಯೇ ಸರ್ವೇ ದೇವಾಶ್ಚ ಪ್ರತಿದೇವತಾಸು ದೇವತಾಪ್ರತಿಬಿಂಬಭೂತಾಸು ಪ್ರಜಾಸು ಸ್ಥಿತಾ: ತಿಷ್ಠಂತಿ । ಕರ್ಮಾಣಿ ಕರ್ಮಾಭಿಮಾನೀ ಪುಷ್ಕರ:, ವಿಜ್ಞಾನಮಯೋ ವಿಜ್ಞಾನರೂಪ ಆತ್ಮಾ ಜೀವಶ್ಚ ಅವ್ಯಯೇ ನಾಶರಹಿತೇ ಪರೇ ಪರಮಾತ್ಮನಿ, ಸರ್ವೇ ಷೋಡಶಕಲಾದೇವತಾ: ಜೀವಾಶ್ಚ ಇತ್ಯೇತೇ ಸರ್ವೇ ಮುಕ್ತಾ: ಸಂತ: ಏಕೀಭವಂತಿ ಪರಮಾತ್ಮಾನಂ ಪ್ರವಿಶ್ಯ ತೇನ ಸಹ ಏಕಸ್ಥಾನಸ್ಥಿತಾ ಭವಂತೀತಿ ವಾ, ತದ್ಬುದ್ಧಿ-ವಿಷಯೀಕೃತಾರ್ಥವಿಷಯಕಬುದ್ಧಿಮಂತೋ ನತು ತದ್ವಿರುದ್ಧಾರ್ಥ-ವಿಷಯಕಮತಿಯುಕ್ತಾ ಇತಿ ವಾSರ್ಥ: ॥೬.೭॥

**ಅನುವಾದ- ಮುಕ್ತಿಯ ಪ್ರಕಾರವನ್ನೇ 'ಗತಾಃ ಕಲಾಃ...' ಎಂಬ ಮಂತ್ರವು ತಿಳಿಸುತ್ತದೆ.**

ಸಂಸಾರಿಗಳಿಗೆ ನಿಯಾಮಕರಾದ ಹದಿನೈದು ಕಲೆಗಳಿಗೆ ಅಭಿಮಾನಿಗಳಾದ ದೇವತೆಗಳು ಮುಕ್ತರಾಗುತ್ತಾರೆ. ಯಾವ ಜೀವರಿಗೆ ನಿಯಾಮಕರಾಗಿ ಆ ದೇವತೆಗಳು ಇದ್ದಾರೋ ಆ ಕಲಾಭಿಮಾನಿದೇವತೆಗಳು ಆ ಜೀವನಿಗೆ ಮುಕ್ತಿಯಾಗುವ ಪ್ರಸಂಗದಲ್ಲಿ ಮುಕ್ತರಾಗಿ, ಮುಕ್ತರಾದ ಆ ಜೀವರಿಗೆ ಮುಕ್ತಿಯಲ್ಲಿಯೂ ನಿಯಾಮಕರಾಗಿ ಇರುತ್ತಾರೆ ಎಂದು ತಾತ್ಪರ್ಯ. 'ಸ ಪ್ರಾಣಮಸೃಜತ' ಇತ್ಯಾದಿಯಾಗಿ ಷಟ್ಪ್ರಶ್ನದಲ್ಲಿ ಹೇಳಿದಂತೆ ಹದಿನೈದು ಕಲೆಗಳನ್ನು ತಿಳಿಯಬೇಕು. 'ಕರ್ಮೇತಿ ಪುಷ್ಕರಃ ಪ್ರೋಕ್ತಃ' ಎಂಬುದಾಗಿ ಷಟ್ಪ್ರಶ್ನಭಾಷ್ಯದಲ್ಲಿ ಹೇಳಿದಂತೆ ಕಲಾಭಿಮಾನಿಗಳಾದ ದೇವತೆಗಳನ್ನೂ ತಿಳಿಯಬೇಕು. ಈ ವಿಷಯವು ಭಾಗವತ ಏಕಾದಶಸ್ಕಂಧದ ಹದಿನೇಳನೇ ಅಧ್ಯಾಯದಲ್ಲಿಯೂ ಉಕ್ತವಾಗಿದೆ. ಯದ್ಯಪಿ ಕರ್ಮ ಅದಕ್ಕೆ ಅಭಿಮಾನಿಯಾದ ಪುಷ್ಕರನನ್ನು ಸ್ವೀಕರಿಸಿದರೇ ಹದಿನಾರು ಕಲೆಗಳು, ಕಲಾಭಿಮಾನಿಗಳೂ ಹದಿನಾರು ಆಗುತ್ತಾರೆ. ಹಾಗಿದ್ದರೂ ಪ್ರಕೃತ ಕರ್ಮಾಣಿ ಎಂದು ಪ್ರತ್ಯೇಕವಾಗಿ ಹೇಳಿದ್ದರಿಂದ ಹದಿನೈದು ಎಂದು ಇಲ್ಲಿ ಹೇಳಿದ್ದಾರೆ. ಪ್ರತ್ಯೇಕವಾಗಿ ಕರ್ಮಗಳನ್ನು ಹೇಳಿದ್ದಕ್ಕೆ ಕೃತ್ಯವು ಭಾಷ್ಯದಲ್ಲಿ ಸ್ಪಷ್ಟವಾಗಿದೆ. ಈ ಕಲಾಭಿಮಾನಿಗಳಾದ ದೇವತೆಗಳು ಮತ್ತು ಕಲಾದೇವತೆಗಳಿಂದ ಭಿನ್ನರಾಗಿರುವ ದೇವತೆಗಳು ತಮಗೆ ಪ್ರತಿಬಿಂಬರಾಗಿರುವ ಜೀವರಲ್ಲಿ ಇರುತ್ತಾರೆ. ಕರ್ಮಕ್ಕೆ ಅಭಿಮಾನಿಯಾದ ಪುಷ್ಕರ, ಜ್ಞಾನರೂಪನಾದ ಜೀವ ಇವರೆಲ್ಲರೂ ನಾಶರಹಿತನಾದ ಪರಮಾತ್ಮನಲ್ಲಿ ಪ್ರವೇಶಿಸಿ ಮುಕ್ತರಾಗಿ ಒಂದೇ ಸ್ಥಾನದಲ್ಲಿ ಇರುತ್ತಾರೆ. ಏಕವಿಷಯಕವಾದ ಬುದ್ಧಿಯುಳ್ಳವರಾಗುತ್ತಾರೆ. ಭಗವಂತನಿಗೆ ವಿರುದ್ಧವಾದ ವಿಷಯಗಳನ್ನು ಅವರು ಚಿಂತಿಸುವುದೇ ಇಲ್ಲವೆಂದು ಅರ್ಥ. ೬.೭॥

**ಉಪನಿಷತ್**

**ಯಥಾ ನದ್ಯಃ ಸ್ಯಂದಮಾನಾಃ ಸಮುದ್ರಾಯಣಾಃ**
**ಸಮುದ್ರಂ ಪ್ರಾಪ್ಯಾSಸ್ತಂ ಗಚ್ಛಂತಿ ನಾಮರೂಪೇ ವಿಹಾಯ ।**
**ತಥಾ ವಿದ್ವಾನ್ನಾಮರೂಪಾದ್ವಿಮುಕ್ತಃ**
**ಪರಾತ್ಪರಂ ಪುರುಷಮುಪೈತಿ ದಿವ್ಯಮ್ ॥೬.೮॥**

ಉಪನಿಷದರ್ಥ- ಸಮುದ್ರವನ್ನು ಸೇರುವ ಸ್ವಭಾವವಿರುವ ಗಂಗಾದಿನದಿಗಳೆಲ್ಲ ಹರಿಯುತ್ತಾ ಹರಿಯುತ್ತಾ ಸಮುದ್ರವನ್ನು ಸೇರಿ ಗಂಗಾ-ಯಮುನಾ-ಸರಸ್ವತಿ ಎಂಬ ತಮ್ಮ ಹೆಸರುಗಳನ್ನು ಮತ್ತು ರೂಪಗಳನ್ನು ಕಳೆದುಕೊಳ್ಳುತ್ತವೆ. (ಅಜ್ಞಾನಿಗಳಿಗೆ ಸಮುದ್ರದಲ್ಲಿ ಸೇರಿದ ಗಂಗಾದಿ ನದಿಗಳನ್ನು ಗುರುತಿಸಲು ಆಗುವುದಿಲ್ಲ ಎಂದು ಅರ್ಥ. ಆದ್ದರಿಂದ ತಮ್ಮ ತಮ್ಮ ನಾಮಸಹಿತವಾದ ರೂಪಗಳನ್ನು ಕಳೆದುಕೊಳ್ಳುತ್ತವೆ ಎಂದು ಹೇಳಿದ್ದು.) ಹಾಗೆಯೇ ಅಪರೋಕ್ಷಿಯಾದವನು ನಾಮ-ರೂಪಗಳಿಂದ ವಿಮುಕ್ತನಾಗಿ (ಅಮುಕ್ತರಾದವರಿಗೆ ಮುಕ್ತರಾದ ನಾಮರೂಪಗಳ ಜ್ಞಾನವಾಗುವುದಿಲ್ಲ ಆದ್ದರಿಂದ ನಾಮರೂಪಾದ್ವಿಮುಕ್ತಃ ಎಂದು ಹೇಳಿದ್ದು) ಸರ್ವೋತ್ತಮನಾದ ಪೂರ್ಣಷಡ್ಗುಣನಾದ, ಅಲೌಕಿಕನಾದ ಪರಮಾತ್ಮನನ್ನು ಸೇರುತ್ತಾನೆ.

ಅವಿಹಾಯ ಎಂಬ ಪಾಠವನ್ನಿಟ್ಟುಕೊಂಡಾಗ ಈರೀತಿಯಾಗಿ ಅರ್ಥವನ್ನು ತಿಳಿಯಬೇಕು. ಸಮುದ್ರವನ್ನು ಸೇರುವ ಸ್ವಭಾವವಿರುವ ಗಂಗಾದಿನದಿಗಳು ತಮ್ಮ ನಾಮಸಹಿತವಾದ ರೂಪವನ್ನು ಪರಿತ್ಯಜಿಸದೇ ಸಮುದ್ರದಲ್ಲಿ ಸೇರುತ್ತವೆ. ಸಮುದ್ರವನ್ನು ಸೇರಿದ ಮೇಲೂ ಮುಖ್ಯಪ್ರಾಣನೇ ಮೊದಲಾದವರು ಇದು ಗಂಗಾ ಇದು ಸರಸ್ವತೀ ಇದು ಯಮುನಾ ಎಂದು ಗುರುತಿಸುತ್ತಾರೆ. ಆ ನದಿಗಳ ನಾಮರೂಪಗಳು ನಶಿಸಿ ಹೋಗಿದ್ದರೇ ದೇವತಾದಿಗಳಿಗೆ ಆ ನಾಮ-ರೂಪಗಳನ್ನು ಗುರುತಿಸಲು ಸಾಧ್ಯವಾಗದೇ ಹೋಗಬೇಕಾದೀತು. ಹಾಗೆಯೇ ಮುಕ್ತರಾದವರು ತಮ್ಮ ನಾಮಸಹಿತವಾದ ರೂಪಗಳನ್ನು ಪರಿತ್ಯಜಿಸದೆಯೇ ಇರುತ್ತಾರೆ. ಮುಕ್ತರಾದವರಿಗೆ ಮಾತ್ರ ಅವರ ನಾಮಸಹಿತವಾದ ರೂಪಗಳ ಜ್ಞಾನವಾಗುತ್ತದೆ.

## ಭಾಷ್ಯ

**ಅಗಮ್ಯನಾಮರೂಪತ್ವಾದಮುಕ್ತೈಃ ಮುಕ್ತಿಗಾ ನರಾಃ ।**
**ವಿಹೀನನಾಮರೂಪಾಸ್ತು ನ ಹಿ ತದ್ರಹಿತತ್ವತಃ ॥**
**ಅಶರೀರೋ ಯಥಾ ವಾಯುಃ ಸಾಮಾನ್ಯಾಗಮ್ಯದೇಹತಃ ।**
**ಏವಂ ನದ್ಯಃ ಸಮುದ್ರಸ್ಥಾಃ ಸಾಮಾನ್ಯಾಗಮ್ಯರೂಪತಃ ॥ ಇತಿ ಚ ॥**
**ಸ್ವಕೀಯಮುದಕಂ ನದ್ಯಃ ಸಮುದ್ರೇ ನೈವ ಜಾನತೇ ।**
**ವಾಯುಸ್ತು ತತ್ ಪೃಥಕ್ ಜ್ಞಾತ್ವಾ ಮೇಘೇ ಕೃತ್ವಾ ಪ್ರವರ್ಷತಿ ॥**
**ಇತಿ ಚ ॥**

ಭಾಷ್ಯಾರ್ಥ- ಮುಕ್ತರಾದವರ ನಾಮ-ರೂಪಗಳು ಅಮುಕ್ತರಿಗೆ ಗೋಚರವಾಗುವುದಿಲ್ಲ. ಹೀಗಾಗಿ ನಾಮರೂಪಗಳು ಇಲ್ಲದವರು ಎಂದು ಮುಕ್ತರನ್ನು ವ್ಯವಹಾರ ಮಾಡಬಹುದು. ಇವರಿಗೆ ಸರ್ವಥಾ ನಾಮರೂಪಗಳೇ ಇಲ್ಲ ಎಂಬ ಅಭಿಪ್ರಾಯದಲ್ಲಿ ಅಲ್ಲ.

ಸಾಮಾನ್ಯರಿಗೆ ಗೋಚರವಾಗುವಂಥಹ ದೇಹ ವಾಯುದೇವರಿಗೆ ಇಲ್ಲ ಆದ್ದರಿಂದ 'ಅಶರೀರೋ ವಾಯುಃ' ಎಂದು ವ್ಯವಹರಿಸುತ್ತಾರೆ. ಹೊರತು ಸರ್ವಥಾ ದೇಹವಿಲ್ಲ ಎಂಬ ಅಭಿಪ್ರಾಯದಿಂದಲ್ಲ. ಹೀಗೆಯೇ ಸಮುದ್ರದಲ್ಲಿ ಸೇರಿದ ನದಿಗಳನ್ನು ಕೂಡಾ ಇದು ಗಂಗಾ, ಇದು ಸರಸ್ವತೀ, ಇದು ಯಮುನಾ ಎಂದು ಪ್ರತ್ಯೇಕಿಸಿಕೊಂಡು ತಿಳಿಯಲಾಗುವುದಿಲ್ಲ. ಆದ್ದರಿಂದ ನಾಮರೂಪೇ ವಿಹಾಯ ಎಂದು ಉಪನಿಷತ್ತು ಹೇಳುತ್ತದೆ. ಸಮುದ್ರವನ್ನ ಸೇರಿದ ನದಿಗಳಿಗೆ ತಮ್ಮ ತಮ್ಮ ಜಲದ ಜ್ಞಾನವಿರುವುದಿಲ್ಲ. ಆದರೂ ವಾಯುದೇವರು ಅವುಗಳನ್ನು ಪ್ರತ್ಯೇಕವಾಗಿ ತಿಳಿದುಕೊಳ್ಳುತ್ತಾರೆ. ಆ ಜಲವನ್ನು ಮೇಘದಲ್ಲಿರಿಸುತ್ತಾರೆ. ಆಯಾ ನದಿಗಳಿರುವ ಪ್ರಾಂತದಲ್ಲಿಯೇ ಆಯಾ ನದಿಗಳ ಜಲವು ಮಳೆಯರೂಪದಲ್ಲಿ ಬೀಳುವಂತೆ ಮಾಡುತ್ತಾರೆ.

## ಭಾಷ್ಯ

**ವಿಮುಕ್ತ ಇತ್ಯಮುಕ್ತ ಇತ್ಯರ್ಥಃ । ವಿಪ್ರಿಯ ಇತಿವತ್ । ಅವಿಹಾಯೇತಿ ಚ । 'ಅನಂತಂ ವೈ ನಾಮ' ಇತಿ ಶ್ರುತೇಃ ॥೮॥**

ಭಾಷ್ಯಾರ್ಥ- ವಿಪ್ರಿಯ ಎನ್ನುವುದಕ್ಕೆ ಅಪ್ರಿಯ ಎಂದು ಅರ್ಥವಿದ್ದಂತೆ ವಿಯುಕ್ತಃ ಎಂದರೇ ಅಮುಕ್ತ ಎಂದು ಅರ್ಥ. ನಾಮರೂಪೇಽವಿಹಾಯ ಎಂಬಲ್ಲಿ ನಾಮರೂಪೇ ಅವಿಹಾಯ ಎಂದು ಪದಚ್ಛೇದ ಮಾಡಬೇಕು. ನಾಮರೂಪಗಳು ಅನಂತ ಎಂದು ಶ್ರುತಿಯು ಹೇಳುತ್ತದೆ. ಆದ್ದರಿಂದ ಈ ರೀತಿಯಾಗಿ ಪದಚ್ಛೇದ ಮಾಡಬೇಕು.

### ಖಂಡಾರ್ಥ

ಏಕೀಭಾವಪ್ರಕಾರಮೇವ ದೃಷ್ಟಾಂತೇನಾऽಹ- **ಯಥಾ ನದ್ಯ ಇತಿ** ॥ ಸ್ಯಂದಮಾನಾ: ಪ್ರಸ್ರವಮಾಣಾ:, ಸಮುದ್ರ ಅಯನಂ ಯಾಸಾಂ ತಾ: ಸಮುದ್ರಾಯಣಾ: ನದ್ಯ:, ಸಮುದ್ರಂ ಪ್ರಾಪ್ಯ ನಾಮರೂಪೇ ಸ್ವಕೀಯಂ ಗಂಗಾಗೋದಾವರ್ಯಾದಿ ನಾಮ ಗಂಗಾದಿರೂಪಂ ಚ ಅವಿಹಾಯ ಅತ್ಯಕ್ತ್ವಾ ಮಣೇವೇತ್ಯಾದಾವಿವ ಅಪ್ರಗೃಹ್ಯತ್ವಮ್ । ಯದ್ವಾ ಸಾಧಾರಣಚೇತನೈ: ಅಜ್ಞೇಯನಾಮರೂಪತ್ವಾನ್ನಾಮರೂಪೇ ವಿಹಾಯೇತಿ ವಾ । ಅಸ್ತಮದರ್ಶನಂ ಗಚ್ಛಂತಿ ಯಥಾ ತಥಾ ವಿದ್ವಾನ್ ಬ್ರಹ್ಮಜ್ಞಾನೀ ನಾಮರೂಪಾತ್ ವಿಮುಕ್ತ: ಅಮುಕ್ತ: ನಾಮರೂಪಯುಕ್ತ ಏವ, ವಿಪ್ರಿಯಮಿತ್ಯತ್ರೇವ ವಿಶಬ್ದೋಽತ್ರ ನಿವೇಧಾರ್ಥ: । ಯದ್ವಾ ಸಂಸಾರಿಭಿರಜ್ಞೇಯನಾಮರೂಪತ್ವಾದ್ವಿಮುಕ್ತೋ ವಿಯುಕ್ತ ಇವ ಸ್ಥಿತ: ಪರಾತ್ಪರಂ ಸರ್ವೋತ್ತಮಂ ದಿವ್ಯಮದ್ಭುತಂ ಪುರುಷಂ ಭಗವಂತಂ ಉಪೈತಿ ಪ್ರಾಪ್ನೋತಿ ॥ ೮ ॥

**ಅನುವಾದ-** ಹೇಗೆ ಒಂದಾಗುತ್ತಾರೆಂಬುದನ್ನು ದೃಷ್ಟಾಂತಪೂರ್ವಕವಾದ **'ಯಥಾ ನದ್ಯ:...'** ಎಂಬ ಮಂತ್ರವು ತಿಳಿಸುತ್ತದೆ.

ಹರಿಯುತ್ತಾ ಸಮುದ್ರವನ್ನು ಸೇರುವ ಗಂಗಾದಿ ನದಿಗಳೆಲ್ಲ ಸಮುದ್ರದಲ್ಲಿ ಸೇರಿ ತಮ್ಮ ಗಂಗಾ-ಗೋದಾವರೀ ಮೊದಲಾದ ನಾಮಗಳನ್ನು ಪರಿತ್ಯಜಿಸುವುದಿಲ್ಲ. ಗಂಗಾದಿರೂಪವನ್ನೂ ಪರಿತ್ಯಜಿಸುವುದಿಲ್ಲ. 'ನಾಮರೂಪೇ ಅವಿಹಾಯ' ಎಂದು ಪಾಠವನ್ನಿಟ್ಟುಕೊಂಡಾಗ ಈ ರೀತಿಯಾದ ಅರ್ಥವನ್ನು ಹೇಳಬೇಕು. 'ವಿಹಾಯ' ಎಂದೇ ಪಾಠವನ್ನು ಇಟ್ಟುಕೊಂಡಾಗ ಸಾಮಾನ್ಯರಾದ ಜನರಿಗೆ ಇದು ಗಂಗಾ ಇದು ಗೋದಾವರೀ

ಎಂದು ತಿಳಿಯಲಾಗುವುದಿಲ್ಲವಾದ ಕಾರಣ, ಸಾಮಾನ್ಯಜನರಿಂದ ತಿಳಿಯಲಾಗದಂತೆ ತಮ್ಮ ತಮ್ಮ ನಾಮಗಳನ್ನು ಸ್ವರೂಪಗಳನ್ನು ಬಿಟ್ಟು ಎಂದಾದರೂ ಅರ್ಥೈಸಬಹುದು. ಹೀಗೆ ಅದೃಶ್ಯವಾಗಿ ಹೋಗುತ್ತವೆ. ಹೀಗೆಯೇ ಬ್ರಹ್ಮಜ್ಞಾನಿಯು ನಾಮ-ರೂಪಗಳಿಂದ ಮುಕ್ತನಾಗದೇ ನಾಮ-ರೂಪಗಳಿಂದ ಸಹಿತನಾಗಿಯೇ ದೇವರನ್ನು ಪಡೆಯುತ್ತಾನೆ. ಮುಕ್ತನಾಗುತ್ತಾನೆ. (ವಿಪ್ರಿಯಂ ಎಂಬಲ್ಲಿ ವಿಶಬ್ದವು ಹೇಗೆ ನಿಷೇಧಾರ್ಥಕ-ವಾಗಿದೆಯೋ ಹಾಗೆ ಪ್ರಕೃತ ವಿಮುಕ್ತ ಎಂಬುವಲ್ಲಿಯೂ ವಿಶಬ್ದವು ನಿಷೇಧಾರ್ಥಕವಾಗಿದೆ ಹೀಗಾಗಿ ಅಮುಕ್ತ ಎಂಬ ಅರ್ಥವು ಬರುತ್ತದೆ.)

ಅಥವಾ ವಿಮುಕ್ತಃ ಎಂಬುದಕ್ಕೆ ಮುಕ್ತನಾಗಿ ಎಂಬ ಅರ್ಥವನ್ನೇ ಇಟ್ಟುಕೊಂಡಾಗ ಸಂಸಾರಿಗಳಿಂದ ಜ್ಞೇಯವಾದ ನಾಮ-ರೂಪಗಳಿಂದ ಮುಕ್ತನಾಗಿ ಎಂದು ಅರ್ಥವನ್ನೂ ಹೇಳಬಹುದು. ಹೀಗೆ ಸಂಸಾರಿಗಳಿಂದ ಜ್ಞೇಯವಾಗದ ಮುಕ್ತರಾದವರಿಗೆ ಮಾತ್ರ ಜ್ಞೇಯವಾದ ನಾಮ-ರೂಪಗಳಿಂದ ಯುಕ್ತನಾಗಿ ಸರ್ವೋತ್ತಮನಾದ ಅದ್ಭುತನಾದ ಪರಮಾತ್ಮನನ್ನು ಹೊಂದುತ್ತಾನೆ.॥೬.೮॥

### ಉಪನಿಷತ್

**ಸ ಯೋ ಹ ವೈ ತತ್ಪರಮಂ ಬ್ರಹ್ಮ ವೇದ ಬ್ರಹ್ಮೈವ ಭವತಿ ।**
**ನಾಽಸ್ಯಾಬ್ರಹ್ಮವಿತ್ಕುಲೇ ಭವತಿ । ತರತಿ ಶೋಕಂ ತರತಿ**
**ಪಾಪ್ಮಾನಂ ಗುಹಾಗ್ರಂಥಿಭ್ಯೋ ವಿಮುಕ್ತೋಽಮೃತೋ ಭವತಿ ॥**

**ಉಪನಿಷದರ್ಥ-** ಯಾವ ಅಧಿಕಾರಿಯು ಅನಂತಗುಣಗಳಿಂದ ಪರಿಪೂರ್ಣನಾದ ಪರಬ್ರಹ್ಮನನ್ನು ತಿಳಿಯುತ್ತಾನೋ ಅವನು ಸ್ತೋಚಿತವಾದ ಗುಣಗಳಿಂದ ಬೃಂಹಿತನಾಗುತ್ತಾನೆ. ಇಂಥವನ ಕುಲದಲ್ಲಿ ಬ್ರಹ್ಮಜ್ಞಾನವನ್ನು ಪಡೆಯದವನ ಜನನವಾಗುವುದಿಲ್ಲ. ಅವನು ಪಾಪಗಳಿಂದ ಮುಕ್ತನಾಗುತ್ತಾನೆ. ಶೋಕಭೂಯಿಷ್ಠವಾದ ಸಂಸಾರವನ್ನು ದಾಟುತ್ತಾನೆ. ಹೃದಯದಲ್ಲಿರುವ ಅವಿದ್ಯಾ-ಕಾಮ-ಕರ್ಮ-ಮಿಥ್ಯಾಜ್ಞಾನ-ಸಂಶಯಗಳಿಂದ ಮುಕ್ತನಾಗುತ್ತಾನೆ. ಸ್ವರೂಪಸುಖವನ್ನನುಭವಿಸುತ್ತಾನೆ.

### ಭಾಷ್ಯ

ಪರಂ ಬ್ರಹ್ಮ ವಿದಿತ್ವಾ ತು ಬೃಂಹಿತಃ ಸ್ಯಾತ್ ಸ್ವಯೋಗ್ಯತಃ ।
ನಾಽಯೋಗ್ಯಂ ಕಿಂಚಿದಾಪ್ನೋತಿ ಕುತ ಏವ ಹರೇರ್ಗುಣಾನ್ ॥
ಇತಿ ಚ ॥

ಭಾಷ್ಯಾರ್ಥ- ('ಬ್ರಹ್ಮ ವೇದ ಬ್ರಹ್ಮೈವ ಭವತಿ' ಎಂಬ ವಾಕ್ಯಕ್ಕೆ ಬ್ರಹ್ಮನನ್ನು ತಿಳಿದವನು ಬ್ರಹ್ಮನೇ ಆಗುತ್ತಾನೆ ಎಂಬ ಅರ್ಥವನ್ನು ಪರಕೀಯರು ಹೇಳುತ್ತಾರೆ. ಇದು ಸರಿಯಲ್ಲ. ಜೀವ–ಬ್ರಹ್ಮರಿಗೆ ಭೇದವೇ ಶ್ರುತಿ–ಸ್ಮೃತಿಸಮ್ಮತ–ವಾಗಿದೆ ಎಂಬುದನ್ನು ಆಚಾರ್ಯರು ಪ್ರಮಾಣಪೂರ್ವಕವಾಗಿ ತಿಳಿಸುತ್ತಾರೆ. ಪ್ರಕೃತ ಈ ವಾಕ್ಯದ ಅರ್ಥವನ್ನು ಶ್ರೀಮದಾಚಾರ್ಯರು ಹೇಳುತ್ತಾರೆ)

ಪರಬ್ರಹ್ಮನನ್ನು ತಿಳಿದವನು ಸ್ವಯೋಗ್ಯತೆಗೆ ಅನುಗುಣನಾಗಿ ಪೂರ್ಣನಾಗುತ್ತಾನೆ. ಅಯೋಗ್ಯವಾದುದರ ಪ್ರಾಪ್ತಿ ಜೀವನಿಗೆ ಯಾವ ಕಾರಣಕ್ಕಾಗಿಯೂ ಆಗುವುದಿಲ್ಲ. ಇನ್ನೂ ಹರಿಯ ಗುಣಗಳನ್ನು ಪಡೆಯುವುದು ಯಾರಿಂದ ಸಾಧ್ಯವಾಗುತ್ತದೆ. ಯಾರಿಗೂ ಸಾಧ್ಯವಿಲ್ಲ.

### ಭಾಷ್ಯ

ಬ್ರಹ್ಮತ್ವಂ ಬೃಂಹಿತತ್ವಂ ಸ್ಯಾಜ್ಜೀವಾನಾಂ ನ ಪರಾತ್ಮತಾ ।
ಅಸ್ವತಂತ್ರಸ್ಯ ಜೀವಸ್ಯ ಕುತೋ ನಿತ್ಯಸ್ವತಂತ್ರತಾ ॥ ಇತಿ ಸ್ಕಾಂದೇ ॥

ಭಾಷ್ಯಾರ್ಥ-. ಜೀವನಿಗೆ ಬ್ರಹ್ಮತ್ವವು ಬರುತ್ತದೆಂದರೇ ಸ್ವಯೋಗ್ಯವಾದ ಬೃಂಹಿತತ್ವವು ಪೂರ್ಣತ್ವವು ಬರುತ್ತದೆಂದು ಅರ್ಥ. ಹೊರತು ಜೀವನೆಂದಿಗೂ ಪರಮಾತ್ಮನಾಗಲಾರ. ಅಸ್ವತಂತ್ರನಾಗಿರುವ ಜೀವನಿಗೆ ಯಾವ ಕಾರಣಕ್ಕಾಗಿ ಯಾವ ಪ್ರಮಾಣದಿಂದ ನಿತ್ಯಸ್ವತಂತ್ರತ್ವವು ಸಿದ್ದಿಸುತ್ತದೆ. ಕಾರಣವೂ ಇಲ್ಲ. ಪ್ರಮಾಣವೂ ಇಲ್ಲ. ಎಂದು ಸ್ಕಂದಪುರಾಣವು ಹೇಳುತ್ತದೆ.

## ಭಾಷ್ಯ

**'ಯತ್ರಾಮೃತಃ ಸ ಪುರುಷೋ ಹ್ಯವ್ಯಯಾತ್ಮಾ' 'ಯತ್ರ ತತ್ತತ್ತ್ವಸ್ಯ ಪರಮಂ ನಿಧಾನಮ್' 'ಅಮೃತಸ್ಯೈಷ ಸೇತುಃ' 'ಶರವತ್ ತನ್ಮಯೋ ಭವೇತ್' 'ಬ್ರಹ್ಮ ತಲ್ಲಕ್ಷ್ಯಮುಚ್ಯತೇ' 'ನಿರಂಜನಃ ಪರಮಂ ಸಾಮ್ಯಮುಪೈತಿ' ಇತ್ಯಾದಿನಾ ಮುಕ್ತಸ್ಯ ಸರ್ವತ್ರ ಭಗವತ್ಸಕಾಶಾತ್ ಭೇದಸ್ಯೈವೋಕ್ತತ್ವಾಚ್ಚ। 'ಮುಕ್ತೋಪಸೃಪ್ಯವ್ಯಪದೇಶಾತ್' 'ಜಗದ್ವ್ಯಾಪಾರವರ್ಜಮ್' 'ಪ್ರಕರಣಾದಸನ್ನಿಹಿತತ್ವಾಚ್ಚ' ಇತ್ಯಾದಿನಾ ಭಗವತಾಽಪಿ ಸರ್ವತ್ರ ಭೇದಸ್ಯೈವ ಸೂಚಿತತ್ವಾತ್ ।**

ಭಾಷ್ಯಾರ್ಥ- ಯಾವ ಲೋಕದಲ್ಲಿ ಮುಕ್ತಿಪ್ರದನಾದ ನಾಶರಹಿತನಾದ ಪರಮಾತ್ಮನು ಇರುತ್ತಾನೋ ಅಲ್ಲಿಗೆ ಪ್ರಾರಬ್ಧದಿಂದ ನಿರ್ಮುಕ್ತರಾದ ಸಾಧಕರು ಹೋಗುತ್ತಾರೆ ಎಂದು ಹೇಳುವ ಈ ಮಂತ್ರದಲ್ಲಿ ಮುಕ್ತಬ್ರಹ್ಮರಿಗೆ ಗಂತೃಗಮ್ಯತ್ವವನ್ನು ಹೇಳುತ್ತಿದ್ದಾರೆ. ಆದ್ದರಿಂದ ಮುಕ್ತಬ್ರಹ್ಮರಿಗೆ ಭೇದವೇ ಸಿದ್ಧವಾಗುತ್ತದೆ.

ಎಲ್ಲಿ ಸದ್ಗುಣಸಂಪನ್ನನಾದ ಪರಮಾತ್ಮನ ಪ್ರತ್ಯಕ್ಷಸನ್ನಿಧಾನವಿರುತ್ತದೋ ಅಲ್ಲಿಗೆ ಜ್ಞಾನಿಗಳು ಹೋಗುತ್ತಾರೆ ಎಂದು ತಿಳಿಸುವ 'ಯತ್ರ ತತ್ತತ್ತ್ವಸ್ಯ...' ಎಂಬಲ್ಲಿಯೂ ಗಂತೃಗಮ್ಯತ್ವವನ್ನು ಹೇಳುತ್ತಿದ್ದಾರೆ ಆದ್ದರಿಂದ ಮುಕ್ತಬ್ರಹ್ಮರಿಗೆ ಭೇದವೇ ಸಿದ್ಧವಾಗುತ್ತದೆ.

'ಅಮೃತಸ್ಯೈಷ ಸೇತುಃ' ಎಂಬಲ್ಲಿಯಂತೂ ಮುಕ್ತಾಶ್ರಯತ್ವವನ್ನು ಬ್ರಹ್ಮನಿಗೆ ಹೇಳುತ್ತಿದ್ದಾರೆ. ಆದ್ದರಿಂದ ಮುಕ್ತಬ್ರಹ್ಮರಿಗೆ ಸ್ಪಷ್ಟವಾಗಿ ಭೇದವೇ ಸಿದ್ಧವಾಗುತ್ತದೆ.

'ಶರವತ್ ತನ್ಮಯೋ ಭವೇತ್' ಎಂಬ ವಾಕ್ಯದಲ್ಲಿ ಬಾಣದಂತೆ ಜೀವನು ಏಕಾಗ್ರಚಿತ್ತನಾಗಿರಬೇಕೆಂದು, 'ಬ್ರಹ್ಮತಲ್ಲಕ್ಷ್ಯಮುಚ್ಯತೇ' ಎಂಬಲ್ಲಿ ಬ್ರಹ್ಮನು ಲಕ್ಷ್ಯನಾದುದರಿಂದ ಅವನಿಗೆ ವೇಧ್ಯತ್ವರೂಪವಾದ ಧ್ಯೇಯತ್ವವನ್ನೂ ಹೇಳಿದ್ದರಿಂದ ಭೇದವೇ ಸ್ಪಷ್ಟವಾಗುತ್ತದೆ.

ನಿರಂಜನಃ ಎಂಬಲ್ಲಿಯೂ ಸಾಮ್ಯವನ್ನು ಹೇಳಿದ್ದರಿಂದ, ಸಾಮ್ಯವು ಭೇದವ್ಯಾಪ್ತವಾದುದರಿಂದ ಭೇದವು ಸ್ಪಷ್ಟವಾಗುತ್ತದೆ.

ಸೂತ್ರಗಳ ವಿರೋಧವೂ ಬರುವುದರಿಂದ 'ಬ್ರಹ್ಮ ವೇದ' ಎಂಬ ವಾಕ್ಯಕ್ಕೆ ಮುಕ್ತಬ್ರಹ್ಮೈಕ್ಯವನ್ನು ಸರ್ವಥಾ ಹೇಳಬಾರದು.

'ಮುಕ್ತೋಪಸೃಪ್ಯವ್ಯಪದೇಶಾತ್' ಎಂಬ ಈ ಸೂತ್ರದಲ್ಲಿ ಮುಕ್ತಪ್ರಾಪ್ಯತ್ವವನ್ನು ಬ್ರಹ್ಮನಿಗೆ ಹೇಳಿದ್ದಾರೆ.

'ಜಗದ್ವ್ಯಾಪಾರವರ್ಜ್ಯಮ್' ಮುಕ್ತರಾದ ಜೀವರು ಸ್ವೇಚ್ಛಾಚಾರ-ಸಮರ್ಥರಾಗಿರುತ್ತಾರೆ ಎಂದು ಹೇಳಿದ್ದಾರೆ. ಹಾಗಾದರೇ ಶ್ರೀಹರಿಯಂತೆ ಜಗತ್ಸೃಷ್ಟ್ಯಾದಿಗಳನ್ನು ಮಾಡುತ್ತಾರೆಯೇ ಎಂಬ ಶಂಕೆಬಂದರೇ ಆ ಶಂಕೆಯನ್ನು ಈ ಸೂತ್ರವು ಪರಿಹರಿಸುತ್ತದೆ. ಮುಕ್ತರು ಜಗತ್ಸೃಷ್ಟ್ಯಾದಿವ್ಯಾಪಾರಗಳನ್ನು ಸರ್ವಥಾ ಮಾಡುವುದಿಲ್ಲ ಎಂದು ಸೂತ್ರಾರ್ಥ. 'ಸರ್ವಾನ್ ಕಾಮಾನಾಪ್ತ್ವಾ ಅಮೃತಃ ಸಮಭವತ್' ಎಂಬ ಶ್ರುತಿಯು ಕೂಡಾ ಜಗತ್ಸೃಷ್ಟ್ಯಾದಿಗಳಿಂದ ಭಿನ್ನವಾದ ಎಲ್ಲ ಅಭೀಷ್ಟಗಳನ್ನು ಪಡೆದವನಾಗಿ ಜೀವನು ಮುಕ್ತನಾಗಿಯೇ ಇರುತ್ತಾನೆ ಎಂದು ಹೇಳುತ್ತದೆ.

ಸರ್ವಕಾಮಾವಾಪ್ತಿಯನ್ನು ಹೇಳುವ ಶ್ರುತಿಗೆ ಸಂಕೋಚವನ್ನು ಯಾಕೆ ಮಾಡುತ್ತೀರಿ ಎಂದು ಶಂಕೆಯು ಪ್ರಾಪ್ತವಾಗುತ್ತದೆ. ಇದಕ್ಕೆ 'ಪ್ರಕರಣಾತ್ ಅಸನ್ನಿಹಿತತ್ವಾಚ್ಚ' ಎಂಬ ಸೂತ್ರವು ಉತ್ತರವಾಗಿದೆ. ಇದು ಜೀವಪ್ರಕರಣವಾಗಿದೆ ಆದ್ದರಿಂದ ಜೀವನಿಗೆ ಸೃಷ್ಟ್ಯಾದಿಗಳನ್ನು ಮಾಡುವ ಶಕ್ತಿಯು ಅಸನ್ನಿಹಿತ ಸರ್ವಥಾ ಇಲ್ಲದಿದ್ದುದರಿಂದ ಅರ್ಥಸಂಕೋಚವನ್ನು ಮಾಡಬೇಕು. ಎಂದು ಭಗವಾನ್ ಬಾದರಾಯಣರು ಸ್ಪಷ್ಟವಾಗಿ ಭೇದವನ್ನೇ ಬ್ರಹ್ಮಸೂತ್ರಗಳಲ್ಲಿ ಸರ್ವತ್ರ ಪ್ರತಿಪಾದಿಸಿದ್ದಾರೆ.

## ಭಾಷ್ಯ

ನ ತೇ ಮಹಿತ್ವಮನ್ವಶ್ನುವಂತಿ । 'ಸೋಽಶ್ನುತೇ ಸರ್ವಾನ್ ಕಾಮಾನ್ ಸಹ ಬ್ರಹ್ಮಣಾ ವಿಪಶ್ಚಿತಾ'

ಬ್ರಹ್ಮೇಶಾನಾದಿಭಿರ್ದೇವೈಃ ಯತ್ ಪ್ರಾಪ್ತುಂ ನೈವ ಶಕ್ಯತೇ ।
ತದ್ಯತ್ ಸ್ವಭಾವಃ ಕೈವಲ್ಯಂ ಸ ಭವಾನ್ ಕೇವಲೋ ಹರೇ ॥
ಇತ್ಯಾದೇಶ್ಚ ॥

ಮುಕ್ತೇಭ್ಯೋಽಪಿ ಮನುಷ್ಯೇಭ್ಯೋ ದೇವಾ ಏವ ಗುಣಾಧಿಕಾಃ ।
ತೇಭ್ಯೋ ವಾಯುಸ್ತತೋ ವಿಷ್ಣುಃ ಪರಿಪೂರ್ಣಗುಣಃ ಸದಾ ॥
ಯೇ ತ್ವೇತದನ್ಯಥಾ ವಿದ್ಯುಃ ತೇ ಹಿ ಯಾಂತ್ಯಧರಂ ತಮಃ ।
ಯೇ ತ್ವೇತದೇವಂ ಜಾನಂತಿ ತೇ ಯಾಂತಿ ಪರಮಂ ಹರಿಮ್ ॥
ಇತಿ ಚ ॥

ಭಾಷ್ಯಾರ್ಥ- ಮುಕ್ತರಾಗಲೀ ಅಮುಕ್ತರಾಗಲೀ ಯಾರೂ ನಿನ್ನ ಮಹಿಮೆಯನ್ನು ಪಡೆಯಲಾಗುವುದಿಲ್ಲ ಎಂದು ಹೇಳುತ್ತಾ ಈ ಶ್ರುತಿಯು ಮುಕ್ತಬ್ರಹ್ಮರಿಗೆ ಭೇದವನ್ನೇ ಹೇಳುತ್ತದೆ.

ಸೋಽಶ್ನುತೇ ಎಂಬ ಶ್ರುತಿಯೂ ಬ್ರಹ್ಮಣಾ ಸಹ ಬ್ರಹ್ಮನ ಜೊತೆಗೆ ಎಲ್ಲ ಸುಖವನ್ನು ಮುಕ್ತನು ಭೋಗಿಸುತ್ತಾನೆ ಎಂದು ಹೇಳುತ್ತಾ ಭೇದವನ್ನೇ ತಿಳಿಸುತ್ತಿದೆ.

ಬ್ರಹ್ಮಾದಿದೇವತೆಗಳಿಂದಲೂ ಹೊಂದಲಾಗದ ಸರ್ವೋತ್ತಮತ್ವವು ನಿನ್ನ ಸ್ವಭಾವವಾಗಿದೆ ಎಂದು ಹೇಳುತ್ತಾ 'ಬ್ರಹ್ಮೇಶಾನಾದಿಭಿಃ' ಎಂಬ ಸ್ಮೃತಿಯೂ ಭೇದವನ್ನೇ ಪ್ರತಿಪಾದಿಸುತ್ತದೆ.

ಮುಕ್ತರಾದ ಮನುಷ್ಯರಿಗಿಂತಲೂ ದೇವತೆಗಳು ಅಧಿಕವಾದ ಗುಣಗಳುಳ್ಳವರಾಗಿದ್ದಾರೆ. ಎಲ್ಲದೇವತೆಗಳಿಗಿಂತಲೂ ವಾಯುದೇವರು ಗುಣಾಧಿಕರಾಗಿದ್ದಾರೆ. ವಾಯುದೇವರಿಗಿಂತಲೂ ಭಗವಂತ ಸರ್ವದಾ ಪರಿಪೂರ್ಣಗುಣ ಉಳ್ಳವನಾಗಿದ್ದಾನೆ.

ಈ ಪ್ರಮೇಯವನ್ನು ವಿಪರೀತವಾಗಿ ಯಾರು ತಿಳಿಯುತ್ತಾರೋ ಅವರು ತಮಸ್ಸಿನಲ್ಲಿ ಬೀಳುತ್ತಾರೆ. ಯಾರು ಈ ಪ್ರಮೇಯವನ್ನು ಯಥಾರ್ಥವಾಗಿ ತಿಳಿಯುತ್ತಾರೋ ಅವರು ಪರಮಪದವನ್ನು ಪಡೆಯುತ್ತಾರೆ. ಎಂದು ಈ

ರೀತಿಯಾಗಿ ಸ್ವಯಂ ಈ ಆಥರ್ವಣೋಪನಿಷತ್ತಿನಲ್ಲಿ, ಬ್ರಹ್ಮಸೂತ್ರಗಳಲ್ಲಿ, ಶ್ರುತಿಗಳಲ್ಲಿ, ಸ್ಮೃತಿಗಳಲ್ಲಿ ಭೇದವೇ ಸ್ಪಷ್ಟವಾಗಿರುವುದರಿಂದ 'ಬ್ರಹ್ಮ ವೇದ ಬ್ರಹ್ಮೈವ ಭವತಿ' ಎಂಬ ಶ್ರುತಿಗೆ ಐಕ್ಯಾರ್ಥವು ಅಯುಕ್ತವಾಗಿದೆ ಎಂದು ತಿಳಿಯಬೇಕು. ಬ್ರಹ್ಮನನ್ನು ಅಪರೋಕ್ಷತಃ ತಿಳಿದವನು ತನ್ನ ಯೋಗ್ಯತೆಗೆ ತಕ್ಕಂತೆ ಗುಣಗಳಿಂದ ಪೂರ್ಣನಾಗುತ್ತಾನೆ ಎಂಬ ಅರ್ಥವನ್ನೇ ತಿಳಿಯಬೇಕು.

## ಭಾಷ್ಯ

ದೇವಾನಾಂ ಸಂತತೌ ಜಾತಾಃ ಪ್ರಾಯಶೋ ಜ್ಞಾನಿನಃ ಕೃತೇ ।
ಬಲವದ್ದೇತುತಶ್ಚಾನ್ಯೇ ಯಸ್ಮಾದ್ ಬ್ರಹ್ಮವಿದಃ ಸುರಾಃ ॥
ನ ಸಂತತೌ ಬ್ರಹ್ಮವಿದೋ ನರಾಣಾಂ ಜ್ಞಾನಿನಾಮಪಿ ।
ಪ್ರಾಯಶಃ ಸ್ಯುಃ ಸುರಾಣಾಂ ಚ ನಿಯಮೋಽಯಂ ಕೃತೇ ಯುಗೇ ॥

ಭಾಷ್ಯಾರ್ಥ- ಕೃತಯುಗದಲ್ಲಿ ದೇವತೆಗಳ ಸಂತತಿಯಲ್ಲಿ ಜನಿಸಿದವರೆಲ್ಲರೂ ಪ್ರಾಯಃ ಜ್ಞಾನಿಗಳೇ ಆಗಿರುತ್ತಾರೆ. ಶಾಪವೇ ಮೊದಲಾದ ಪ್ರಬಲವಾದ ಕಾರಣಗಳಿಂದ ಹಲವು ಬಾರಿ ಬ್ರಹ್ಮಜ್ಞಾನಶೂನ್ಯರು ಕೂಡಾ ಜನಿಸಬಹುದು. ದೇವತೆಗಳು ಸ್ವಯಂ ಬ್ರಹ್ಮಜ್ಞಾನಿಗಳಾದುದರಿಂದ ಈ ನಿಯಮವು ಯುಕ್ತವಾಗಿದೆ.

ಮನುಷ್ಯರು ಬ್ರಹ್ಮಜ್ಞಾನಿಗಳಾಗಿದ್ದರೂ ಅವರ ಸಂತತಿಯಲ್ಲಿ ಬ್ರಹ್ಮಜ್ಞಾನಶೂನ್ಯರೇ ಪ್ರಾಯಶಃ ಜನಿಸುತ್ತಾರೆ. ಕೆಲವೊಮ್ಮೆ ಮಾತ್ರ ಬ್ರಹ್ಮಜ್ಞಾನಿಗಳು ಜನಿಸುತ್ತಾರೆ. ಈ ನಿಯಮವನ್ನು ದೇವತೆಗಳು ಕೃತಯುಗದಲ್ಲಿ ಮಾಡಿದ್ದಾರೆ. ಆದ್ದರಿಂದ ದೇವಾನಾಂ ಇತ್ಯಾದಿಯಾಗಿ ಹೇಳಿದ್ದು ಯುಕ್ತವೇ ಆಗಿದೆ.

## ಖಂಡಾರ್ಥ

ಏತದುಪನಿಷದರ್ಥಜ್ಞಾನಿನಃ ಫಲಮಾಹ- ಸ ಯ ಇತಿ ॥ ಯೋಽಧಿಕಾರೀ ಏತತ್ಪರಮಂ ಬ್ರಹ್ಮ ವೇದ ಸ ಬ್ರಹ್ಮೈವ ಜ್ಞಾನಾನಂದಾದಿಸ್ವೋಚಿತಗುಣೈಃ ಬೃಂಹಿತ ಏವ ಭವತಿ, ನ ಪರಬ್ರಹ್ಮತಾಂ ಆಪ್ನೋತಿ । ಅಸ್ಯ ಕುಲೇ ಅಬ್ರಹ್ಮವಿತ್

ಬ್ರಹ್ಮಾನಭಿಜ್ಞೋ ನ ಭವತಿ । ತರತಿ ಶೋಕಂ ತರತಿ ಪಾಪ್ಮಾನಮ್ । ಗುಹಾಗ್ರಂಥಿಭ್ಯ: ಹೃದಯಸ್ಥಾವಿದ್ಯಾಕಾಮಕರ್ಮಾದಿಬಂಧಾತ್ ವಿಮುಕ್ತ: ಅಮೃತೋ ಭವತಿ ॥೬.೯॥

**ಅನುವಾದ-** ಈ ಉಪನಿಷತ್ತಿನ ಅರ್ಥವನ್ನು ತಿಳಿದವರಿಗೆ ದೊರೆಯುವ ಫಲವನ್ನು 'ಸ ಯ...' ಎಂಬ ಮಂತ್ರವು ತಿಳಿಸುತ್ತದೆ.

ಯಾವ ಅಧಿಕಾರಿಯು ಈ ಪರಬ್ರಹ್ಮನನ್ನು ತಿಳಿಯುತ್ತಾನೋ ಅವನು ಕೂಡಾ ಬ್ರಹ್ಮನೇ ಆಗುತ್ತಾನೆ. ಅಂದರೇ ಜ್ಞಾನ-ಆನಂದ ಮೊದಲಾದ ತನಗೆ ಯೋಗ್ಯವಾದ ಗುಣಗಳಿಂದ ಪೂರ್ಣನಾಗುತ್ತಾನೆ ಎಂದು ಅರ್ಥ. ಹೊರತು ಬ್ರಹ್ಮನಿಂದ ಅಭಿನ್ನನಾಗುತ್ತಾನೆ ಎಂದು ಸರ್ವಥಾ ತಿಳಿಯಬಾರದು. ಇವನ ಕುಲದಲ್ಲಿ ಬ್ರಹ್ಮನನ್ನು ತಿಳಿಯದ ವ್ಯಕ್ತಿಯ ಜನನವೇ ಆಗುವುದಿಲ್ಲ. ಇವನ ಕುಲದಲ್ಲಿ ದೇವರನ್ನು ತಿಳಿದವರೇ ಜನಿಸುತ್ತಾರೆ. ಇವನು ಶೋಕವನ್ನು ಕಳೆದುಕೊಳ್ಳುತ್ತಾನೆ. ಪಾಪಗಳಿಂದಲೂ ಮುಕ್ತನಾಗುತ್ತಾನೆ. ಗುಹಾಗ್ರಂಥಿಭ್ಯ:= ಹೃದಯದಲ್ಲಿರುವ ಅವಿದ್ಯಾ-ಕಾಮ-ಕರ್ಮಾದಿರೂಪವಾದ ಬಂಧನಗಳನ್ನು ಕಳಚಿಕೊಂಡು ಮುಕ್ತನಾಗುತ್ತಾನೆ. ॥೬.೯॥

### ಉಪನಿಷತ್

**ತದೇಷ: ಶ್ಲೋಕ: ।**
**ಕ್ರಿಯಾವಂತ: ಶ್ರೋತ್ರಿಯಾ ಬ್ರಹ್ಮನಿಷ್ಠಾ:**
**ಸ್ವಯಂ ಜುಹ್ವತ ಏಕರ್ಷಿನ್ ಶ್ರದ್ಧಯಂತ: ।**
**ತೇಷಾಮೇವೈತಾಂ ಬ್ರಹ್ಮವಿದ್ಯಾಂ ವದೇತ**
**ಶಿರೋವ್ರತಂ ವಿಧಿವದ್ಯೈಸ್ತು ಚೀರ್ಣಮ್ ॥೬.೧೦॥**

ಉಪನಿಷದರ್ಥ- ಈ ಉಪನಿಷತ್ತಿನ ಅಧಿಕಾರಿಗಳನ್ನು ನಿರೂಪಣೆ ಮಾಡುವ ವಿಷಯದಲ್ಲಿ ಮುಂದೆ ಹೇಳುವ ಈ ಶ್ಲೋಕವು ಪ್ರಮಾಣವಾಗುತ್ತದೆ.

ಸ್ವವಿಹಿತವಾದ ಕ್ರಿಯೆಗಳನ್ನು ಅನುಷ್ಠಾನಮಾಡುವ, ವೇದಾರ್ಥಗಳನ್ನು ವಿಚಾರಮಾಡುವಲ್ಲಿ ತತ್ಪರರಾದ ಪರಬ್ರಹ್ಮನಲ್ಲಿ ಆಸಕ್ತವಾದ ಮನಸ್ಸುಳ್ಳ, ಸ್ವಯಂ ಯಜಮಾನರಾಗಿ ಯಜ್ಞಗಳನ್ನು ಮಾಡುವ, ಬ್ರಹ್ಮವಿದ್ಯಾಸಂಪ್ರದಾಯ ಪ್ರವರ್ತಕರಾದ, ತಮಗಿಂತಲೂ ಉತ್ತಮರಾದ ಮುನಿಗಳನ್ನು ಶ್ರದ್ಧಾಪೂರ್ವಕವಾಗಿ ಅರ್ಚಿಸುವವರು ವಿಧಿಗೆ ಅನುಗುಣವಾಗಿ ಚೌಲೋಪನಯನ ಮೊದಲಾದ ವ್ರತಗಳನ್ನು ಆಚರಿಸಿದವರಾಗಿ ಸ್ವಶಾಖೋಕ್ತವಾದ ವಿಶೇಷವ್ರತಗಳನ್ನು ಅನುಷ್ಠಾನಮಾಡುತ್ತಾರೋ ಅಂತಹ ಸ್ವವೇದವ್ರತಯುಕ್ತರಾದವರಿಗೆ ಮಾತ್ರ ಈ ಬ್ರಹ್ಮಜ್ಞಾನಕಾರಣವಾದ ಈ ಉಪನಿಷತ್ತನ್ನು ಉಪದೇಶಮಾಡಬೇಕು.

### ಖಂಡಾರ್ಥ

ಅಸ್ಯಾ: ಉಪನಿಷದ: ಕ: ಅಧಿಕಾರೀತ್ಯತ: ತಂ ಶ್ಲೋಕೋದಾಹರಣೇನಾಹ- **ತದೇಷ ಶ್ಲೋಕ ಇತಿ** ॥ ತತ್ತೈತದ್ವಿದ್ಯಾಧಿಕಾರವಿಷಯೇ ವಕ್ಷ್ಯಮಾಣಶ್ಲೋಕೋ ಭವತೀತ್ಯರ್ಥ: । ಶ್ರೋತ್ರಿಯಾ: ಛಂದೋಽಧ್ಯೇತಾರ: । ಬ್ರಹ್ಮನಿಷ್ಠಾ: ಬ್ರಹ್ಮಣಿ ಭಕ್ತಿಮಂತ: । ಸ್ವಯಂ ಜುಹ್ವತ: ಅಗ್ನಿಹೋತ್ರಾದಿಕಮನುತಿಷ್ಠಂತ: । ಏಕಋಷೀನ್ ಪ್ರಧಾನಋಷೀನ್ ಶ್ರದ್ಧಯಂತ: ಶ್ರದ್ಧಾಪೂರ್ವಕಮರ್ಚಯಂತ: । ಯೈಸ್ತು ಶಿರೋವ್ರತಂ ವಿಧಿವಚ್ಚೀರ್ಣಂ, ಶಿರೋವ್ರತಂ ನಾಮ ವ್ರತವಿಶೇಷ: । ತೇಷಾಮೇವೈತಾಂ ಬ್ರಹ್ಮವಿದ್ಯಾಂ ಬ್ರಹ್ಮಜ್ಞಪ್ತಿಹೇತುಭೂತಾಂ ಉಪನಿಷದಂ ವದೇತ ಆವಿಷ್ಕಾರೇಣ ವದೇತ ಸ್ಪಷ್ಟಮುಪದಿಶೇದಿತ್ಯರ್ಥ: । 'ಭಾಸನೋಪ- ಸಂಭಾಷಾಜ್ಞಾನಯತ್ನ- ವಿಮತ್ಯುಪಮಂತ್ರಣೇಷು ವದ:' ಇತಿ ಭಾಸನಾರ್ಥೇ ಆತ್ಮನೇ ಪದಮ್ ॥೬.೧೦॥

**ಅನುವಾದ-** ಈ ಉಪನಿಷತ್ತಿಗೆ ಅಧಿಕಾರಿಗಳು ಯಾರು ಎಂಬುದನ್ನು ಶ್ಲೋಕವನ್ನು ಉದಾಹರಿಸುತ್ತಾ ತದೇಷ ಶ್ಲೋಕ: ಎಂಬ ಮಂತ್ರವು ತಿಳಿಸುತ್ತದೆ.

ಈ ವಿದ್ಯೆಯ ಅಧಿಕಾರಿಯ ವಿಷಯದಲ್ಲಿ ಮುಂದೆ ಹೇಳುವ ಶ್ಲೋಕವು ಪ್ರಮಾಣವಾಗಿ ಇರುತ್ತದೆ. ಶ್ರೋತ್ರಿಯಾಃ=ವೇದಗಳನ್ನು ಅಧ್ಯಯನ-ಮಾಡುವವರು, ಬ್ರಹ್ಮನಿಷ್ಠಾಃ=ಭಗವಂತನಲ್ಲಿ ಭಕ್ತಿಯುಳ್ಳವರು, ಸ್ವಯಂ ಜುಹ್ವತಃ=ಅಗ್ನಿಹೋತ್ರಾದಿಕರ್ಮಗಳನ್ನು ಅನುಷ್ಠಾನಮಾಡುವವರು, ಏಕಋಷೀನ್=ಪ್ರಧಾನರಾಗಿರುವ ಋಷಿಗಳನ್ನು ಶ್ರದ್ಧಯಂತಃ= ಶ್ರದ್ಧಾಪೂರ್ವಕವಾಗಿ ಅರ್ಚಿಸುತ್ತಾರೋ, ಮತ್ತು ಯಾರು ಶಿರೋವ್ರತವೆಂಬ ಹೆಸರಿನ ವ್ರತವಿಶೇಷವನ್ನು ಅನುಷ್ಠಾನಮಾಡುತ್ತಾರೋ ಅವರಿಗೇ ಈ ಬ್ರಹ್ಮವಿದ್ಯೆಯನ್ನು ಬ್ರಹ್ಮಜ್ಞಾನಕ್ಕೆ ಸಾಧನವಾಗಿರುವ ಈ ಉಪನಿಷತ್ತನ್ನು ಆವಿಷ್ಕಾರಪೂರ್ವಕವಾಗಿ ಸ್ಪಷ್ಟವಾಗಿ ಉಪದೇಶ ಮಾಡಬೇಕು.

ವದ ಧಾತು ಪರಸ್ಮೈ ಪದಿಯಾಗಿದೆ. ಪ್ರಕೃತ ಭಾಸನೋಪಸಂಭಾಷಾ... ಎಂಬ ಸೂತ್ರಕ್ಕೆ ಅನುಗುಣವಾಗಿ ಭಾಸನ ಎಂಬ ಅರ್ಥದಲ್ಲಿ ಆತ್ಮನೇ ಪದಿಯಾಗಿ ಪ್ರಯುಕ್ತವಾಗಿದೆ ಎಂದು ತಿಳಿಯಬೇಕು. ।।೬.೧೦।।

**ಉಪನಿಷತ್**

**ತದೇತತ್ಸತ್ಯಮೃಷಿರಂಗಿರಾಃ ಪುರೋವಾಚ । ನೈತದಚೀರ್ಣ-ವ್ರತೋಽಧೀತೇ ।। ನಮಃ ಪರಮಋಷಿಭ್ಯೋ ನಮಃ ಪರಮಋಷಿಭ್ಯಃ ।।೬.೧೧।।**

**ಉಪನಿಷದರ್ಥ-** ಚೌಲೋಪನಯನವನ್ನು ಮಾಡಿಕೊಂಡು ಸ್ವಶಾಖೋಕ್ತವಾದ ವ್ರತವಿಶೇಷಗಳನ್ನು ಯಾರು ಆಚರಿಸುವುದಿಲ್ಲವೋ ಅಂಥವರು ಈ ಬ್ರಹ್ಮವಿದ್ಯೆಯನ್ನು ಕಲಿಯಬಾರದು ಅಭ್ಯಾಸಮಾಡಬಾರದು ಎಂದು ಹಿಂದಕ್ಕೆಯೇ ಅಂಗಿರ ಋಷಿಗಳು ಶೌನಕರಿಗೆ ಹೇಳಿದ್ದಾರೆ. ಆದ್ದರಿಂದ ಈ ಪ್ರಮೇಯ ಯಥಾರ್ಥವೆಂದು ತಿಳಿಯಬೇಕು. ಪರಮಾತ್ಮ-ಬ್ರಹ್ಮ-ಗರುಡ-ಅಗ್ನಿ-ಏಕರ್ಷಿ-ಅಥರ್ವ-ಅಂಗಿರ-ಭಾರದ್ವಾಜ-ಅಂಗಿರಸ-ಶೌನಕ ಮೊದಲಾದ ಪರಮಋಷಿಗಳಿಗೆಲ್ಲರಿಗೂ ನಮಸ್ಕಾರಗಳು. ಸತ್ಸಿದ್ಧಾಂತಪ್ರವರ್ತಕರಾದ ಈ ಎಲ್ಲ ಋಷಿಗಳಿಗೆ ನಮಸ್ಕಾರಗಳು.

### ಭಾಷ್ಯ

ತಸ್ಮಾತ್ ಸ ಭಗವಾನ್ ವಿಷ್ಣುಃ ಜ್ಞೇಯಃ ಸರ್ವೋತ್ತಮೋತ್ತಮಃ ।
ಸದಾ ಸರ್ವಗುಣೈಃ ಪೂರ್ಣೋ ಯೋऽನಂತಃ ಪುರುಷೋತ್ತಮಃ ॥
ಇತಿ ಚ ॥

ಭಾಷ್ಯಾರ್ಥ- ಯಾವ ಕಾರಣ ಬ್ರಹ್ಮಜ್ಞಾನಿಗಳ ಕುಲದಲ್ಲಿ ಬ್ರಹ್ಮಜ್ಞಾನಿಗಳೇ ಹುಟ್ಟುತ್ತಾರೋ ಆ ಕಾರಣಕ್ಕಾಗಿ ಬ್ರಹ್ಮವಿತ್ಪುತ್ರಪೌತ್ರಾದಿಫಲಜನಕವಾದುದರಿಂದ ಯಾರು ಭಗವತ್ತ್ವ ಮೊದಲಾದ ವಿಶೇಷಣಗಳಿಂದ ಯುಕ್ತನಾಗಿರುವನೋ ಅಂತಹ ವಿಷ್ಣುವೇ ಜ್ಞೇಯನಾಗಿದ್ದಾನೆ. ಅವನು ಸರ್ವೋತ್ತಮೋತ್ತಮ-ನಾಗಿದ್ದಾನೆ. ಯಾವಾಗಲೂ ಎಲ್ಲ ಗುಣಗಳಿಂದ ಪರಿಪೂರ್ಣನಾಗಿದ್ದಾನೆ. ದೇಶತಃ ಕಾಲತಃ ನಾಶವಿಲ್ಲದವನಾಗಿದ್ದಾನೆ. ಕ್ಷರಾಕ್ಷರಪುರುಷರಿಗಿಂತಲೂ ಉತ್ತಮನಾಗಿದ್ದಾನೆ. ಈ ಎಲ್ಲ ಗುಣಗಳಿಂದ ವಿಶಿಷ್ಟನಾದ ಪರಮಾತ್ಮನನ್ನು ತಿಳಿಯಬೇಕು. ಇವನ ಧ್ಯಾನವನ್ನೇ ನಿರಂತರ ಮಾಡಬೇಕು.

### ಭಾಷ್ಯ

ಪ್ರೀಯತಾಂ ಭಗವಾನ್ ಮಹ್ಯಂ ಪ್ರೇಷ್ಠಪ್ರೇಷ್ಠತಮಃ ಸದಾ ।
ಮಮ ನಿತ್ಯಂ ನಮಾಮ್ಯೇನಂ ಪರಮೋದಾರಸದ್ಗುಣಮ್ ॥

ಭಾಷ್ಯಾರ್ಥ- ಭಾಷ್ಯವನ್ನು ರಚಿಸಿ ಮುಗಿಸಿದ ಶ್ರೀಮದಾಚಾರ್ಯರು ಭಾಷ್ಯವನ್ನು ರಚನೆಗೆ ಕಾರಣವನ್ನು ಸೂಚಿಸುತ್ತಾ ಮತ್ತೆ ಅಂತದಲ್ಲಿ ಮಂಗಳಾಚರಣ ಮಾಡುತ್ತಾರೆ.

ನಿರಂತರವೂ ನಿರತಿಶಯಪ್ರಿಯನಾದ, ಉತ್ಕೃಷ್ಟವಾದ ಅನಂತ ಗುಣಗಳಿಂದ ಪರಿಪೂರ್ಣನಾದ, ಷಡ್ಗುಣೈಶ್ವರ್ಯಗಳಿಂದ ಪರಿಪೂರ್ಣನಾದ ಪರಮಾತ್ಮನನ್ನು ನಾನು ನಮಸ್ಕರಿಸುತ್ತೇನೆ. ಅವನು ನನಗೆ ಪ್ರೀತನಾಗಲಿ.

॥ ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತಂ
ಆಥರ್ವಣೋಪನಿಷದ್ಭಾಷ್ಯಮ್ ॥

## ಖಂಡಾರ್ಥ

**ಸ್ತೋಕ್ತಂ ಪ್ರಮೇಯಮೃಷಿಣಾsಪ್ಯುಕ್ತಮಿತ್ಯಾಹ- ತದೇತದಿತಿ ॥** ಅಂಗಿರಾ **ಋಷಿ: ಏತನ್ಮಯೋಪದಿಷ್ಟಂ ಪ್ರಮೇಯಮಚೀರ್ಣವ್ರತ: ಪುಮಾನ್** ನಾsಧಿ **ಠತೇ ನಾsವಧಾರಯೇತ್ ಇತಿ ಪುರೋವಾಚ । ತದೇತತ್ ಋಷಿಣೋಕ್ತಂ** ಸತ್ಯಂ ಯಥಾರ್ಥಂ ಇತ್ಯರ್ಥ: । ವೇದಪುರುಷ: ಉಪನಿಷದಂ **ಪ್ರಾಗುಕ್ತಾನೇಕಋಷಿಪ್ರಣಾಮೇನ ಸಮಾಪಯತಿ- ನಮ ಇತಿ ॥ ಆದರಾದ್ ದ್ವಿರುಕ್ತಿ: ॥೬.೧೧॥**

**ಅನುವಾದ-** ತಾವು ಹೇಳಿದ ಪ್ರಮೇಯವು ಋಷಿಗಳಿಂದಲೂ ಉಕ್ತವಾಗಿದೆ ಎಂದು **'ತದೇತತ್...'** ಎಂಬ ಮಂತ್ರದಿಂದ ಹೇಳುತ್ತಿದ್ದಾರೆ.

ತಾವು ಉಪದೇಶಿಸಿದ ಈ ಪ್ರಮೇಯವನ್ನು ವ್ರತಗಳನ್ನು ಮಾಡದ ಪುರುಷನು ಅಧ್ಯಯನಮಾಡಬಾರದು. ಅವನು ಈ ವಿದ್ಯೆಯನ್ನು ಧರಿಸಬಾರದು. ಎಂದು ಅಂಗಿರ ಋಷಿಗಳು ಹಿಂದೆಯೇ ಹೇಳಿದ್ದಾರೆ. ಋಷಿಗಳಿಂದ ಉಪದಿಷ್ಟವಾದ ಈ ಪ್ರಮೇಯವು ಯಥಾರ್ಥವೇ ಆಗಿರುತ್ತದೆ. ಹಿಂದೆ ಉಕ್ತರಾದ ಅನೇಕ ಋಷಿಗಳಿಗೆ ನಮ: ಎಂಬ ವಚನದಿಂದ ನಮಸ್ಕರಿಸುತ್ತಾ ಈ ಉಪನಿಷತ್ತನ್ನು ವೇದಪುರುಷನು ಉಪಸಂಹರಿಸುತ್ತಿದ್ದಾನೆ. ಉಕ್ತವಾದ ಈ ಪ್ರಮೇಯದಲ್ಲಿ ಋಷಿಗಳಿಗೆ ಮಾಡುವ ನಮಸ್ಕಾರದಲ್ಲಿ ತಮಗೆ ಆದರವಿದೆ ಎಂದು ತಿಳಿಸುವುದಕ್ಕಾಗಿ 'ನಮಃ ಪರಮಋಷಿಭ್ಯಃ ನಮಃ ಪರಮಋಷಿಭ್ಯಃ' ಎಂದು ಎರಡುಬಾರಿ ಹೇಳಿದ್ದಾರೆ.

ಸಮಸ್ತಗುಣಪೂರ್ಣಾಯ ದೋಷದೂರಾಯ ವಿಷ್ಣವೇ ।
ನಮ: ಶ್ರೀಪ್ರಾಣನಾಥಾಯ ಭಕ್ತಾಭೀಷ್ಟಪ್ರದಾಯಿನೇ ॥

ಭಗವಂತ ಸಮಸ್ತಗುಣಗಳಿಂದ ಪೂರ್ಣನಾಗಿದ್ದಾನೆ. ದೋಷದೂರನಾಗಿದ್ದಾನೆ. ಲಕ್ಷ್ಮೀದೇವಿಗೆ ಮತ್ತು ಮುಖ್ಯಪ್ರಾಣದೇವರಿಗೆ ಸ್ವಾಮಿಯಾಗಿದ್ದಾನೆ. ಭಕ್ತರ ಎಲ್ಲ ಬೇಡಿಕೆಗಳನ್ನು ಪೂರ್ಣಮಾಡುವವನಾಗಿದ್ದಾನೆ. ಇಂತಹ ವಿಷ್ಣುವಿಗೆ ನಮಸ್ಕಾರಗಳು.

ಆಥರ್ವಣೋಪನಿಷದೋ ಭಾಷ್ಯಾದ್ಯುಕ್ತಾರ್ಥಸಂಗ್ರಹಃ ।
ರಾಘವೇಂದ್ರೇಣ ಯತಿನಾ ಕೃತೋ ಮಾಧವತುಷ್ಟಯೇ ॥

ಆಥರ್ವಣೋಪನಿಷತ್ತಿಗೆ ಶ್ರೀರಾಘವೇಂದ್ರಯತಿಗಳಿಂದ, ಭಾಷ್ಯಾದಿಗಳಲ್ಲಿ ಉಕ್ತವಾದ ಅರ್ಥಗಳ ಸಂಗ್ರಹವು ಮಾಡಲ್ಪಟ್ಟಿದೆ. ಇದು ಮಾಧವನ ಸಂತೋಷಕ್ಕೆ ಕಾರಣವಾಗಲಿ.

॥ ಇತಿ ಶ್ರೀರಾಘವೇಂದ್ರಯತಿವಿರಚಿತಃ ಆಥರ್ವಣಖಂಡಾರ್ಥಃ ಸಮಾಪ್ತಃ ॥